ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ಮೊಹಮ್ಮದ್ ಅಲಿ

ಪ್ರೊ. ಶಿವರಾಜ ಪಾಟೀಲ

ಪ್ರಕಟಣೆ

ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ
ವಿಧಾನಸೌಧ, ಬೆಂಗಳೂರು

**MOHAMMED ALI,** Eminent Parlimentarian Series, written by
**Shivaraja Patila** Lecture, # Plot No. 104, Mahant Jyothi, G.D.A. Extension, Gokula Nagar, Shaha Bazar, Gulbarga-585 101 Cell: 93423 52518.
Published by **Karnataka Legislature Library Committee,** Vidhana Soudha, Bangalore-01.

First Edition: 2006 Copies: 2000.
**Printed & Designed by** Government Press, Bangalore.
Page: 218 + 12 Price: 20-00 Rs.

**ಮೊಹಮ್ಮದ್ ಅಲಿ,** ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ, ಲೇಖಕರು:
ಪ್ರೊ. ಶಿವರಾಜ ಪಾಟೀಲ, ಕನ್ನಡ ಉಪನ್ಯಾಸಕರು, ಪ್ಲಾಟ ನಂ.104 'ಮಹಾಂತಜ್ಯೋತಿ' ಜಿ.ಡಿ.ಎ. ಬಡಾವಣೆ, ಗೋಕುಲ ನಗರ, ಶಹ ಬಜಾರ್, ಗುಲಬರ್ಗಾ - 585 101 ಮೊಬೈಲ್ - 93423 52518
ಪ್ರಕಾಶನ ಗ್ರಂಥಾಲಯ ಸಮಿತಿ, ಕರ್ನಾಟಕ ವಿಧಾನ ಮಂಡಲ, ವಿಧಾನಸೌಧ, ಬೆಂಗಳೂರು-560 001.

ಮುದ್ರಣ ಮತ್ತು ವಿನ್ಯಾಸ, ಸರ್ಕಾರಿ ಮುದ್ರಣಾಲಯ, ಬೆಂಗಳೂರು-560 001.
ಮೊದಲ ಮುದ್ರಣ: 2006 ಪ್ರತಿಗಳು: 2,000, ಪುಟ: 218 + 12 ಬೆಲೆ: 20/- ರೂ.

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
# 2005-2006

## ಅಧ್ಯಕ್ಷರು

**ಸಚ್ಚಿದಾನಂದ ಲ.ಖೋತ**
ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

## ಸದಸ್ಯರು

**ಕೃಷ್ಣ**
ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ವಿಶ್ವನಾಥ್ ಪಾಟೀಲ್ ಹೆಬ್ಬಾಳ್**
ವಿಧಾನಸಭಾ ಸದಸ್ಯರು ಹಾಗೂ
ಉಪ ಸಮಿತಿಯ ಅಧ್ಯಕ್ಷರು

**ಜಿ.ಎಸ್. ಗಡ್ಡದೇವರ ಮಠ**
ವಿಧಾನಸಭಾ ಸದಸ್ಯರು

**ಆರ್. ಧ್ರುವನಾರಾಯಣ್**
ವಿಧಾನಸಭಾ ಸದಸ್ಯರು

**ಕಳಕಪ್ಪ ಜಿ. ಬಂಡಿ**
ವಿಧಾನಸಭಾ ಸದಸ್ಯರು

**ಡಾ|| ವೀರಬಸವಂತರೆಡ್ಡಿ ಮುದ್ನಾಳ್**
ವಿಧಾನಸಭಾ ಸದಸ್ಯರು

**ಡಾ. ಚಂದ್ರಶೇಖರ ಬಿ. ಕಂಬಾರ**
ವಿಧಾನ ಪರಿಷತ್ ಸದಸ್ಯರು

**ಶ್ರೀನಾಥ್**
ವಿಧಾನ ಪರಿಷತ್ ಸದಸ್ಯರು

**ವೈ.ಎ. ನಾರಾಯಣಸ್ವಾಮಿ**
ವಿಧಾನ ಪರಿಷತ್ ಸದಸ್ಯರು

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ – ಸಂಪಾದಕ ವರ್ಗ

### ಕರ್ನಾಟಕ ವಿಧಾನ ಮಂಡಲ

| | |
|---|---|
| ಡಿ'ಸೋಜ ರಾಬಿನ್‌ಸನ್ | ಪ್ರಧಾನ ಕಾರ್ಯದರ್ಶಿ |

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಎಸ್.ಬಿ. ಪಾಟೀಲ್ | ಅಪರ ಕಾರ್ಯದರ್ಶಿ |
| ಕೆ.ಎನ್. ಪ್ರಭಾಕರರಾವ್ | ಜಂಟಿ ಕಾರ್ಯದರ್ಶಿ |
| ಪಿ. ಓಂಪ್ರಕಾಶ್ | ಸಭಾಧ್ಯಕ್ಷರ ಕಾರ್ಯದರ್ಶಿ |
| ಎಸ್. ಬಸವರಾಜ | ಉಪ ಕಾರ್ಯದರ್ಶಿ |
| ಕೆ. ನೂರ್ ಮಹಮದ್ | ಅಧೀನ ಕಾರ್ಯದರ್ಶಿ |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ಜಯಶಂಕರಮೂರ್ತಿ | ಕಾರ್ಯದರ್ಶಿ |
| ಕೃಷ್ಣೇಗೌಡ | ಸಭಾಪತಿಯವರ ಕಾರ್ಯದರ್ಶಿ |

### <u>ಸಂಪಾದಕರು</u>

**ಎಲ್.ಎನ್. ಮುಕುಂದರಾಜ್**

ಕನ್ನಡ ಉಪನ್ಯಾಸಕರು

(ಅನ್ಯಕರ್ತವ್ಯದ ಮೇರೆಗೆ)

# ಮುನ್ನುಡಿ

17 ಜುಲೈ 2006

ರಾಷ್ಟ್ರದ ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ।। ರಾಮಮನೋಹರ ಲೋಹಿಯಾ, ಡಾ।। ಬಿ.ಆರ್. ಅಂಬೇಡ್ಕರ್, ಡಾ।। ಶಾಂಪ್ರಸಾದ್ ಮುಖರ್ಜಿ, ಡಾ।। ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ಹಾಗೆಯೇ, ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯಪ್ರವೃತ್ತರಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ, ಡಾ॥ ಲಂಕಾ ಸುಂದರಂ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

ಪ್ರೊ. ಶಿವರಾಜ ಪಾಟೀಲ ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಮೊಹಮ್ಮದ್ ಅಲಿ ಅವರ ಬಗೆಗಿನ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

**ಸಚ್ಚಿದಾನಂದ ಲ.ಖೋತ**
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

**ಕೃಷ್ಣ**
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಲೇಖಕರ ಮಾತು

'ಸಂಸದೀಯ ಪಟುಗಳು' ಮಾಲಿಕೆಯಲ್ಲಿ ಹೈದ್ರಾಬಾದ್ ಕರ್ನಾಟಕದ ಧೀಮಂತ ನಾಯಕ ಮೊಹಮದ ಅಲಿ ಅವರನ್ನು ಕುರಿತು ಪುಸ್ತಕ ಪ್ರಕಟಿಸುತ್ತಿರುವುದು. ಸ್ಮರಣೀಯ ಕಾರ್ಯವಾಗಿದೆ. ಇಂಥ ಯೋಜನೆಗಳು ಯಾವ ಕಾಲಕ್ಕೂ ಪಸ್ತುತ್ಯವಾಗಿವೆ. ವಿಧಾನ ಸಭೆ ಹಾಗೂ ವಿಧಾನ ಪರಿಷತ್ತಿನಲ್ಲಿ ಅವರ ವಾದ ವಿವಾದಗಳು, ಪ್ರಶ್ನೋತ್ತರಗಳು, ಸಮಸ್ಯೆ ಸವಾಲುಗಳು ಒಂದುಕಡೆ ಕ್ರೋಡೀಕರಿಸಿ ವ್ಯವಸ್ಥಿತವಾಗಿ ಹೊಂದಿಸಿ ಜನತೆಗೆ ಮುಟ್ಟುವಂತೆ ಮಾಡುತ್ತಿರುವ ಈ ಯೋಜನೆ ತುಂಬಾ ಯಶಸ್ವಿಯಾಗಿದೆ. ಅನೇಕ ಪ್ರತಿಭಾವಂತರು ಚಿಂತನೆಗೈದು ನಾಡು, ನುಡಿ, ನೆಲ, ಜಲ, ಸಂರಕ್ಷಣೆ ಮಾಡಲು ಅಹೋರಾತ್ರಿ ಶ್ರಮಸಿದ್ದಾರೆ. ಅಂಥವರು ಎತ್ತಿದ ಪ್ರಶ್ನೆಗಳು ಸದನದಲ್ಲಿ ಚರ್ಚೆಯಾಗಿವೆ. ಆ ಚರ್ಚೆಯಿಂದ ಲೋಕ ಕಲ್ಯಾಣಕರವಾದ ಕೆಲಸಗಳಾಗಿವೆ. ಜನಹಿತ ಪರಹಿತಕ್ಕಾಗಿ, ಸಕಲ ಜೀವಾತ್ಮರ ಲೇಸಿಗಾಗಿ ದುಡಿದವರ ಮಾತುಗಳು ಇಲ್ಲಿವೆ. ಇಲ್ಲಿಯ ಚರ್ಚೆಯ ಫಲ ಜನಹಿತ ಜನಸೇವೆ ಜನಾರ್ಧನನ್ ಸೇವೆಯೆಂಬುದು ಮತ್ತು 'ಸರ್ಕಾರದ ಕೆಲಸ ದೇವರ ಕೆಲಸ' ಎಂಬುದು ಅರ್ಥಪೂರ್ಣವಾಗಿದೆ. ಆ ಕೆಲಸವನ್ನು ಶ್ರದ್ಧಾ ಭಕ್ತಿಗಳಿಂದ, ಮತ್ತು ಕಾಯಾ, ವಾಚಾ, ಮನಸಾ, ತ್ರಿಕರಣಪೂರ್ವಕವಾಗಿ ಮಾಡಿದ್ದರಿಂದ ಆ ಮಹಾತ್ಮರು ನಮಗೆ ಆದರ್ಶವಾಗಿ ಕಾಣುತ್ತಾರೆ.

ಲೋಕದಲ್ಲಿ ಸಾರ್ವಜನಿಕ ಜೀವನ ನಡೆಯಿಸುವವರು ಆದರ್ಶವಾಗಿರಬೇಕು ಮತ್ತು ಜನರ ಕಣ್ಣಲ್ಲಿ ದೇವರಾಗಬೇಕು ಜನಸಾಮಾನ್ಯರಂತೆ ಸ್ವಾರ್ಥಿಗಳಾದರೆ, ದೇಶಕ್ಕೆ ಜನತೆಗೆ ಅದರಿಂದ ಯಾವ ಪ್ರಯೋಜನವೂ ಇಲ್ಲ ನಿಸ್ವಾರ್ಥ ಸೇವೆ, ತ್ಯಾಗ ಮತ್ತು ಬಲಿದಾನ ಈ ದೇಶಕ್ಕೆ ಇಂದು ಅತ್ಯವಶ್ಯಕವಾಗಿದೆ.

ಭಾರತ ಬಡರಾಷ್ಟ್ರ ಇಲ್ಲಿಯ ಜನತೆಗೆ ಮೂಲಭೂತ ಬೇಡಿಕೆಗಳಾದ ಅನ್ನ ಅರಿವೆ, ವಸತಿ ಒದಗಿಸಿಕೊಡಲು ಸಾಧ್ಯವಾಗುತ್ತಿಲ್ಲ. ಇಂಥದರಲ್ಲಿ ಹಿಂದುಳಿದ ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ಇನ್ನಷ್ಟು ಕಾಲಿಟ್ಟಲ್ಲಿ ಸಮಸ್ಯೆಗಳು ಉದ್ಭವವಾಗುತ್ತವೆ. ಇಂಥಲ್ಲಿ ಶಾಸಕ ಸಚಿವರಾಗಿ ಒಂದು ಜನ್ಮ ಅಲ್ಲ, ಅನೇಕ ಜನ್ಮಗಳು ಶ್ರಮಿಸಬೇಕಾಗುತ್ತದೆ. ಇಲ್ಲಿ ಮೊಹಮ್ಮದ ಅಲಿಯವರು ಜನಿಸಿ, 1952 ರಿಂದ 1972 ರವರೆಗೆ ಸುಮಾರು ಇಪ್ಪತ್ತು ವರ್ಷಗಳ ಕಾಲ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ. ಅವರ ಒಟ್ಟು ಸೇವೆ ಮತ್ತು ಬದುಕು, ಚಿಂತನೆಗಳ ಮೊತ್ತ ಈ ಕೃತಿಯಾಗಿದೆ. ಅವರ ಸಮಗ್ರ ವ್ಯಕ್ತಿತ್ವವನ್ನು ಪ್ರತಿಬಿಂಬಿಸುವ ಈ ಕೃತಿ ನಮ್ಮ ಪ್ರದೇಶದಲ್ಲಿ ಹೆಚ್ಚು ಜನಪ್ರಿಯವಾಗುವುದರಲ್ಲಿ ಸಂದೇಹವಿಲ್ಲ.

ಈ ಕೃತಿಯನ್ನು ರಚಿಸಲು ನನ್ನ ಮೇಲೆ ವಿಶ್ವಾಸವಿರಿಸಿ ಕರ್ನಾಟಕ ಸರಕಾರದ ವಿಧಾನ ಸೌಧ ಸಚಿವಾಲಯದ ಗ್ರಂಥಾಲಯ ಸಮಿತಿ ಅಧ್ಯಕ್ಷರಾಗಿದ್ದ ವಿ.ಆರ್. ಸುದರ್ಶನ್ ಹಾಗೂ ಈಗಿನ ಸಭಾಪತಿ ಸಚ್ಚಿದಾನಂದ ಲ.ಖೋತ, ಹಾಗೂ ಚಿತ್ತಾಪೂರ ತಾಲ್ಲೂಕಿನ ಶಾಸಕರೂ ಉಪಸಮಿತಿ ಅಧ್ಯಕ್ಷರೂ ಆದ ವಿಶ್ವನಾಥ ಪಾಟೀಲ ಹೆಬ್ಬಾಳರಿಗೂ ಮತ್ತು ಸಮಿತಿಯ ಉಳಿದ ಸದಸ್ಯರಿಗೂ ಹಾಗೂ ಸಂಪಾದಕರಾದ ಪ್ರೊ. ಎಲ್.ಎನ್. ಮುಕುಂದರಾಜ್ ಅವರಿಗೂ ಮತ್ತು ಕೃತಿಯನ್ನು ಸುಂದರವಾಗಿ ಕಾಣುವಂತೆ ಅಕ್ಷರ ಜೋಡಣೆ ಮಾಡಿದ ಬಿ.ಎಂ. ರವಿಕುಮಾರ ಮತ್ತಿತರ ಸರಕಾರಿ ಮುದ್ರಣಾಲಯದ ಸಿಬ್ಬಂದಿಗೂ ವಂದನೆಗಳನ್ನು ಸಲ್ಲಿಸುತ್ತೇನೆ.

ದಿನಾಂಕ:17.7.2006 ಪ್ರೊ. ಶಿವರಾಜ ಪಾಟೀಲ

ಗುಲಬರ್ಗಾ

# ಪರಿವಿಡಿ

## ಅಧ್ಯಾಯ-4

## ಅಧ್ಯಾಯ-5



## ಭಾಗ-3



## ಭಾಗ-4

## ೧. ಮೊಹಮ್ಮದ ಅಲಿ ಕಲಬುರ್ಗಿಯ ಹುಲಿ

ಮೊಹಮ್ಮದ ಅಲಿ ಮೆಹತಾಬ ಅಲಿ ಅವರನ್ನು ಜನ ಸಾಮಾನ್ಯರು ಕಲಬುರ್ಗಿಯ ಹುಲಿ ಎಂದೇ ಕರೆದರು. ಅವರು ತಮ್ಮ ಕೆಲಸ ಕಾರ್ಯಗಳಿಂದ, ಸಂಘಟನೆಯಿಂದ ಹುಲಿಯಂತೆ ಬೆಳೆದಿದ್ದರು. ವೃತ್ತಿಯಿಂದ ವಕೀಲರಾದರೂ ಪ್ರವೃತ್ತಿ ಮಾತ್ರ ಜನ ಸೇವೆಯತ್ತ ಇತ್ತು. ಜನಸೇವೆ ಜನಾರ್ಧನ ಸೇವೆಯೆಂದು ಭಾವಿಸಿದ ಅವರು, ಬಡವರಲ್ಲಿ ದೇವರನ್ನು ಕಂಡರು. ದೀನ ದಲಿತರ ಸೇವೆ ಅಲ್ಲಾನ ಸೇವೆಯೆಂದು ಭಾವಿಸಿದರು. ನಮಾಜ ಮಾಡುವುದಕ್ಕೆ ಮಹತ್ವ ಕೊಟ್ಟಷ್ಟೇ ಜನರ ನೋವು-ನಲಿವುಗಳನ್ನು, ಸಮಸ್ಯೆಗಳನ್ನು ಆಲಿಸುವುದಕ್ಕೆ ಮಹತ್ವ ಕೊಟ್ಟರು. ಆ ಸಮಸ್ಯೆಗೆ ಪರಿಹಾರವನ್ನೂ ನೀಡುತ್ತಿದ್ದರು. ತಮಗೆ ಜನತೆ ಕೊಟ್ಟ ಅಧಿಕಾರ ದೇವರು ಕೊಟ್ಟ ವರವೆಂದು ಭಾವಿಸಿದರು. ಅದು ಜನಸೇವೆಗೆ ಮೀಸಲಿಡಬೇಕೆಂಬ ತಿಳುವಳಿಕೆಯುಳ್ಳವರಾಗಿದ್ದರು. ಹೀಗಾಗಿ ಕಾಯಾ-ವಾಚಾ-ಮನಸಾ ಹೀಗೆ ತ್ರಿಕರಣ ಪೂರ್ವಕವಾಗಿ ಸೇವೆ ಸಲ್ಲಿಸಿದರು. ಅಧಿಕಾರವಿರುವುದು ಮೋಜು-ಮಜಾ ಮಾಡಲಿಕ್ಕೆ ಅಲ್ಲ. ಜನ ಸೇವೆಗಾಗಿ ಎಂಬುದನ್ನು ಅರಿತುಕೊಂಡಿದ್ದರು. ಅದನ್ನು ತಮ್ಮ ವೈಯುಕ್ತಿಕ ಹಿತಾಸಕ್ತಿಗಾಗಿ ತಮ್ಮ ಬೆಳವಣಿಗೆಗಾಗಿ, ಸ್ವಾರ್ಥಕ್ಕಾಗಿ ಬಳಸದೆ, ಲೋಕ ಕಲ್ಯಾಣಕ್ಕಾಗಿ ರಾಜ್ಯದ ಸಮಗ್ರ ಅಭಿವೃದ್ಧಿಗಾಗಿ ಬಳಸಿದ ಅನುಭವಿ ಹಿರಿಯ ರಾಜಕಾರಣಿಯಾಗಿದ್ದರು. ಜಗತ್ತಿನ ಎಲ್ಲ ಜನರ ಕಣ್ಣೀರು ಅವರಿಗೆ ಒರೆಯಿಸಲಿಕ್ಕಾಗದಿದ್ದರೂ, ತಮ್ಮ ಮನೆಗೆ ಬಂದು ದುಃಖ ತೋಡಿಕೊಂಡವರ ಕಣ್ಣೀರಂತೂ ಖಂಡಿತಾ ಒರೆಯಿಸಿ ಕಳುಹಿಸಿದ್ದಾರೆ. ಹೀಗಾಗಿ ಮಹಮದ ಅಲಿಯವರು ಬಹುಕಾಲ ಜನ ಮನದಲ್ಲಿ ನೆಲೆ ನಿಂತರು. ಜನಪ್ರಿಯ ಹಾಗೂ ಜನಾನುರಾಗಿ ವ್ಯಕ್ತಿಯಾಗಿ ಉಳಿದರು.

ಕಲಬುರ್ಗಿಯನ್ನು ಕಲ್ಯಾಣವಾಗಿಸಲು, ಕಲ್ಯಾಣ ರಾಷ್ಟ್ರ ನಿರ್ಮಾಣ ಮಾಡಲು ಸಾಕಷ್ಟು ಶ್ರಮಿಸಿದರು. ಆ ದಿಸೆಯಲ್ಲಿ ಕೆಲಸ ಮಾಡಿದರು . ಅವರಿಗೆ ಸಾಮಾನ್ಯ ಕೂಲಿಕಾರನಿಂದ ಹಿಡಿದು ರಾಷ್ಟ್ರ ನಾಯಕರವರೆಗೆ ಸಂಪರ್ಕವಿತ್ತು. ಎಷ್ಟೊಂದು ಎತ್ತರಕ್ಕೆ ಬೆಳೆದಿದ್ದರೆಂದರೆ ಮುಂದಿನ ದಿನಗಳಲ್ಲಿ ಮುಖ್ಯ ಮಂತ್ರಿಯಾಗುವಷ್ಟು ಎತ್ತರಕ್ಕೆ ತಲುಪಿದ್ದರು. ಆದರೆ ಅವರಿಗೆ ಆಯುಷ್ಯ ಆರೋಗ್ಯ ಸಂಪತ್ತುಗಳು ಪೂರಕವಾಗಲಿಲ್ಲ. ಹೀಗಾಗಿ ಮುಖ್ಯ ಮಂತ್ರಿಯಾಗುವ ಯೋಗ ಕೂಡಿ ಬರಲಿಲ್ಲ. ಸಾವಿನ ಕೊನೆಯ ಗಳಿಗೆಯವರೆಗೂ ನಗುತ್ತ, ಪ್ರೀತಿಯಿಂದ ಮಾತನಾಡುತ್ತ, ಹೃದಯಾಘಾತಕ್ಕೆ ಒಳಗಾಗಿ ಕೊನೆಯುಸಿರೆಳೆದರು. ಅಲ್ಲಿಗೆ ಕಲಬುರ್ಗಿಯ ನಾಯಕನ ಅಂತಿಮ ಕತೆ ಮುಗಿದು ಹೋಯಿತು. ಪರಮ ಶ್ರೇಷ್ಠ ನಾಯಕನ ಕೊನೆಯ ದೃಶ್ಯದ

ಚರಮಗೀತೆಯನ್ನು ಸರಕಾರಿ ವಾದ್ಯಗಳು ನುಡಿಸಿದವು. ಕರ್ನಾಟಕ ಸರಕಾರದ ಸಕಲ ಮರ್ಯಾದೆಗಳೊಂದಿಗೆ ಮಹಮದಲಿ ಸಾಹೇಬರ ಅಂತಿಮ ಸಂಸ್ಕಾರವಾಯಿತು. ಕಲಬುರ್ಗಿ ಜನ ಕಣ್ಣೀರು ಸುರಿಸಿ, ಸಾಹೇಬರಿಗೆ ಅಶ್ರುತರ್ಪಣ ಅರ್ಪಿಸಿದರು. ಕಲಬುರ್ಗಿಯಲ್ಲಿ ಮತ್ತು ರಾಜಧಾನಿಯಲ್ಲಿ ಶ್ರದ್ಧಾಂಜಲಿ ಸಭೆಗಳು ನಡೆದವು. ಅವರ ಅಗಲಿಕೆ ಕರ್ನಾಟಕಕ್ಕೆ ಹಾಗೂ ಕಲಬುರ್ಗಿ ರಾಜಕೀಯ ವಲಯದಲ್ಲಿ ತುಂಬಲಾರದ ನಷ್ಟವೆಂದು ವರ್ಣಿಸಲಾಯಿತು. ಅಪರೂಪದ ರಾಜಕಾರಣಿ, ಬಡವರ ಬಂಧು, ದೀನ ದಲಿತರ ಕಣ್ಮಣಿ, ಧೀಮಂತ ನಾಯಕ ಎಂದು ಅವರನ್ನು ವರ್ಣಿಸಲಾಯಿತು. ಇದು ಮಹಮ್ಮದಲಿ ಸಾಹೇಬರ ಬದುಕಿನ ರೀತಿ ಮತ್ತು ವರ್ಚಸ್ಸಾಗಿತ್ತು.

ಅವರು **ಈ** ಜಗತ್ತನ್ನು ಅಗಲಿ ಹೋದಾಗ ಕೋಟಿಗಟ್ಟಲೆ ಆಸ್ತಿ ಬಿಟ್ಟು ಹೋಗಲಿಲ್ಲ. ಕೇವಲ ಒಬ್ಬ ಮಗಳು, ಮಡದಿಯನ್ನು ಮಾತ್ರ ಬಿಟ್ಟಿದ್ದರು. ಅವರಿಗೆ ವಾಸಿಸಲೊಂದು ಮನೆ ಮತ್ತು ಸ್ವಲ್ಪ ಭೂಮಿ ಬಿಟ್ಟು ಹೋಗಿದ್ದನ್ನು ಕಾಣುತಿತ್ತು. ಇಂದಿಗೂ ಹಳೆ ಮಾದರಿಯ ಹಂಚಿನ ಮನೆಯಲ್ಲಿ ಅವರ ಮಗಳು ಅಳಿಯ ವಾಸಿಸುತ್ತಿದ್ದಾರೆ. ಮಡದಿ ಇತ್ತೀಚೆಗೆ ಮರಣ ಹೊಂದಿದರು. ಆದರೆ ಅವರ ನಾಯಕತ್ವ, ಸಂಘಟನೆ, ಹೋರಾಟ ಮಾಡಿದ ಸೇವೆ ಅಜರಾಮರವಾಗಿವೆ. ಕಲಬುರ್ಗಿ ಜಿಲ್ಲೆಯಲ್ಲಿ ಕಾಂಗ್ರೆಸ್ಸಿಗೆ ಭದ್ರ ಬುನಾದಿ ಹಾಕಿದವರೆ ಮಹಮ್ಮದಲಿಯವರೆಂದು ಹೇಳಿದರೆ ತಪ್ಪಾಗಲಾರದು.

## ೨ ನಡೆದು ಬಂದ ದಾರಿ.

**ಮೊ**ಹಮ್ಮದ ಅಲಿ ಮೆಹತಾಬ ಅಲಿ ಎಂಬುದು ಅವರ ಪೂರ್ಣ ಹೆಸರು, ಗುಲ್ಬರ್ಗಾದ ಸ್ಟೇಷನ್ ಏರಿಯಾದಲ್ಲಿ ವಾಸವಾಗಿದ್ದರು. ಮೆಹತಾಬ ಅಲಿ ಕಂಪೌಂಡ್ ಅವರ ಅಧಿಕೃತ ನಿವಾಸವಾಗಿತ್ತು. ತಂದೆ-ತಾಯಿ, ಸಹೋದರ ಸಹೋದರಿಯರ ಜೊತೆ ಸಂತೋಷದಿಂದ ಬಾಳುತ್ತಿದ್ದರು. ತಂದೆಯನ್ನು ಕಳೆದುಕೊಂಡ ಮೇಲೆ **ಮೊ**ಹಮ್ಮದ ಅಲಿ ಸಾಹೇಬರು ತಾಯಿ ಮರಿಯಂ ಬೇಗಂರಲ್ಲಿಯೇ ತಂದೆಯ ಪ್ರೀತಿಯನ್ನು ಪಡೆದರು ತಂದೆ ನೀನು ತಾಯಿ ನೀನು, ಬಂಧು ನೀನು ಬಳಗ ನೀನು ನೀನಲ್ಲದೆ ನನಗೆ ಮತ್ತಾರೂ ಇಲ್ಲವೆಂದು ಮಾತೃ ಪ್ರೇಮ ಮೆರೆದರು. ತಾಯಿ ಮರಿಯಂ ಬೇಗಂ ಸಹ ಅಷ್ಟೇ ಪ್ರೀತಿಯಿಂದ ಮಹಮ್ಮದ ಅಲಿಯವರನ್ನು ಕಷ್ಟಪಟ್ಟು ಓದಿಸಿದರು.ವಕಾಲತ್ತು ಪದವಿ ಪಡೆಯುವಂತೆ ಮಾಡಿದರು.ಮಗ ಓದಿ ವಿದ್ಯಾವಂತನಾಗಿ ವಕೀಲ ವೃತ್ತಿ ಪ್ರಾರಂಭಿಸಿದಾಗ ತಾಯಿ ಕಣ್ತುಂಬಾ ನೋಡಿ ಸಂತೋಷಪಟ್ಟರು. ಮನೆಗೆ ಹಿರಿಯ ಮಗನಾದರೆ, ಮನೆಗೆ ನಡುಗಂಬವಾದರೆ ತುಂಬಾ ಜವಾಬ್ದಾರಿಗಳು ಹೊರಬೇಕಾಗುತ್ತದೆ. ಈ ಅನಿವಾರ್ಯತೆ **ಮೊ**ಹಮ್ಮದ ಅಲಿ ಸಾಹೇಬರ ಮೇಲೆ

ಬಿದ್ದಿತು. ಅವರು ಹಿರಿಯ ಮಗನಾಗಿ ಹಿರಿಯಣ್ಣನ ಸ್ಥಾನದಲ್ಲಿದ್ದು ಎಲ್ಲ ಸಹೋದರ, ಸಹೋದರಿಯರಿಗೆ ಮಾರ್ಗದರ್ಶನ ಮಾಡಿದರು. ತುಂಬು ಕೌಟುಂಬಿಕ ಜೀವನದ ರೂವಾರಿಯಾದರು. ತಂದೆಯ ಸ್ಥಾನ ತುಂಬಿದರು. ಇಂದು ಇವರ ಸಹೋದರ ಮಹಮ್ಮದ ಭಾಷ್ಯಂ ಅಲಿಯವರು ಪ್ರಾಧ್ಯಾಪಕರಾಗಿದ್ದಾರೆ. ಮಹಮ್ಮದ ಖುರ್ಷಿದ ಅಲಿಯವರು ವಕೀಲರಾಗಿದ್ದಾರೆ. ಮಹಮ್ಮದ ಮೋಜಮ್ ಅಲಿಯವರು ಗುಲಬರ್ಗಾದಲ್ಲಿ ವಾಸಿಸಿದ್ದಾರೆ. ಹೀಗೆ ಅವರ ಸಹೋದರರು ಒಂದೊಂದು ಕ್ಷೇತ್ರದಲ್ಲಿ ಸಾಧನೆ ಮಾಡಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ.

ಮೊಹಮ್ಮದ ಅಲಿ ಸಾಹೇಬರಿಗೆ ಮೂರು ಜನ ಸಹೋದರರಿರುವಂತೆ, ಐದು ಜನ ಸಹೋದರಿಯರು ಇದ್ದಾರೆ. ಅವರೆಲ್ಲ ಇಂದು ಮದುವೆಯಾಗಿ ತಮ್ಮ ತಮ್ಮ ಮನೆಗಳಲ್ಲಿ ಗೃಹಸ್ಥಾಶ್ರಮ ಜೀವನ ಸ್ವೀಕರಿಸಿ, ನೆಮ್ಮದಿಯಿಂದ ಕಾಲ ಕಳೆಯುತ್ತಿದ್ದಾರೆ. ಅಹ್ಮದಬಿ ಬೇಗಂ, ಮಹಿಮೂದಾ ಬೇಗಂ, ರಷಿದುನ್ನಿಸಾಬೇಗಂ, ಬಷಿರುನ್ನಿಸಾ ಬೇಗಂ, ಅಶ್ರಫುನ್ನಿಸಾ ಬೇಗಂ, ಹೀಗೆ ಸಹೋದರಿಯರು. ಇಲ್ಲಿ ಬೇಗಂ ಎಂಬುದು ಖಾನ್ದಾನ್ ಮನೆತನದ ಮಹಿಳೆಯರಿಗೆ ಕರೆಯುವ ಪದ್ಧತಿ. ಇನ್ನೊಂದರ್ಥದಲ್ಲಿ ಮರ್ಯಾದೆ ಸೂಚಕ ಪದ ಮತ್ತು ರಾಜ ಮನೆತನ ಸಿರಿವಂತ ಕುಟುಂಬದ ಮಹಿಳೆಯರಿಗೆ ಬೇಗಂ ಎಂದು ಗೌರವ ಸೂಚಕವಾಗಿ ಸಂಬೋಧಿಸುವುದುಂಟು. ಗುಲಬರ್ಗಾದಲ್ಲಿ ಮೊಹಮ್ಮದ ಅಲಿ ಸಾಹೇಬರು ಒಬ್ಬ ಖಾನ್ದಾನ್ ಮನೆತನದ ಸದ್ಗೃಹಸ್ಥ ಕುಟುಂಬದ ಯಜಮಾನರಾಗಿದ್ದರು. ಅವರ ಮನೆ ಕಂಪೌಂಡಿಗೆ ಮೆಹತಾಬ ಅಲಿ ಕಂಪೌಂಡ ಎಂದು ನಾಮಕರಣ ಮಾಡಿದ್ದರು.

ಮೊಹಮ್ಮದ ಅಲಿಯವರು ಜನಿಸಿದ್ದು 1919ರಲ್ಲಿ. ಗುಲಬರ್ಗಾ ಅವರ ಜನ್ಮಭೂಮಿ, ಮತ್ತು ಕರ್ಮಭೂಮಿ ಎರಡೂ ಆಗಿತ್ತು. ಒಂದು ಸುಸಂಸ್ಕೃತ ಹಾಗೂ ಅನುಕೂಲ ಸ್ಥಿತಿಯಿರುವ ಕುಟುಂಬ ಅವರದಾಗಿತ್ತು. ಅವರ ಪೂರ್ವಜರು ದೇಶಕ್ಕಾಗಿ ಹೋರಾಡಿದವರಾಗಿದ್ದರು. ಹೀಗಾಗಿ ದೇಶ, ಭಾಷೆ, ರಾಜಕೀಯ, ಪ್ರಜ್ಞೆ ಅವರಿಗೆ ಸಹಜವಾಗಿ ಬಂದಿತ್ತು. ನೆಲ, ಜಲ, ಪ್ರದೇಶದ ಅಭಿಮಾನ ಅವರ ರಕ್ತದಲ್ಲಿ ಉಕ್ಕಿ ಹರಿಯುತ್ತಿತ್ತು. ಹೀಗಾಗಿ ದೇಶ ಪ್ರೇಮ ಅವರ ಧಮನಿ ಧಮನಿಗಳಲ್ಲಿ ತುಂಬಿತ್ತು. ಇವರ ಪೂರ್ವಜರು ಹೈದರಾಬಾದನಲ್ಲಿ ವಾಸಿಸಿದ್ದರು. ಅವರು ಜಮಿನ್ದಾರರಾಗಿದ್ದರು. ಮತ್ತು ಪಟೇಲ್ ಕುಟುಂಬವೆಂಬ ಗೌರವಕ್ಕೆ ಒಳಗಾಗಿದ್ದರು. ತುಂಬಾ ಪ್ರಭಾವಿ ಮತ್ತು ದರ್ಪದಿಂದ ಬಾಳುತ್ತಿದ್ದ ಪಟೇಲರು ತುರೇಭಾಸ ಖಾನ್ ಎಂಬ ನಾಮದಿಂದ ಸುಪ್ರಸಿದ್ಧರಾಗಿದ್ದರು. ಅವರು 1857ರಲ್ಲಿ ಹೈದರಾಬಾದನಲ್ಲಿ ಜರುಗಿದ ಬ್ರಿಟಿಷ ರೆಸಿಡೆನ್ಸಿ ದಾಳಿಯಲ್ಲಿ

ಮುಂದಾಳತ್ವ ವಹಿಸಿದ್ದರು. ಈ ಕ್ರಾಂತಿಯಲ್ಲಿ ಬ್ರಿಟಿಷರು ತುರೇಭಾಸ್ ಖಾನರನ್ನು ಗಲ್ಲಿಗೇರಿಸಿದರು. ಅನಂತರದ ದಿನಗಳಲ್ಲಿ ಅವರ ಕುಟುಬಂದ ಸದಸ್ಯರು, ಹೈದರಾಬಾದ ತೊರೆದು ಗುಲಬರ್ಗಾದತ್ತ ವಲಸೆ ಬಂದರು. ಈ ಕುಟುಂಬ ಗುಲಬರ್ಗಾಕ್ಕೆ ಬಂದು ನೆಲೆಸಿ, ಸುಮಾರು ಒಂದು ಶತಮಾನ ಕಾಲ ಸಂದಿತು. ಆಗ ಭಾರತಕ್ಕೆ ಸ್ವಾತಂತ್ರ್ಯ ದೊರೆಯಿತು. ಸ್ವತಂತ್ರ ಭಾರತದ ಪ್ರಜೆಗಳಾದ ಮೇಲೆ ಮೊಹಮ್ಮದ ಅಲಿ ಸಾಹೇಬರು ಸಕ್ರಿಯ ರಾಜಕೀಯಕ್ಕೆ ತೊಡಗಿದರು. ಶಾಸಕರಾಗಿ, ಸಚಿವರಾಗಿ ಗುಲಬರ್ಗಾ ಜಿಲ್ಲೆಯ ಶ್ರೇಯೋಭಿವೃದ್ಧಿಗಾಗಿ ಶ್ರಮಿಸಿದರು. ಆಳುವ ಬ್ರಿಟಿಷರ ದಬ್ಬಾಳಿಕೆಯಿಂದ ಮುಕ್ತವಾದ, ನಿಜಾಮ ಸರಕಾರದಿಂದ ಬಿಡುಗಡೆಗೊಂಡ ಕಲಬುರ್ಗಿಯ ಜನತೆಯ ಕಲ್ಯಾಣವನ್ನು ತಮ್ಮ ಗುರಿಯಾಗಿಸಿಕೊಂಡರು. ಗುಲಬರ್ಗಾದಲ್ಲಿ ಓದು, ಹೈದ್ರಾಬಾದ ಉಸ್ಮಾನಿಯಾ ವಿಶ್ವವಿದ್ಯಾಲಯದಿಂದ ಪದವಿ ಸಂಪಾದಿಸಿದ ಮೊಹಮ್ಮದ ಅಲಿಯವರು 1942ರಲ್ಲಿ ಅಧ್ಯಯನ ಮುಗಿಸಿ ಹೊರಬಂದರು. ಇವರೊಬ್ಬ ಪ್ರತಿಷ್ಠಿತ ಓಟಗಾರರು ಮತ್ತು ಆಟಗಾರರು ಎಂಬುದು ವಿದ್ಯಾರ್ಥಿ ದೆಸೆಯಲ್ಲಿ ಪಡೆದ ಪ್ರಮಾಣ ಪತ್ರಗಳು ನೋಡಿದಾಗ ನಮಗೆ ತಿಳಿದು ಬರುತ್ತದೆ. ಉಸ್ಮಾನಿಯಾ ವಿಶ್ವವಿದ್ಯಾಲಯದ ಅತ್ಯುತ್ತಮ ಬ್ಲ್ಯಾ ಹಾಕಿ ಪಟುವಾಗಿದ್ದರು. ವಿದ್ಯಾರ್ಥಿ ದೆಸೆಯಲ್ಲಿ ಅತ್ಯುತ್ತಮ ಆಟಗಾರರಾಗಿದ್ದರಂತೆ, ಮುಂದೆ ಸಾರ್ವಜನಿಕ ಜೀವನದಲ್ಲಿ ರಾಜಕೀಯ ಪಟುವಾಗಿದ್ದರು. ಅವರಿಗೆ ವಿದ್ಯಾರ್ಥಿ ಜೀವನದಲ್ಲಿಯೇ ರಾಷ್ಟ್ರ ಪ್ರೇಮ, ದೇಶ ಭಕ್ತಿ ತುಂಬಿ ತುಳುಕುತ್ತಿತ್ತು. ಹೀಗಾಗಿ ಜಾತಿ ಭಾವನೆ, ಕೋಮು ಭಾವನೆ, ಸಣ್ಣತನ ಅವರ ಹತ್ತಿರಕ್ಕೆ ಸುಳಿಯಲಿಲ್ಲ. ಗುಲಬರ್ಗಾ ನ್ಯಾಯಾಲಯದಲ್ಲಿ ವಕೀಲರ ಸಂಘದ ಕಾರ್ಯದರ್ಶಿಗಳಾಗಿ, ಅಚ್ಚುಕಟ್ಟಾಗಿ ಕಾರ್ಯನಿರ್ವಹಿಸಿದ್ದಾರೆ. ಎಷ್ಟೋ ವರ್ಷಗಳ ಕಾಲ ಅವರು ಆ ಕಾರ್ಯ ನಿರ್ವಹಿಸಿ ಯಶಸ್ವಿಯಾದರು. ಮುಂದೆ 1945ರಲ್ಲಿ ಕಾಂಗ್ರೆಸ್ ಪಕ್ಷಕ್ಕೆ ಸೇರ್ಪಡೆಯಾಗಿ, ಅತಿ ಮಹತ್ವದ ಸ್ಥಾನದಲ್ಲಿ ಕಾಣಿಸಿಕೊಂಡರು. ಹೈದ್ರಾಬಾದ ಪ್ರದೇಶದ ನಾಗರಿಕ ಕ್ರಿಯಾ ಸಮಿತಿಗೆ ಅಧ್ಯಕ್ಷರಾಗಿ ಆಯ್ಕೆಗೊಂಡರು. ಭಾಷಾವಾರು ಪ್ರಾಂತಗಳ ರಚನೆಗಾಗಿ ಮತ್ತು ಕರ್ನಾಟಕ ಏಕೀಕರಣಕ್ಕಾಗಿ ಹೋರಾಟ ಪ್ರಾರಂಭಿಸಿದರು. ಅವರ ಸಮಗ್ರ ಹೋರಾಟ, ಜನರ ಸಮಸ್ಯೆಗಳಿಗೆ ಸ್ಪಂದಿಸಿದ ರೀತಿ ಅವರನ್ನು ಜನಪ್ರಿಯ ನಾಯಕನನ್ನಾಗಿ ರೂಪಿಸಿತು. ಅವರ ಕ್ರೀಯಾಶೀಲ ಹೋರಾಟದ, ಸಾರ್ವಜನಿಕ ಜೀವನದಲ್ಲಿ ಕಳೆದ ಸಮಯ ಬಹಳ ಮೌಲಿಕವಾದುದು. ಇದರಿಂದಾಗಿ ಅವರಿಗೆ ವಕಾಲತ್ತು ಮಾಡಲು ಸಮಯ ಸಿಗಲಿಲ್ಲ. ಅವರ ವೈಯುಕ್ತಿಕ ಆದಾಯಕ್ಕೆ ಹೊಡೆತ ಬಿತ್ತು. ಮತ್ತು ಸಂಪೂರ್ಣ ಸಮರ್ಪಣಾ ಭಾವದಿಂಧ ಸಾರ್ವಜನಿಕರ ಕುಂದುಕೊರತೆಗಳನ್ನು ನಿವಾರಿಸುವಲ್ಲಿ ಮಾಡಿದ ಕೆಲಸ ಪಟ್ಟ ಶ್ರಮ ಅವಿಸ್ಮರಣೀಯ. ಹೈದರಾಬಾದ ಕರ್ನಾಟಕ ಪ್ರದೇಶದ

ಅಭಿವೃದ್ಧಿಗಾಗಿ ತಮ್ಮ ಸಂಪೂರ್ಣ ಶಕ್ತಿಯನ್ನು ವ್ಯಯಿಸಿ, ದುಡಿದು ಎಲ್ಲ ಕ್ಷೇತ್ರಗಳಲ್ಲಿ ಹೆಸರು ಮಾಡಿದರು. ಮೊಹಮ್ಮದ ಅಲಿ ಮನೆ ಮಾತಾದರು. ತತ್ಪರಿಣಾಮವಾಗಿ ಅವರು 1952ರಲ್ಲಿ ಹೈದರಾಬಾದ ವಿಧಾನಸಭೆಗೆ, ಗುಲಬರ್ಗಾ ಮತಕ್ಷೇತ್ರದಿಂದ ಶಾಸಕರಾಗಿ ಆಯ್ಕೆಗೊಂಡರು. ಮುಂದೆ ಇನ್ನೂ ಅವರಿಗೆ ಬಲ ಬಂದಿತು. ಹೈದರಾಬಾದ ಸರಕಾರದಿಂದ ಅನೇಕ ಯೋಜನೆಗಳು ತಂದು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸಿದರು. ಮುಂದೆ 1956ರಲ್ಲಿ ಭಾಷಾವಾರು ಪ್ರಾಂತಗಳು ರಚನೆಗೊಂಡ ಮೇಲೆ, ಮೈಸೂರು ರಾಜ್ಯಕ್ಕೆ ಗುಲಬರ್ಗಾ ಸೇರ್ಪಡೆಗೊಂಡ ಮೇಲೆ, 1957ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ, ಗುಲಬರ್ಗಾ ವಿಧಾನಸಭೆ ಮತ ಕ್ಷೇತ್ರದಿಂದ ಮೈಸೂರು ರಾಜ್ಯದ ವಿಧಾನ ಸಭೆಗೆ ಶಾಸಕರಾಗಿ ಮರು ಆಯ್ಕೆಗೊಂಡರು. ಆಗ ಮೈಸೂರು ರಾಜ್ಯದ ಅಬಕಾರಿ ಹಾಗೂ ಗ್ರಾಮೀಣ ಉದ್ಯಮಗಳ ಕೈಗಾರಿಕಾ ಸಚಿವರಾಗಿ ಸೇವೆ ಸಲ್ಲಿಸತೊಡಗಿದರು. 1958ರವರೆಗೆ ಸಚಿವರಾಗಿ ಸಲ್ಲಿಸಿದ ಸೇವೆ ಸ್ಮರಣೀಯ. ನಂತರದ ದಿನಗಳಲ್ಲಿ ಸಂಘಟನೆ ಮತ್ತು ಹೋರಾಟದಲ್ಲಿ ತೊಡಗಿಸಿಕೊಂಡರು. ಜಿಲ್ಲಾ ಕಾಂಗ್ರೆಸ್ ಕಮೀಟಿ ಕಾರ್ಯದರ್ಶಿಗಳಾಗಿ ಮತ್ತು ಬಹುಕಾಲ ವರ್ಷಗಳ ಕಾಲ ಜಿಲ್ಲಾ ಕಾಂಗ್ರೆಸ್ ಕಮೀಟಿ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಅವರು ಗುಲಬರ್ಗಾ ಜಿಲ್ಲೆಯ ಕಾಂಗ್ರೆಸ್ ಪಕ್ಷ ಕಟ್ಟಿದ ರೀತಿ ನೀತಿ ಇಂದಿಗೂ ಆದರ್ಶ ಹಾಗೂ ಮಾದರಿಯ. ಕಲಬುರ್ಗಿ ಕಾಂಗ್ರೆಸನ ಭದ್ರ ಕೋಟೆಯೆನ್ನುವ ಮಟ್ಟಕ್ಕೆ ತಂದರು. ಈ ಅಪೂರ್ವ ಸಾಧನೆಯ ಫಲವೇ ಅವರು ಪ್ರದೇಶ ಕಾಂಗ್ರೆಸ್ ಕಮೀಟಿ ಅಧ್ಯಕ್ಷರಾಗಿ ಎರಡು ಅವಧಿಗೆ ಆಯ್ಕೆಗೊಂಡರು. ಮತ್ತು ಐದು ವರ್ಷಗಳ ಅವಧಿ ಪೂರ್ಣಗೊಳಿಸಿದರು. ಇವರು ವಿವಿಧ ಕ್ಷೇತ್ರಗಳಲ್ಲಿ ಗಣನೀಯವಾಗಿ ಸೇವೆ ಸಲ್ಲಿಸಿದರು. ಸಾಮಾಜಿಕ, ರಾಜಕೀಯ ಮತ್ತು ಔದ್ಯೋಗಿಕ ಕ್ಷೇತ್ರಗಳಲ್ಲಿ ಕೈಗೊಂಡ ಸಂಘಟನೆ ಅಪೂರ್ವವಾದುದು. ತತ್ಪರಿಣಾಮವಾಗಿ ಇವರು ಸಾರ್ವಜನಿಕ ಲೆಕ್ಕಪತ್ರದ ಅಧ್ಯಕ್ಷರಾಗಿ 1960ರಲ್ಲಿ ಆಯ್ಕೆಗೊಂಡರು. ಇದೆ ಸಮಯಕ್ಕೆ ಮೈಸೂರು ರಾಜ್ಯದ ನಾಲ್ಕನೆಯ ಸಾರ್ವತ್ರಿಕ ಚುನಾವಣೆಗಳು ಬಂದಾಗ ಇವರು ಗುಲಬರ್ಗಾ ವಿಧಾನಸಭೆ ಮತಕ್ಷೇತ್ರದಿಂಧ ಭಾರಿ ಬಹುಮತದಿಂದ ಆಯ್ಕೆಗೊಂಧರು. ಆಗ ಅವರು ಸಾರಿಗೆ, ಪ್ರವಾಸೋದ್ಯಮ ಮತ್ತು ವಸತಿ ಖಾತೆ ಸಚಿವರಾಗಿ ಮಾರ್ಚ 14, 1967ರಲ್ಲಿ ಪ್ರಮಾಣ ವಚನ ಸ್ವೀಕರಿಸಿದರು. 1967 ರಿಂದ 1971ರವರೆಗೆ ಅವಿರತವಾಗಿ, ದಕ್ಷ ಪ್ರಮಾಣಿಕ ಮತ್ತು ಕ್ರಿಯಾಶೀಲ ಸಚಿವರಾಗಿ ಕಾರ್ಯನಿರ್ವಹಿಸಿದರು. ಮುಂದೆ, 1971ರ ಜನವರಿ 29 ರಂದು ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡಿದರು. 1972ರಲ್ಲಿ ಸಾರ್ವತ್ರಿಕ ಚುನಾವಣೆಯಲ್ಲಿ ಕಾಂಗ್ರೆಸ್ ಅಭ್ಯರ್ಥಿಯಾಗಿ ಆಯ್ಕೆಗೊಂಡರು. ಇವರ

ಎದುರಿನಲ್ಲಿದ್ದ ಅನಂತ ಶರ್ಮಾ ಜಯತೀರ್ಥಾಚಾರ್ಯರು, ಗಂಗಾಧರ ನಮೋಶಿಯವರು, ಡಾ. ವಿ.ಪಿ. ದೇವಳಗಾಂವಕರ್ ಅವರು, ಮುಹಮ್ಮದ ಖುರೇಷಿ ಖಾನ್ ಅವರು, ವೀರಣ್ಣ ತಿಮ್ಮಾಜಿಯವರು ಬಿ. ಶಾಮಸುಂದರಜಿಯವರು ಸೋತು ಹೋದರು. ತಮ್ಮ ಸಮೀಪದ ಪ್ರತಿ ಸ್ಪರ್ಧಿ ಅನಂತ ಶರ್ಮಾ ಅವರಿಗಿಂತ 11 ಸಾವಿರ ಮತಗಳ ಅಂತರದ ಗೆಲುವು ಸಾಧಿಸಿದ್ದರು.

## ೩. ವೈವಾಹಿಕ ಜೀವನ

ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವನಿಗೆ ಎನ್ನುವಂತೆ ಮೊಹಮ್ಮದ ಅಲಿ ಅವರ ದಾಂಪತ್ಯ ಜೀವನ ಅತ್ಯಂತ ಸುಖವಾಗಿತ್ತು. ಮನಸ್ಸು ತಿಳಿದುಕೊಂಡು ನಡೆಯುವ ಹೆಂಡತಿ, ಮಾತು ಕೇಳುವ ಮಕ್ಕಳಿದ್ದರೆ ಮನೆ ಯಜಮಾನ ಅತ್ಯಂತ ಸುಖವಾಗಿರುತ್ತಾನೆ. ಹೀಗೆ ಮೊಹಮ್ಮದ ಅಲಿ ಅವರ ಮನಸ್ಸು ತಿಳಿದುಕೊಂಡು ನಡೆಯುವ ಮಡದಿ ವಹಿದುನ್ನಿಸಾ ಬೇಗಂ ಅವರಾಗಿದ್ದರು. ಗಂಡ ಸಾರ್ವಜನಿಕ ಜೀವನದಲ್ಲಿರುವಾಗ ನೂರಾ ಎಂಟು ಹೋರಾಟ, ಸಮಸ್ಯೆ, ಸಂಘಟನೆಯಲ್ಲಿ ತೊಡಗಿರುವಾಗ, ಸಾರ್ವಜನಿಕ ಪ್ರತಿನಿಧಿಯಾಗಿ ಆಯ್ಕೆಯಾದಾಗ ವೈಯುಕ್ತಿಕ ಬದುಕೆಂಬುದೇ ಇರುವುದಿಲ್ಲ. ಹೆಂಡತಿ ಮಕ್ಕಳಿಗೆ ನೀಡಬೇಕಾದ ಪ್ರೀತಿ ನೀಡಲು ಸಾಧ್ಯವಾಗುವುದಿಲ್ಲ. ಒಂದು ರೀತಿಯಲ್ಲಿ ತ್ಯಾಗ ಮತ್ತು ಸೇವೆಯ ಜೀವನ ನಡೆದಿರುತ್ತದೆ. ಸಂಸಾರದಲ್ಲಿದ್ದ ಸನ್ಯಾಸಿಯ ಬದುಕಾಗಿರುತ್ತದೆ. ಇಂಥ ವ್ಯಕ್ತಿಯ ಜೊತೆಯೆ ಬಾಳುವ ಹೆಂಡತಿ ತುಂಬಾ ತ್ಯಾಗಿ ಮತ್ತು ಸಹನ ಶೀಲೆಯಾಗಿರಬೇಕು. ಅತ್ಯಂತ ಆದರ್ಶಮಯಿಯಾಗಿರಬೇಕು. ವಹಿದುನ್ನಿಸಾ ಬೇಗಂ ದೊಡ್ಡಮನೆತನದ ಮಗಳಾಗಿರುವುದರಿಂದ ಮೊಹಮ್ಮದ ಅಲಿಯವರಿಗೆ ತಕ್ಕ ಸತಿಯಾಗಿ, ಅನುಕೂಲೆಯಾಗಿರುವುದರಿಂದ ಅವರು ಅಂಥ ದೊಡ್ಡ ವ್ಯಕ್ತಿಯಾಗಿ, ಯಶಸ್ವಿ ಸಾರ್ವಜನಿಕ ಪ್ರತಿನಿಧಿಯಾಗಿ ಬೆಳೆದು ಬಾಳಲು ಸಾಧ್ಯವಾಯಿತು. ಪ್ರತಿಯೊಬ್ಬ ಯಶಸ್ವಿ ಪುರುಷನ ಹಿಂದೆ ಒಬ್ಬ ಸ್ತ್ರೀ ಇರುತ್ತಾಳಂತೆ ಹಾಗೆ ಮೊಹಮ್ಮದ ಅಲಿ ಅವರ ಯಶಸ್ವಿ ಜೀವನದ ಹಿಂದೆ ಅವರ ಸತಿ ವಹಿದುನ್ನಿಸಾ ಬೇಗಂ ಇದ್ದರು. ಮಹಮ್ಮದಲಿಯವರು ಒಮ್ಮೊಮ್ಮೆ ತಿಂಗಳುಗಟ್ಟಲೆ ಕೆಲಸ ಕಾರ್ಯದ ನಿಮಿತ್ತ ಪ್ರವಾಸದಲ್ಲಿ ರಾಜಕೀಯ ಚಟುವಟಿಕೆಗಳಲ್ಲಿ, ಸಂಘಟನೆ ಹೋರಾಟದಲ್ಲಿ ತೊಡಗಿದಾಗ ಇನಿತು ಬೇಸರಿಸಿಕೊಳ್ಳಲಿಲ್ಲ. ಮೊಹಮ್ಮದ ಅಲಿಯವರಿಗೆ ಮನೆಯೊಂದು ಲಾಡ್ಜಿಂಗ್, ಬೋರ್ಡಿಂಗ್ ಆಗಿತ್ತು. ದಿನದ 16 ರಿಂದ 18 ಗಂಟೆ ಜನರ ಮಧ್ಯದಲ್ಲಿರುತ್ತಿದ್ದರು. ಹೀಗಾಗಿ ಅವರಿಗೆ ವೈಯುಕ್ತಿಕ ಬದುಕೆಂಬುದೇ ಇರುತ್ತಿರಲಿಲ್ಲ. ವಿಶ್ರಾಂತಿ ಪಡೆಯುವಾಗ ಮಾತ್ರ ಮನೆ

ಯಜಮಾನರಾಗಿರುತ್ತಿದ್ದರು. ಇಂಥ ಕಠಿಣತರವಾದ ತಪಸ್ಸಿನಂತಹ ಸಾರ್ವಜನಿಕ ಬದುಕು ನಡೆಯಿಸಿದವರು. ದೇವರು ಅವರಿಗೆ ಉಣಲಿಕ್ಕೆ, ಉಡಲಿಕ್ಕೆ ಬದುಕಲಿಕ್ಕೆ ಕಡಿಮೆ ಮಾಡಿರಲಿಲ್ಲ. ಆದರೂ ವೈಯುಕ್ತಿಕ ಬದುಕು ಸುಖ ಸಂತೋಷಕ್ಕೆ ಕಡಿಮೆ ಸಮಯ ನೀಡಿದರು. ಬೆಚ್ಚನೆಯ ಮನೆಯಾಗಿ, ವೆಚ್ಚಕ್ಕೆ ಹೊನ್ನಾಗಿ, ಇಚ್ಚೆಯನರಿತು ನಡೆಯುವ ಸತಿಯಾಗಿ, ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ ಸರ್ವಜ್ಞ ಎನ್ನುವಂತಿತ್ತು ಅವರ ಬದುಕು.

ಇಸ್ಲಾಂ ಕುಟುಬಂದಲ್ಲಿ ಜನಿಸಿದ ಮೊಹಮ್ಮದಲಿ ಸಾಹೇಬರು, ಸುಖ, ಸಂತೋಷ ಭೋಗದ ಜೀವನದ ಕಡೆ ಗಮನ ಕೊಟ್ಟವರಲ್ಲ. ಸೂಫಿ ಸಂತರಂತೆ ಕಾಣುತ್ತಿದ್ದರು. ಅವರನ್ನು ರಾಜಕೀಯ ಸಂತ, ಸಮಾಜ ಸೇವಕ, ತ್ಯಾಗಮಯಿ, ಸ್ನೇಹ ಜೀವಿ, ಎಂದೆಲ್ಲಾ ಬಣ್ಣಿಸಬಹುದು. ಅಂತಹ ತೆರೆದ ಜೀವನ ಅವರದು. ಸಣ್ಣತನ, ಚಿಲ್ಲರೆ ಗುಣಗಳು ಅವರ ಹತ್ತಿರಕ್ಕೆ ಸುಳಿಯಲಿಲ್ಲ. ವಿಶಾಲ ಮನೋಭಾವನೆಯುಳ್ಳವರು. ಯಾರೇ ಬರಲಿ ಪ್ರೀತಿಯಿಂದ ಕರೆದು ಮಾತನಾಡಿಸುತ್ತಿದ್ದರು. ಮನೆಗೆ ಬಂದವರ ಸಮಸ್ಯೆಯನ್ನು ಚಿತ್ತಕೊಟ್ಟು ಆಲಿಸುತ್ತಿದ್ದರು. ಒಬ್ಬ ಒಳ್ಳೆಯ ರಾಜಕಾರಣಿ ಮಾಡಬೇಕಾದ ಕೆಲಸವೆಂದರೆ ಜನಗಳ ಸಮಸ್ಯೆ ಪರಿಹರಿಸುವುದಿರಲಿ ಮೊದಲು ಅದನ್ನು ಸಮಾಧಾನದಿಂದ ಕೇಳುವುದನ್ನು ಕಲಿಯಬೇಕು. ಈ ಗುಣ ಇಂದಿನ ರಾಜಕಾರಣಿಗಳಲ್ಲಿ ನಾವು ಕಾಣುವುದೇ ಇಲ್ಲ. ಇಂಥ ಅಪರೂಪದ ಗುಣ ಅವರು ಅಳವಡಿಸಿ ಕೊಂಡಿರುವುದರಿಂದಲೇ ಅವರು ಮಹಾನ್ ವ್ಯಕ್ತಿಯಾಗಿ ಬೆಳೆದರು. ಅವರು ಹಿಂದೂ, ಮುಸ್ಲಿಂ, ದಲಿತ, ಬಲಿತ ಹೀಗೆ ಎಂದೂ ಬೇಧ ಮಾಡಲಿಲ್ಲ. ಅಪಾರವಾದ ಮಾನವ ಜನಾಂಗದ ಕಳಕಳಿ ಹೊಂದಿದ್ದರು. ವಿಶ್ವವೇ ನನ್ನ ಮನೆ ಮಾನವ ಕುಲವೇ ನನ್ನ ಕುಟುಂಬ, ಎಂದು ಎಲ್ಲಾ ಮನುಷ್ಯರನ್ನು ಪ್ರೀತಿಸುವ ವಿಶ್ವ ಮಾನವತೆಯ ಗುಣ ಅವರಲ್ಲಿತ್ತು. ಮನೆಗೆ ಬಂದವರ ಸಮಸ್ಯೆ ಪರಿಹರಿಸುವುದರ ಜೊತೆಗೆ ಹಸಿದು ಬಂದವರಿಗೆ, ದೂರದಿಂದ ಬಂದವರಿಗೆ ಊಟ ಮಾಡಿ ಕಳುಹಿಸುತ್ತಿದ್ದರು. ಒಮ್ಮೊಮ್ಮೆ ಖರ್ಚಿಗೆ ದುಡ್ಡಿಲ್ಲದಿದ್ದರೆ, ಬಸ್ ಅಥವಾ ರೈಲಿಗೆ ಹೋಗಲು ವ್ಯವಸ್ಥೆ ಮಾಡಿ ಕೊಡುತ್ತಿದ್ದರು. 'ಇವನಾರವ, ಇವನಾರವ, ಇವನಾರವನೆಂದು ಕೇಳದೆ, ಇವರ ತಮ್ಮ ಮನೆಯ ಮಕ್ಕಳೆಂದು ಪ್ರಜೆಗಳನ್ನು ತಿಳಿದುಕೊಂಡಿದ್ದರು. ಅತ್ಯಂತ ಸ್ನೇಹಜೀವಿಯಾಗಿರುವ ಮಹಮ್ಮದಲಿ ಸಾಹೇಬರಿಗೆ ಎಲ್ಲಾ ಜಾತಿ ಜನಾಂಗದ ಜನರು ಸ್ನೇಹಿತರಾಗಿದ್ದರು. ಎಲ್ಲರೂ ಅವರಿಗೆ ಪ್ರೀತಿಯಿಂದ 'ಸಾಹೇಬ' ಎಂದೇ ಕರೆಯುತ್ತಿದ್ದರು. ಸಾಹೇಬರಾದರೂ ಒಬ್ಬ ವ್ಯಕ್ತಿ ಹತ್ತು ವರ್ಷದ ಮೇಲೆ ಬಂದರೂ ನೆನಪಿಟ್ಟು ಅವರ ಹೆಸರು ಹಿಡಿದೇ ಕರೆಯುತ್ತಿದ್ದರು. ಅಂತಹ ಅದ್ಭುತ ಸ್ಮರಣ ಶಕ್ತಿ ಅವರಿಗಿತ್ತು. ಅವರು ಕರ್ನಾಟಕ ತುಂಬಾ ಸಂಚರಿಸಿ ಪಕ್ಷ ಸಂಘಟನೆ ಮಾಡಿದ್ದರಿಂದ ಎಲ್ಲಾ ಭಾಗದ ನಾಯಕರ ಮತ್ತು ಕಾರ್ಯಕರ್ತರ ಹೆಸರುಗಳನ್ನು ನೆನಪಿಟ್ಟು

ಹೇಳುತ್ತಿರುವುದು ಕೇಳಿ ಎಷ್ಟೋ ಜನರಿಗೆ ಗಾಬರಿಯಾಗುತ್ತಿತ್ತು. ಹೀಗಾಗಿ ಅತ್ಯಂತ ಜನಪ್ರಿಯ ಹಾಗೂ ಜನಾನುರಾಗಿ ನಾಯಕರಾಗಿ ಅವರು ಬೆಳೆದಿದ್ದರು. ಅವರ ಮನೆ ಎಂದೂ ಖಾಲಿಯಾಗಿರಲಿಲ್ಲ. ಯಾವಾಗಲೂ ಜನರಿಂದ ತುಂಬಿಕೊಂಡಿರುತ್ತಿತ್ತು. ಬಾಗಿಲಿಗೆ ಬೀಗ ಹಾಕಲಿಲ್ಲ. ಗಂಟೆ ಬಾರಿಸಿ ಬಾಗಿಲು ತೆಗೆಯನ್ನಲಿಲ್ಲ. ಮುಸ್ಲಿಂ ಆಗಿದ್ದರೂ ಗೋಷಾ, ಪರದಾ ವ್ಯವಸ್ಥೆ ಅವರು ಎಂದೂ ಅಳವಡಿಸಲಿಲ್ಲ. ಅಶೋಕ ಚಕ್ರವರ್ತಿಯಂತೆ ನಾನು ಅರಮನೆಯಲ್ಲಿರಲಿ ಅಂತಃಪುರದಲ್ಲಿರಲಿ ಸತಿ ಸುತರೊಂದಿಗೆ ಮಾತನಾಡುತ್ತಿರಲಿ ನನ್ನ ಪ್ರಜೆಗಳು ಸಂಕಟ ಹೊತ್ತು ಸಮಸ್ಯೆಗಳನ್ನು ಹೊತ್ತು ನಮ್ಮ ಅರಮನೆ ಬಾಗಿಲಿಗೆ ಬಂದರೆ ಅದನ್ನು ನನಗೆ ತಿಳಿಸಿ ಎಂದು ಹೇಳಿ ಪ್ರಜಾ ಪ್ರೇಮವನ್ನು ಮೆರೆದಂತೆ ಸಾಹೇಬರು ಯಾವಾಗಲೂ ಪ್ರಜೆಗಳಿಗಾಗಿ, ಅವರ ಸಮಸ್ಯೆಗಳಿಗಾಗಿ ಸದಾ ಅವರ ಮನೆ ಬಾಗಿಲು ತೆರದೇಯಿತ್ತು. ಅವರು ಶಾಸಕ, ಸಚಿವ, ಅಧ್ಯಕ್ಷ ಸ್ಥಾನದಲ್ಲಿದ್ದಾಗಲೂ ಅಪಾಯಿಂಟಮೆಂಟ ಪಡೆದು ಯಾರೂ ಬರಲಿಲ್ಲ. ಹಾಗೆ ಅವರೆಂದೂ ಆ ನಿಯಮ ಹಾಕಲಿಲ್ಲ. ನಗುತ್ತ ನಗಿಸುತ್ತ ಪ್ರೀತಿ, ಸ್ನೇಹ, ಸೌಹಾರ್ದದ ಬದುಕನ್ನು ನಡೆಯಿಸಿದರು. ಜನಮನದಲ್ಲಿ ಶಾಶ್ವತವಾಗಿ ನಿಲ್ಲುವಂತಹ ಬದುಕನ್ನು ಸಾಗಿಸಿದರು. ಅವರು ಈ ರೀತಿ ಮುಕ್ತ ಮನಸ್ಸು ಹೊಂದಿರುವುದರಿಂದಲೇ ಅವರ ಮನೆ ಎಲ್ಲರಿಗೂ ಮುಕ್ತವಾಗಿತ್ತು. ಸದಾ ಜನರ ಜೊತೆ ಇರುವುದರಲ್ಲಿಯೇ ಖುಷಿ ಪಡುತ್ತಿದ್ದರು. ಮತ್ತು ಸಂತೋಷವನ್ನು ಕಾಣುತ್ತಿದ್ದರು. ಇಂಥ ಸಾರ್ವಜನಿಕ ಬದುಕು ನಡೆಯಿಸಿದ ಗುಲಬರ್ಗಾದ ಅಪರೂಪದ ರಾಜಕಾರಣಿ ಅವರಾಗಿದ್ದರು.

**ಮೊಹಮ್ಮದ** ಅಲಿ ಅವರ ಧರ್ಮಪತ್ನಿ ವಹಿದುನ್ನಿಸಾ ಬೇಗಂ ಅವರು ತುಂಬಾ ಪ್ರತಿಷ್ಠಿತ ಹಾಗೂ ದೊಡ್ಡ ಮನೆತನದಿಂದ ಬಂದವರು. ಅವರ ತಂದೆ ಅಬ್ದುಲ್ ಕರೀಮ ತಿಮ್ಮಾಪುರಿ ಅವರು ಹೆಸರಾಂತ ವಕೀಲಾಗಿದ್ದರು. ನ್ಯಾಯದೇವತೆ ಅವರಿಗೆ ಒಲಿದಿದ್ದಳು. ಕಲಬುರ್ಗಿಯಲ್ಲಿ ತಿಮ್ಮಾಪುರಿಯವರು ಮನೆ ಮಾತಾಗಿದ್ದರು. ಒಬ್ಬ ಶ್ರೇಷ್ಠ ಕ್ರಿಮಿನಲ್ ಲಾಯರ್ ಎಂದು ಹೆಸರು ಮಾಡಿದ್ದರು. ತುಂಬಾ ಆಸ್ತಿವಂತ ಸಿರಿವಂತ ವ್ಯಕ್ತಿಯಾಗಿದ್ದರು. ಗುಲಬರ್ಗಾದ ಸ್ಟೇಶನ್ ಏರಿಯಾ ವೃತ್ತಕ್ಕೆ ತಿಮ್ಮಾಪುರಿ ಸರ್ಕಲ್ ಎಂದೆ ಕರೆಯುತ್ತಾರೆ. ಸರ್ಕಲ್ ಹೆಸರೂ ತಿಮ್ಮಾಪುರಿ ಅವರ ಸ್ನೇಹಿತರ ಸರ್ಕಲ್ ಸಹ ಸಂಜೆಯಾದ ಮೇಲೆ ಅಲ್ಲೇ ಸೇರುತ್ತಿದ್ದರು. ಹೀಗಾಗಿ ಅದು ತಿಮ್ಮಾಪುರಿ ಸರ್ಕಲ್ ಎಂದೇ ಪ್ರಸಿದ್ಧವಾಗಿದೆ. ಪ್ರತಿಯೊಬ್ಬ ರಾಜಕಾರಣಿ ಇದೇ ಸರ್ಕಲ್‌ನಿಂದ ಬೆಳೆದು ರಾಜ್ಯ ಹಾಗೂ ರಾಷ್ಟ್ರಮಟ್ಟಕ್ಕೆ ಹೋಗಿರುವುದು ಸ್ಮರಣೀಯ. ತಿಮ್ಮಾಪುರಿ ಸರ್ಕಲ್‌ಗೆ ಸರ್ದಾರ ಪಟೇಲ್ ವೃತ್ತ ಅಂತ ನಾಮಕರಣ ಮಾಡಿದರೂ ಅದನ್ನು ಒತ್ತಾಯ ಪೂರ್ವಕ ಹೇಳುತ್ತಾರೆಯೇ ವಿನಃ ಸಹಜವಾಗಿ ಹೇಳಲಾರರು. ಇನ್ನೂ ಜನಮನದಲ್ಲಿ

ತುದಿನಾಲಗೆ ಮೇಲೆ ಇರುವುದು ತಿಮ್ಮಾಪುರಿ ಸರ್ಕಲ್ ಎಂದೇ ಇದೆ. ತಿಮ್ಮಾಪುರಿಯವರು ತಮ್ಮ ವಕೀಲಿ ವೃತ್ತಿ ಮಾಡಿಕೊಂಡು ನೆಮ್ಮದಿಯಿಂದ ಬದುಕು ಸಾಗಿಸುತವ ವ್ಯಕ್ತಿಯಾಗಿದ್ದರು. ಅವರಿಗೆ 11 ಜನ ಮಕ್ಕಳು, ಅದರಲ್ಲಿ ವಹಿದುನ್ನಿಸಾ ಬೇಗಂ ಮೂರನೆಯವರು. ಪ್ರಾಯಕ್ಕೆ ಬಂದ ತಮ್ಮ ಸುಂದರಳಾದ ಮಗಳಿಗೆ ವರ ಹುಡುಕುವಾಗ, ಅರಸುವ ಬಳ್ಳಿ ಕಾಲಿಗೆ ತೊಡಕಿತೆಂಬಂತೆ ಪಕ್ಕದಲ್ಲಿರುವ ಮತ್ತು ಅದೇ ನ್ಯಾಯಾಲಯದಲ್ಲಿ ವಕೀಲಿ ವೃತ್ತಿಯಲ್ಲಿರುವ ಸುಂದರ ಯುವಕ ಮೊಹಮ್ಮದ ಅಲಿ ಮೆಹತಾಬ ಅಲಿ ದೊರೆತಿದ್ದು, ಮುಂದೆ ಇಂಥ ದೊಡ್ಡ ವ್ಯಕ್ತಿಯಾಗುತ್ತಾನೆಂದು ತಿಮ್ಮಾಪುರಿಯವರಿಗೇ ಗೊತ್ತಿರಲಿಕ್ಕಿಲ್ಲ. ಭವಿಷ್ಯವನ್ನು ಯಾರು ಬಗೆದು ನೋಡಿದ್ದಾರೆ? ತಿಮ್ಮಾಪುರಿಯವರಿಗೆ ಒಬ್ಬ ಅಳಿಯ ಸಹಜ ಸುಲಭವಾಗಿ ದೊರೆತ. ಮಗಳನ್ನು ಮದುವೆ ಮಾಡಿ, ಮೊಹಮ್ಮದ ಅಲಿಯವರ ಮನೆ ತುಂಬಿಸಿದರು. ಬಹಳ ದಿನಗಳ ಮೇಲೆ ಮೊಹಮ್ಮದ ಅಲಿ ಸಾಹೇಬರಿಗೆ ಜನಿಸಿದ ಮಗಳು ಶಹನಾಜ ರಿಹಾನ್ ಅವರು. ಏಕಮಾತ್ರ ಪುತ್ರಿ ಹೆಣ್ಣೆಂದರೂ ಅವಳೇ, ಗಂಡೆಂದರೂ ಅವಳೇ, ಅತ್ಯಂತ ಮುದ್ದಾಗಿ, ಪ್ರೀತಿಯಿಂದ ಬೆಳೆಸಿದರು. ಶಹನಾಜ ರಿಹಾನ ಅವರು ತಂದೆಯಂತೆ ರಾಜಕಾರಣಿಯಾಗಲಿಲ್ಲ. ಆ ದಾರಿಯಲ್ಲಿ ತಪ್ಪಿಯೂ ಹೋಗಲಿಲ್ಲ. ಎಂ. ಎಸ್.ಸಿ ಹೋಮ ಸೈನ್ಸ್ ಪದವೀಧರೆಯಾಗಿದ್ದರೂ, ನೌಕರಿ ಮಾಡಲಿಲ್ಲ. ಆದರ್ಶ ಸದ್ಗೃಹಿಣಿಯಾಗಿ ಬದುಕು ಸಾಗಿಸುತ್ತಿದ್ದರೆ. ಶಹೆದ ಅಹ್ಮದ ಸಿದ್ದಿಕಿ ಅವರ ಜೊತೆಗೆ ಮದುವೆಯಾಗಿ, ಈಗ ತಮ್ಮ ಬಾಳ ಸಂಗಾತಿಯೊಂದಿಗೆ ಬೆಂಗಳೂರಿನ ರಿಚಮಂಡ ಟೌನನಲ್ಲಿ ತಮ್ಮ ತಂದೆಯವರು ಪ್ರೀತಿಯಿಂದ ಬಿಟ್ಟು ಹೋದ ಮನೆಯಲ್ಲಿ ವಾಸಿಸುತ್ತಿದ್ದಾರೆ. ಅವರಿಗೆ ಮುದ್ದಾದ ಎರಡು ಗಂಡುಮಕ್ಕಳಿವೆ. ಶಫಿಅಹ್ಮದ ಸಿದ್ದಿಕಿ ಮತ್ತು ಶಹನಾವತ್ ಅಹ್ಮದ ಸಿದ್ದಿಕಿ, ಇಲ್ಲಿ ಆಶ್ಚರ್ಯವೆಂದರೆ ಮಹಮ್ಮದ ಅಲಿ ಸಾಹೇಬರಿಗೆ ಗಂಡುಮಕ್ಕಳಾಗಲಿಲ್ಲ. ಅವರ ಮಗಳು ಶಹನಾಜ ರಿಹಾನ ಅವರಿಗೆ ಹೆಣ್ಣು ಮಕ್ಕಳಾಗಲಿಲ್ಲ. ಇವರ ಇಬ್ಬರೂ ಮಕ್ಕಳು ಪದವೀಧರರಾಗಿ ಉದ್ಯೋಗದಲ್ಲಿದ್ದಾರೆ. ಇವರ ಪತಿ ಶಹೆದ ಅಹ್ಮದ ಸಿದ್ದಿಕಿ ಅವರು ಮೈಕ್ರೋ ಕಂಪನಿಯಲ್ಲಿ ಡೆಪ್ಯೂಟಿ ಜನರಲ್ ಮ್ಯಾನೇಜರ್ ಆಗಿದ್ದಾರೆ. 13 ಸುವರ್ಣ ಪದಕ ಪಡೆದ ಸಿದ್ದಿಕಿಯವರು ಮೊಹಮ್ಮದ ಅಲಿ ಸಾಹೇಬರ ಗಮನಕ್ಕೆ ಬಂದು, ಮೆರಿಟ್ ಇದ್ದ ಅಳಿಯ ಮತ್ತು ಟಾಲೆಂಟೆಡ್ ಪರ್ಸನನ್ನು ಆಯ್ಕೆ ಮಾಡಿಕೊಂಡರು. ಅವರಿಗೆ ಸಿರಿವಂತ ಅಳಿಯನಿಗಿಂತ ಗುಣವಂತ ಅಳಿಯ ಬೇಕಾಗಿತ್ತು. ಹೀಗಾಗಿ ಶಹೆದ್ ಅಹ್ಮದ ಸಿದ್ದಿಕಿಯವರಿಗೆ ತಮ್ಮ ಮಗಳನ್ನು ಕೊಟ್ಟು ಬೆಂಗಳೂರಿನ ಲಾಲ್‌ಭಾಗ್ ಗಾಜಿನ ಮನೆಯಲ್ಲಿ ಮದುವೆ ಮಾಡಿ ಸಂತೋಷ ಪಟ್ಟರು.

ಶಹೆದ ಅಹ್ಮದ ಸಿದ್ದಿಕಿಯವರೂ ಸಹ ಮನೆತನಸ್ಥ ಅಳಿಯಂದಿರಾಗಿದ್ದಾರೆ. ಅವರ ತಂದೆ ಎಂ.ಎ.ಸಿದ್ದಿಕಿಯವರು ಹೈದ್ರಾಬಾದ ಮೂಲದವರು. ಅವರು ಕರ್ನಾಟಕ ಸರಕಾರದಲ್ಲಿ ಲೇಬರ ಕಮೀಷನರ್ ಆಗಿದ್ದರು. ಬೆಂಗಳೂರಿನಲ್ಲಿಯೇ ಬಹಳ ಕಾಲದಿಂದ ವಾಸಿಸಿದ್ದರು. ಸಿದ್ದಿಕಿಯವರ ಶ್ರೀಮತಿ ಒಳ್ಳೆಯ ಮನೆತನದಿಂದ ಬಂದವರು. ಅವರು ಮಿರ್ಝಾ ಫರುದುಲ್ಲಾ ಬೇಗ್ ಅವರ ಮಗಳು ಮಿರ್ಝಾ ಅವರು ಉರ್ದು ಸುಪ್ರಸಿದ್ಧ ಬರಹಗಾರರು ಮತ್ತು ಜಡ್ಜ ಆಗಿದ್ದರು. ಒಟ್ಟಾರೆ ಸುಂದರವಾದ ಹಿನ್ನಲೆಯುಳ್ಳ ಸುಸಂಸ್ಕೃತ ಮನೆತನದಿಂದ ಬಂದ ಶಹೆದ ಅಹ್ಮದ ಸಿದ್ದಕಿಯವರನ್ನು ಅಳಿಯನನ್ನಾಗಿ ಪಡೆದುದ್ದು ಮೊಹಮ್ಮದ ಅಲಿ ಸಾಹೇಬರಿಗೆ ಒಂದು ಸಂತೋಷದ ಸಂಗತಿಯಾಗಿತ್ತು.

ಶಹನಾಜ ರಿಹಾನಾ ಅವರು ಗೃಹಿಣಿಯಾಗಿರುವುದರೊಂದಿಗೆ, ಕೃಷಿ, ವ್ಯವಸಾಯವೂ ಮಾಡಿಕೊಂಡಿದ್ದಾರೆ. ಬೆಂಗಳೂರಿನ ಬನ್ನೇರುಘಟ್ಟದಲ್ಲಿ ಆದರ್ಶ ವ್ಯವಸಾಯ ಮಾಡಿದ್ದಾರೆ. ನಮ್ಮ ಪೂರ್ವಜರು ಪಟೇಲ್ ಮನೆತನದವರು ಮತ್ತು ಜಮೀನ್ದಾರರು ಆಗಿದ್ದರು. ಅವರ ರಕ್ತದ ಒಂದಂಶ ನನ್ನಲ್ಲಿರುವುದರಿಂದ ನನಗೂ ಆ ಕಡೆ ಒಲವು ಇದೆಯೆಂದು ಹೇಳುತ್ತಾರೆ. ಹೀಗೆ ಮೊಹಮ್ಮದ ಅಲಿ ಸಾಹೇಬರ ಒಂದು ವೈವಾಹಿಕ ಮತ್ತು ಕೌಟುಂಬಿಕ ಜೀವನದ ಕತೆಯಾಗಿದೆ.

ಮೊಹಮ್ಮದ ಅಲಿ ಸಾಹೇಬರು ತುಂಬು ಕೌಟುಂಬಿಕ ಜೀವನವನ್ನು ಸಮೃದ್ಧವಾಗಿ ನಡೆಯಿಸುತ್ತ, ಸಾರ್ವಜನಿಕ ಬದುಕನ್ನು ಬಾಳಿದವರು. ಬೆಲ್ಲ ಸಕ್ಕರೆಯಾಗಿ, ಎಲ್ಲರೊಳು ಬೇಕಾಗಿ ಇದ್ದವರು. ಕಲಬುರ್ಗಿ ಜನತೆ ಮರೆಯಲಾಗದ ಮಹಾನುಭಾವರಾಗಿದ್ದರು.

## ೪. ಮೊಹಮ್ಮದ ಅಲಿಯವರ ದಿನಚರಿ ಮತ್ತು ಹವ್ಯಾಸಗಳು

ಮೊಹಮ್ಮದ ಅಲಿ ಸಾಹೇಬರು ಪ್ರತಿ ನಿತ್ಯ ಬೆಳಗಿನ ಜಾವ ಐದು ಗಂಟೆಗೆ ಏಳುತ್ತಿದ್ದರು. ಶೌಚಾದಿ ಕ್ರಿಯೆಗಳು ಮುಗಿಸಿಕೊಂಡು ಗಾಳಿ ಸೇವನೆಗೆಂದು ವಿಹರಿಸುತ್ತಿದ್ದರು. ನಂತರ ಒಂದು ಗಂಟೆ ಕಾಲ ಆಟವಾಡುತ್ತಿದ್ದರು. ಅವರೊಬ್ಬ ಸ್ಪೋರ್ಟ್ಸ್‌ಮನ್‌ರಾಗಿದ್ದರು. ಓಟ, ಆಟ, ಅವರಿಗೆ ಪ್ರಿಯವಾಗಿದ್ದವು. ಒಳ್ಳೆಯ ಹಾಕಿ ಪ್ಲೇಯರ್ ಆಗಿದ್ದರು. ಹೀಗಾಗಿ ಏಳು ಗಂಟೆಗೆ ಮನೆಗೆ ಬಂದು ಸ್ನಾನ ಮಾಡಿ, ಉಪಹಾರ ಸೇವಿಸುತ್ತಿದ್ದರು. ಅಷ್ಟೊತ್ತಿಗೆ ಎಂಟು ಗಂಟೆಯಾಗಿರುತ್ತಿತ್ತು. ಮನೆ ಮುಂದೆ ಜನ ಸೇರುತ್ತಿದ್ದರು. ಸಾರ್ವಜನಿಕರ ಕುಂದು ಕೊರತೆ

ಅಹವಾಲುಗಳನ್ನು ಸ್ವೀಕರಿಸುತ್ತಿದ್ದರು. ಹೀಗೆ ಒಮ್ಮೊಮ್ಮೆ ಮಧ್ಯಾಹ್ನದವರೆಗೂ ಹೋಗುತ್ತಿತ್ತು. ಮಧ್ಯಾಹ್ನ ಊಟ ಮಾಡಿ ವಿಶ್ರಾಂತಿ ಪಡೆಯುತ್ತಿದ್ದರು. ನಂತರ ದಿನಪತ್ರಿಕೆಗಳ ಮೇಲೆ ಕಣ್ಣಾಡಿಸುತ್ತಿದ್ದರು. ಜೊತೆಗೆ ಸಾಹಿತ್ಯಾಸಕ್ತರು, ರಸಿಕರೂ ಆಗಿದ್ದರು. ಉರ್ದು ಶಾಹಿರಗಳು ಓದುತ್ತಿದ್ದರು. ಮತ್ತು ಸ್ನೇಹಿತರೊಂದಿಗೆ ಹೇಳಿ ರಂಜಿಸುತ್ತಿದ್ದರು. ಇಂಗ್ಲೀಷ ಸಾಹಿತ್ಯ ಹಾಗೂ ಭಾಷೆಯ ಕಡೆಗೆ ಹೆಚ್ಚಿನ ಗಮನ ಕೊಟ್ಟು ಅದರಲ್ಲಿ ತಲ್ಲೀನತೆಯನ್ನು ಅನುಭವಿಸುತ್ತಿದ್ದರು. ಸಂಗೀತ ಪ್ರೇಮಿಯಾಗಿದ್ದರು. ಬಿಸ್ಮಿಲ್ಲಾ ಖಾನ್ ಅವರ ಶಹನಾಯಿ ಅವರಿಗೆ ಬಹಳ ಇಷ್ಟ. ಪ್ರಸಿದ್ಧರಾದ ನೌಷಾದ, ಜಾನಿಸಾ ಅಖ್ತರ್, ಪ್ರಾಗ್ ಬೋಕಪುರಿ, ಶಕೀಲ ಬದಾಯುನಿ, ಸರ್ದಾರ ಜಾಫರಿ, ಕೃಷ್ಣ ಚಂದರ, ಸಲ್ಮಾನ ಸಿದ್ದಿಕಿ ಅವರ ನಿಕಟ ಸಂಪರ್ಕದಲ್ಲಿದ್ದರು. ಶ್ರೇಷ್ಠ ಉರ್ದು ಸಾಹಿತಿ ಸುಲೇಮಾನ್ ಖತಿಭ ಅವರೊಂದಿಗೆ ಆತ್ಮೀಯ ಸ್ನೇಹವಿತ್ತು. ಆಗಾಗ ಹೈದ್ರಾಬಾದಿಗೆ ತೆರಳುವುದರಿಂದ ಅಲ್ಲಿಯ ಖ್ಯಾತ ಸಾಹಿತಿಗಳ ಜೊತೆ ಸಂಪರ್ಕ ಹೊಂದಿದ್ದರು. ಖುರ್ಷಿದ ಆಲಾಂ ಖಾನ್, ಜಾಕೀರ ಹುಸೇನ ಅವರುಗಳು ಸಾಹಿತ್ಯ ಮತ್ತು ಅತ್ಯುತ್ತಮ ರಾಜಕೀಯ ಸ್ನೇಹಿತರುಗಳಾಗಿದ್ದರು.

ಮೊಹಮ್ಮದ ಅಲಿ ಸಾಹೇಬರಿಗೆ ಊಟ ಬಹಳ ಖುಷಿ ಕೊಡುವ ವಿಷಯವಾಗಿತ್ತು. ಅಚ್ಛಾ ಖಾನಾ ಪಕಾನಾ ಎಂದು ಮನೆಯಲ್ಲಿ ಹೇಳಿ ಮಾಡಿಸಿ ಊಟ ಮಾಡುತ್ತಿದ್ದರು. ಪಾರ್ಟಿ ಸಮಯದಲ್ಲಿ ಒಳ್ಳೆಯ ಖಾನಾ ಬೇಕಾಗುತ್ತಿತ್ತು. ಅವರು ತರತರಹದ ಮಾಂಸಾಹಾರಿ ಹಾಗೂ ಶಾಖಾಹಾರಗಳನ್ನು ಸೇವಿಸುತ್ತಿದ್ದರು. ಅವರಿಗೆ ಮಾವಿನ ಹಣ್ಣುಗಳೆಂದರೆ ಬಲು ಇಷ್ಟ. ಅತ್ಯಂತ ಆಸಕ್ತಿಯಿಂದ ಮತ್ತು ಪ್ರೀತಿಯಿಂದ ರತ್ನಗಿರಿ ಮತ್ತು ಆಪೂಸು ಮಾವಿನ ಹಣ್ಣುಗಳನ್ನು ಪ್ರತಿನಿತ್ಯ ಮೋಸಮ್ ಮುಗಿಯುವರೆಗೂ ತಿನ್ನುತ್ತಿದ್ದರು.

ಒಳ್ಳೆಯ ಶುಭ್ರವಾದ ಖಾದಿ ಬಿಳಿ ಬಟ್ಟೆಗಳನ್ನು ಧರಿಸುವುದು ಅವರಿಗೆ ಬಲು ಇಷ್ಟ. ಅಲ್ಲದೆ ಕುರ್ತಾ ಪೈಜಾಮ್‌ಗಳು ಅವರ ಪ್ರೀತಿಯ ಉಡುಗೆಗಳು. ಅಲ್ಲದೆ ಡಿನ್ನರಗಳಿಗೆ ಹೋಗುವಾಗ ಜೋದಪುರಿ ಶೇರವಾನಿಗಳು ಹಾಕಿಕೊಳ್ಳುತ್ತಿದ್ದರು. ಎತ್ತರದ ನಿಲುವು, ಬೆಳ್ಳನೆಯ ಮನುಷ್ಯ ಹೀಗಾಗಿ ಈ ಬಟ್ಟೆಗಳಲ್ಲಿ ಅವರು ಎದ್ದು ಕಾಣುತ್ತಿದ್ದರು. ಒಳ್ಳೆ ಒಳ್ಳೆಯ ಸುಗಂಧ ದ್ರವ್ಯಗಳನ್ನು ಸಿಂಪಡಿಸಿಕೊಳ್ಳುತ್ತಿದ್ದರು. ಅಲ್ಲದೆ ವಿಶೇಷವಾದ ಸಾಬೂನಗಳನ್ನು ಬಳಸುತ್ತಿದ್ದರು. ವಿಧ ವಿಧವಾದ ಬಟ್ಟೆಗಳನ್ನು ಧರಿಸುವುದು ಮತ್ತು ತಿಂಡಿ ತಿನಿಸುಗಳನ್ನು ತಿನ್ನುವ ಖಾಯಾಸ ಇತ್ತು. ಒಬ್ಬ ಖಾಯಾಸದಾರ ಮನುಷ್ಯರಾಗಿದ್ದರು. ಅವರು ಬದುಕನ್ನು ವೈವಿಧ್ಯಮಯವಾಗಿ ಕಾಣಬೇಕೆನ್ನುವ ಆಸಕ್ತಿಯುಳ್ಳವರಾಗಿದ್ದರು.

ಆಶ್ಚರ್ಯವೆಂದರೆ ಮೊಹಮ್ಮದ ಅಲಿ ಸಾಹೇಬರು ಸಿನೆಮಾ ನೋಡುತ್ತಿರಲಿಲ್ಲ. ಸಂಗೀತಾಸಕ್ತರಾಗಿದ್ದರು. ಗಝಲ್ಸ್ ಕೇಳುತ್ತಿದ್ದರು. ಮ್ಯೂಸಿಕ್ ಕ್ಯಾಸೆಟ್‌ಗಳನ್ನು ಆಸಕ್ತಿಯಿಂದ ಆಲಿಸುತ್ತಿದ್ದರು. ಬಿಡುವಿಲ್ಲದ ಕೆಲಸಗಳ ಮಧ್ಯದಲ್ಲಿ ಮಾನಸಿಕ ಒತ್ತಡದಲ್ಲಿ ಸಂಗೀತ ಅವರಿಗೆ ಉಲ್ಲಾಸಗೊಳಿಸಿ ಹೊಸ ಚೈತನ್ಯ ನೀಡುತ್ತಿತ್ತು. ಒಮ್ಮೊಮ್ಮೆ ಮನೆಯಲ್ಲಿ ಕುಳಿತು ಹಾಡುತ್ತಿದ್ದರು. ವಾದ್ಯಗಳನ್ನು ನುಡಿಸುತ್ತಿದ್ದರು. ಹವ್ಯಾಸಿ ಸಂಗೀತ ಕಲಾವಿದರಾಗಿದ್ದರು. ಸಂಗೀತವನ್ನು ಮತ್ತು ವಹಿದುನ್ನಿಸಾ ಬೇಗಂ (ಅವರ ಹೆಂಡತಿ) ಈ ಎರಡನ್ನೂ ಅತಿಯಾಗಿ ಪ್ರೀತಿಸುತ್ತಿದ್ದರು. ಇವು ಅವರ ಬದುಕಿಗೆ ಸ್ಫೂರ್ತಿಯ ಸೆಲೆಯಾಗಿದ್ದವು.

ಮೊಹಮ್ಮದ ಅಲಿ ಸಾಹೇಬರು ಮುಸ್ಲಿಂ ಆಗಿರುವುದರಿಂದ ಸಹಜವಾಗಿಯೇ ಅವರಿಗೆ ಇಸ್ಲಾಂ ಧರ್ಮದ ಜ್ಞಾನವಿತ್ತು. ಭಕ್ತಿವಂತರೂ ವಿಚಾರವಂತರೂ ಆಗಿದ್ದರು. ದಾನ ಧರ್ಮ ಅವರ ಜೀವ ಜೀವಾಳವಾಗಿತ್ತು. ಸಕಲ ಜೀವಿಗಳಿಗೆ ಲೇಸು ಬಯಸುವುದು ಅವರ ಗುರಿಯಾಗಿತ್ತು. ದೀನ ದಲಿತರ ಸೇವೆ ಅಲ್ಲಾನ ಸೇವೆಯೆಂದು ಭಾವಿಸಿದ್ದರು. ರಂಜಾನ ಹಬ್ಬದಲ್ಲಿ ಬಡವರಿಗೆ ಬಟ್ಟೆ, ಅನ್ನ ವಸ್ತ್ರ, ಹಣ ದಾನ ಮಾಡುತ್ತಿದ್ದರು. ಇದ್ದವರು ಇಲ್ಲದವರಿಗೆ ನೀಡಬೇಕೆನ್ನುವುದು ಅವರ ಧ್ಯೇಯ ವಾಕ್ಯವಾಗಿತ್ತು.

ರಂಜಾನ ಹಬ್ಬಗಳಲ್ಲಿ ಮಾತ್ರ ದಿನಕ್ಕೆ ಐದು ಬಾರಿ ನಮಾಜ ಮಾಡುತ್ತಿದ್ದರು. ಉಳಿದ ದಿನಗಳಲ್ಲಿ ಎರಡು ಬಾರಿ ನಮಾಜ ಮಾಡುತ್ತಿದ್ದರು. ಇಸ್ಲಾಂ ಧರ್ಮತತ್ವದ ಪುಸ್ತಕಗಳನ್ನು ಓದುತ್ತಿದ್ದರು. ಪ್ರವಚನಗಳನ್ನು ಕೇಳುತ್ತಿದ್ದರು. ಸೂಫಿ ಸಂತರ ದರ್ಶನ ಪಡೆಯುತ್ತಿದ್ದರು. ಅವರ ಜೀವನದ ಕೊನೆಯ ಆಸೆ ಮಕ್ಕಾ - ಮದೀನಾ ದರ್ಶನ ಪಡೆಯುವುದಾಗಿತ್ತು. ಆದರೆ ಅಷ್ಟರಲ್ಲಿ ಅವರು ಕೊನೆಯುಸಿರೆಳೆದರು. ಒಂದು ಮಗಳು ಮತ್ತು ಮಡದಿಯನ್ನು ಬಿಟ್ಟು ಇಹಲೋಕ ತ್ಯಜಿಸಿದರು.

## ೫. ಸಲಾಮಿಯೊಂದಿಗೆ ಸವಾರಿ

ಮೊಹಮ್ಮದ ಅಲಿ ಸಾಹೇಬರ ಪ್ರವಾಸ ಪ್ರಾರಂಭವಾಗುವುದೇ ಸಲಾಮಿಯಿಂದ. ಅವರು ಪಕ್ಕದ ರಾಜ್ಯಗಳಾದ ಆಂಧ್ರ, ತಮಿಳುನಾಡು, ಕೇರಳ, ಮಹಾರಾಷ್ಟ್ರಗಳಿಗೆಲ್ಲಾ ತೆರಳುತ್ತಿದ್ದರು. ಅಲ್ಲಿಯ ಜನರ ಅಂತರ ರಾಜ್ಯಗಳ ಸಂಬಂಧ ಹಾಗೂ ಸಾರಿಗೆ ವ್ಯವಸ್ಥೆ, ವ್ಯವಹಾರಗಳ ಬಗ್ಗೆ ಮೀಟಿಂಗಗಳು ಇರುತ್ತಿದ್ದವು. ಹೀಗಾಗಿ ಅವರು ಅನಿವಾರ್ಯವಾಗಿ ಪ್ರವಾಸ ಹಾಕಿಕೊಳ್ಳಬೇಕಾಗುತ್ತಿತ್ತು. ಜೊತೆಗೆ ಮಡದಿ ಮತ್ತು ಮಗಳನ್ನು ಕರೆದುಕೊಂಡು ಹೋಗುತ್ತಿದ್ದರು. ಇಂಥ ಪ್ರವಾಸ ಕಾಲದಲ್ಲಿಯೇ ಅವರು ಮಡದಿ ಮತ್ತು

ಮಗಳೊಂದಿಗೆ ಹೆಚ್ಚು ಅನೋನ್ಯವಾಗಿ ಬೆರೆಯಲು ಸಾಧ್ಯವಾಗುತ್ತಿತ್ತು. ಅವರಿಗೆ ಹೋದಲೆಲ್ಲ ರಾಜ್ಯದಿಂದ ರಾಜ ಮರ್ಯಾದೆ ಪ್ರಾಪ್ತವಾಗುತ್ತಿತ್ತು. ಅವರು ಸಚಿವರಾಗಿರುವದಷ್ಟೇ ಅಲ್ಲದೇ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಪಕ್ಷದ ವರ್ಕಿಂಗ್ ಕಮೀಟಿ ಸದಸ್ಯರಾಗಿದ್ದರು. ಅಲ್ಲದೆ ಪಾರ್ಲಿಮೆಂಟರಿ ಬೋರ್ಡ್ ಸದಸ್ಯರಾಗಿದ್ದರು. ರಾಜ್ಯ ಮತ್ತು ರಾಷ್ಟ್ರ ಮಟ್ಟದ ವ್ಯಕ್ತಿತ್ವವುಳ್ಳ ಹಿರಿಯ ನಾಯಕರಾಗಿದ್ದರು. ಹೀಗಾಗಿ ಅವರ ಅಂತರ ರಾಜ್ಯದ ಪ್ರವಾಸ ಪ್ರಾರಂಭವಾಗುವುದೇ ಸಲಾಮಿಯಿಂದ. ಅಪ್ಪಾಜಿ ಪ್ರವಾಸ ಸಲಾಮಿಯಿಂದಲೇ ಪ್ರಾರಂಭವಾಗುತ್ತಿತ್ತು. ಸಾಹೇಬರ ಸವಾರಿ ಸಲಾಮಿಯಿಂದ ಶುರುವಾಯಿತು ನೋಡ್ರಿ ಎಂದು ಹೇಳುತ್ತಿದ್ದರು. ಎಂದು ಅವರ ಮಗಳು ಶಹನಾಜ ರಿಹಾನಾ ಹೇಳುತ್ತಾರೆ. ಮುಂದುವರೆದು, ನಮ್ಮಪ್ಪಾಜಿ ಸಾರಿಗೆ ಸಚಿವರಾಗಿರುವುದರಿಂದ, ರಸ್ತೆ ಸಾರಿಗೆ, ಪ್ರವಾಸೋದ್ಯಮ ಇವರ ಇಲಾಖೆಗೆ ಸೇರಿದ್ದರಿಂದ ರಸ್ತೆಯುದ್ದಕ್ಕೂ ವ್ಯವಸ್ಥೆ ಇರುತ್ತಿತ್ತು. ಪ್ರವಾಸಿ ಬಂಗ್ಲೆಗಳಲ್ಲಿ ವಿಶ್ರಾಂತಿಯಾಗುತ್ತಿತ್ತು. ಊಟ ಉಪಚಾರಕ್ಕಂತೂ ಕೊರತೆಯೇ ಇರಲಿಲ್ಲ. ಅವರು ಹೆಚ್ಚಾಗಿ ರಸ್ತೆ ಮೂಲಕ ಸಂಚಾರ ಕೈಗೊಳ್ಳುತ್ತಿದ್ದರು. ಸ್ವತಃ ತಿರುಗಾಡಿ ಸಮಸ್ಯೆಗಳನ್ನು ಅರಿತುಕೊಳ್ಳುತ್ತಿದ್ದರು. ಅಲ್ಲಲ್ಲಿ ಭೇಟಿಕೊಡುತ್ತಿದ್ದರು. ಯಾವುದೇ ಮುನ್ಸೂಚನೆಯಿಲ್ಲದೆ ಆಶ್ಚರ್ಯಕರವಾಗಿ ಭೇಟಿಕೊಡುವುದನ್ನು ಕಂಡು ಅಧಿಕಾರಿಗಳು ಭಯಭೀತರಾಗುತ್ತಿದ್ದರು. ತುಂಬಾ ಚೆನ್ನಾಗಿ ಕೆಲಸ ಮಾಡುತ್ತಿದ್ದರು. ಹೀಗಾಗಿ ರಸ್ತೆ, ಬಸ್ಸು ಸೌಕರ್ಯ, ಸಾರಿಗೆ, ಪ್ರವಾಸಿ ತಾಣಗಳ ಸಮಸ್ಯೆಗಳನ್ನು ಮನಸಾರೆ ಅರಿತುಕೊಳ್ಳುತ್ತಿದ್ದರು. ಅವುಗಳಿಗೆ ಸೂಕ್ತ ಪರಿಹಾರ ನೀಡುತ್ತಿದ್ದರು. ಹೀಗಾಗಿ ಸಮಸ್ಯೆಗಳು ಸರಳವಾಗಿ ಬಗೆಹರಿಯುತ್ತಿದ್ದವು ಎಂದು ಹಿಂದಿನ ನೆನಪುಗಳನ್ನು ಮೆಲಕು ಹಾಕುತ್ತ ಹೇಳುತ್ತಿರುತ್ತಾರೆ, ಅವರ ಅನೇಕ ದೂರದ ಪ್ರವಾಸಗಳಲ್ಲಿ ನಾನು ಮತ್ತು ನನ್ನ ಅಮ್ಮಾ ಜೊತೆ ಜೊತೆಗೆ ಇರುತ್ತಿದ್ದೆವು. ಅಪ್ಪಾಜಿ ಜೊತೆಗೆ ನಾನು ಬಹಳಷ್ಟು ಸಂಚಾರ ಮಾಡಿದರೂ ನನ್ನ ಶಿಕ್ಷಣಕ್ಕೆ ತೊಂದರೆಯಾಗದಂತೆ ನೋಡಿಕೊಂಡರು. ಮತ್ತು ಅವರು ನನ್ನನ್ನು ಅತಿಯಾಗಿ ಪ್ರೀತಿಸುತ್ತಿದ್ದರು. ಕೇಳಿದ್ದನ್ನು ಅಕ್ಕರೆಯಿಂದ ಕೊಡಿಸುತ್ತಿದ್ದರು. ಮಮತೆಯಿಂದ ಮುದ್ದಾಗಿ ನನ್ನನ್ನು ಬೆಳೆಯಿಸಿದರು. ಎಷ್ಟೋ ಬಾರಿ ಅವರ ಸ್ನೇಹಿತರು ಏನ್ರಿ ಮಗಳನ್ನು ಜೊತೆಗೆ ಕರೆ ತಂದಿದ್ದೀರಿ ನೀವೂ ನೆಹರು ಅವರ ಪರಂಪರೆಯನ್ನು ಅನುಸಿಸುತ್ತೀರಿ ಕಾಣುತ್ತೆ ಎಂದು ತಮಾಷೆ ಮಾಡುತ್ತಿದ್ದರು. ಆದರೆ ನನ್ನ ಮಗಳನ್ನು ಮಾತ್ರ ರಾಜಕೀಯಕ್ಕೆ ಬಿಡಲಾರೆ ಎಂದು ಸಾಹೇಬರು ಚುಟುಕಾಗಿ ಉತ್ತರಿಸುತ್ತಿದ್ದರು. ಅವರಂದುಕೊಂಡಂತೆ ನಾನು ಗೃಹಿಣಿಯಾಗಿ ಅವರ ಇಚ್ಛೆಯನ್ನು ನೆರವೇರಿಸಿದ್ದೇನೆಂದು ಹೇಳುತ್ತಾರೆ, ಹೀಗೆ ತಮ್ಮ ತಂದೆಯವರ ಬಗ್ಗೆ ಅಪಾರ ಗೌರವ ಮತ್ತು ಪ್ರೀತಿಯಿಟ್ಟುಕೊಂಡು ಶಹನಾಜ

ರಿಹಾನಾ ಅವರು ಬಾಳುತ್ತಿದ್ದಾರೆ. ಇತ್ತೀಚೆಗೆ ಅವರ ತಾಯಿ ವಹಿದುನ್ನಿಸಾ ಬೇಗಂ ಅವರು 1998ರಲ್ಲಿ ಅಗಲಿ ಹೋದುದನ್ನು ಸ್ಮರಿಸಿಕೊಳ್ಳುತ್ತಾರೆ. ಅತಿ ದುಃಖದಿಂದ ಈಗ ತಂದೆ-ತಾಯಿ ಇಬ್ಬರನ್ನು ಕಳೆದುಕೊಂಡು, ಆ ಕಳೆದು ಹೋದ ಸುವರ್ಣ ದಿನಗಳನ್ನು ಮರೆತು ಈಗ ತುಂಬಾ ಸರಳವಾಗಿ ನಾನು, ನಮ್ಮ ಯಜಮಾನ್ರು ಮತ್ತು ಮಕ್ಕಳೊಂದಿಗೆ ನೆಮ್ಮದಿಯಿಂದ ಕಾಲ ಕಳೆಯುತ್ತಿದ್ದೇನೆಂದು ನಿಟ್ಟುಸಿರುಬಿಟ್ಟರು.

ಗುಲಬರ್ಗಾದಲ್ಲಿನ ಮೊಹಮ್ಮದ ಅಲಿ ಅವರ ಮನೆಯನ್ನು ಮಾರಲಾಗಿದೆ. ಅವರ ನೆನಪು ಮಾಡುವುದಕ್ಕೆ ಯಾವುದೂ ಇಲ್ಲ. ಗುಲಬರ್ಗಾ ಜನತೆಯ ಹೃದಯದಲ್ಲಿ ಮೊಹಮದ ಅಲಿ ಇನ್ನೂ ನೆಲೆಸಿದ್ದಾರೆ. ಅವರನ್ನು ಕಂಡು, ಜೊತೆಗೆ ಒಡನಾಡಿದವರು ಇನ್ನೂ ಸಹಸ್ರ ಸಹಸ್ರ ಜನ ಬದುಕಿದ್ದಾರೆ. ಅವರನ್ನು ಅವರ ಕಾರ್ಯವೈಖರಿಯನ್ನು ಕುರಿತು ಹೇಳುತ್ತಾರೆ. ಆದರೆ ಮುಂದಿನ ತಲೆಮಾರಿಗೆ ಅವರು ಬರಿ ನೆನಪಾಗಿ ಉಳಿಯುತ್ತಾರೆ. ಇಲ್ಲವಾದರೆ ಇತಿಹಾಸವಾಗುತ್ತಾರೆ.

## ೬. ಬಹುಸಂಖ್ಯಾತರ ನಾಯಕ

ಮೊಹಮ್ಮದ ಅಲಿ ಸಾಹೇಬರು ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದರೂ ಅವರು ಬಹುಸಂಖ್ಯಾತ ವರ್ಗದ ನಾಯಕರಾಗಿದ್ದರು. ಗುಲಬರ್ಗಾದ ವೈಶಿಷ್ಟ್ಯವೆಂದರೆ ಒಂದು ಕಡೆ ಶರಣಬಸವೇಶ್ವರ ದೇವಾಲಯ, ಇನ್ನೊಂದು ಕಡೆ ಹಜರತ್ ಖಾಜಾ ಬಂದೇನವಾಜ ದರ್ಗಾ. ಇಲ್ಲಿ ಹಿಂದೂ ಮುಸ್ಲಿಂರೂ ಅರ್ಧ ಅರ್ಧದಂತೆ ಇದ್ದಾರೆ. ಇಲ್ಲಿ ಪರಸ್ಪರ ಬಾಹಿ ಬಾಹಿಗಳಾಗಿದ್ದಾರೆ. ಕೊಡುಕೊಳ್ಳುವ ವ್ಯವಹಾರ ದಿನ ನಿತ್ಯ ನಡೆಯುತ್ತದೆ. ಇಲ್ಲಿಯ ಮುಸ್ಲಿಂ ಜನಾಂಗ ಅಲ್ಪ ಸಂಖ್ಯಾತರಂತೆ ಕಾಣುವುದಿಲ್ಲ. ಬಹು ಸಂಖ್ಯಾತರೇ ನಿಜ. ಆದರೂ ರಾಜ್ಯದ ದೃಷ್ಠಿಯಿಂದ ನೋಡಿದಾಗ ಮುಸ್ಲಿಂ ಜನಾಂಗ ಅಲ್ಪ ಸಂಖ್ಯಾತರೇ ಹೌದು. ಮೊಹಮ್ಮದ ಅಲಿ ಕಲಬುರ್ಗಿಯಲ್ಲಿ ಎಲ್ಲರ ನಾಯಕರಾಗಿದ್ದರು. ಎಲ್ಲ ಜಾತಿ ಜನಾಂಗಕ್ಕೆ ಹೊಂದಿ ಕೊಂಡಿದ್ದರು. ಹಿಂದೂ, ಮುಸ್ಲಿಂ, ಕ್ರೈಸ್ತ, ಇಸಾಯಿ, ದೀನ, ದಲಿತ, ಕ್ಷತ್ರಿಯ, ಮೇಲು-ಕೀಳು ಈ ಭಾವನೆಗಳಿಂದ ಬಹುದೂರ ಹೋಗಿದ್ದರು. ಎಲ್ಲರ ಪ್ರೀತಿ ವಿಶ್ವಾಸ ಗಳಿಸಿಕೊಂಡಿದ್ದರು. ಮತ್ತು ಸರ್ವ ಜನಾಂಗದ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾಗಿದ್ದರು. ಸಾಧ್ಯವಾದರೆ ಉಪಕಾರ ಮಾಡಿದ್ದಾರೆ. ಆಗದಿದ್ದರೆ ಸುಮ್ಮನಿದ್ದಾರೆ. ಯಾರಿಗೂ ತಮ್ಮ ಅಧಿಕಾರ ಬಲದಿಂದ ತೊಂದರೆ ಕೊಟ್ಟವರಲ್ಲ. ಆದರೂ ಅವರು ಎಂ. ಎಸ್. ಆರ್.ಟಿ.ಸಿ.ಯಲ್ಲಿ ಮುಸ್ಲಿಂ ಜನಾಂಗಕ್ಕೆ ಹೆಚ್ಚು ಕೆಲಸ ಕೊಟ್ಟರು ಎಂಬ ಅಪವಾದಕ್ಕೆ ಒಳಗಾದರು. ಆಕಸ್ಮಿಕವೆನ್ನುವಂತೆ ಮುಸ್ಲಿಂ ಜನಾಂಗದಲ್ಲಿ ಅನುಭವವಿದ್ದ ಡ್ರೈವರುಗಳು, ಕಂಡಕ್ಟರು, ಮೆಕ್ಯಾನಿಕ್‌ಗಳು ಮತ್ತು ಕ್ಲೀನರುಗಳು ನೇಮಕಗೊಂಡಿದ್ದರು. ಈ

ಕೆಲಸಕ್ಕೆ ಹಿಂದೂ ಜನಾಂಗದಲ್ಲಿ ಅನುಭವವಿದ್ದವರು, ತರಬೇತಿ ಪಡೆದವರು ವಿರಳವಾಗಿದ್ದರು. **ಅರ್ಹ ಹಿಂದೂಗಳಿಗೂ** ಕೆಲಸಗಳು ದೊರೆತಿವೆ. ಒಟ್ಟಾರೆ ಜನತೆಗೆ ಕಲ್ಯಾಣ ಮಾಡುವ ಉದ್ದೇಶ ಹೊಂದಿದ್ದರು. ಎಲ್ಲ ಜನತೆಗೆ ಹಿತವನ್ನು ಬಯಸಿದರು. ನಮ್ಮವರು ತಮ್ಮವರು ಎಂಬ ಸ್ವಾರ್ಥ ಸಾಧನೆಗೆ ತೊಡಗಿದವರಲ್ಲ. ಸ್ವಾರ್ಥ ಅವರ ಸಮೀಪಕ್ಕೆ ಸುಳಿಯಲಿಲ್ಲ. ನೂರು ಕೋಟಿ, ಸಾವಿರ ಕೋಟಿ ರೂಪಾಯಿಗಳ ಆಸ್ತಿ ಮಾಡಿದವರಲ್ಲ. ನಂದಿಕೂರ ಗ್ರಾಮದ ಹತ್ತಿರ ಅವರ ಹೊಲವಿತ್ತು. ಅಲ್ಲಿ ಕೃಷಿ ವ್ಯವಸಾಯ ಮಾಡುತ್ತಿದ್ದರೆಂದು ಹೇಳುತ್ತಾರೆ. ಹಣದಾಮಿಷಕ್ಕೆ ಎಂದೂ ಬೀಳಲಿಲ್ಲ. ಆಸ್ತಿ ಮಾಡುವ ಗೋಜಿಗೆ ಬೀಳಲಿಲ್ಲ. ಒಬ್ಬ ಹೆಣ್ಣು ಮಗಳಿಗೆ ನಾನು ನ್ಯಾಯವಾಗಿ ಸಂಪಾದಿಸಿದ್ದೇ ಸಾಕು ಎಂದು ಭಾವಿಸಿದ್ದರು. ಸರಳ ಸುಂದರವಾದ ಜೀವನ, ಆರೋಗ್ಯಕ್ಕೆ ಹಿತವೆಂದು ಭಾವಿಸಿದ್ದರು. ಅತಿಯಾದ ಆಸ್ತಿ, ಹಣ ಸಂಪಾದನೆ ಆರೋಗ್ಯಕ್ಕೆ ಒಳ್ಳೆಯದಲ್ಲ. ಆಸೆಯೇ ದುಃಖಕ್ಕೆ ಕಾರಣವೆಂದು ಭಾವಿಸಿದ್ದರು.

ಆಗಿನ ಕಾಲದಲ್ಲಿ ಸ್ಕೂಟರುಗಳು ನಂಬರ ಹಚ್ಚಿ ವರ್ಷಗಟ್ಟಲೆ ಕಾಯಬೇಕಾಗುತ್ತಿತ್ತು. ಅದಕ್ಕಾಗಿ ಮಿನಿಷ್ಟರ ಕೋಟಾದಲ್ಲಿ ಪಡೆಯಬೇಕಾಗುತ್ತಿತ್ತು. ಈಗಿನ ಹಾಗೆ ತೆರೆದ ಮಾರುಕಟ್ಟೆಯಿರಲಿಲ್ಲ. ಹೀಗಾಗಿ ಅವರ ಸ್ನೇಹಿತರುಗಳಿಗೆಲ್ಲ ಸ್ಕೂಟರ್ ಮಂಜೂರು ಮಾಡಿಸಿದರು. ವರ್ಗೀಸ, ಕಲ್ಯಾಣರಾವ ಮರಗುತ್ತಿ, ಲಿಂಗನವಾಡಿ, ನವಣಿ ಸ್ವಾಮಿ, **ಶಿವಶಂಕರಪ್ಪ** ನಂದ್ಯಾಳ ಮುಂತಾದವರು ಪಡೆದುಕೊಂಡಿದ್ದರು. ಅಲ್ಲದೆ ಖಾಸಗಿ ಸರ್ವಿಸ್‌ಗಳು ಓಡಾಡುವಂತೆ ಅನುಮತಿ ನೀಡಿದರು. ಹೀಗಾಗಿ ಖಾಸಗಿ ಸರ್ವಿಸ ಬಸ್ಸುಗಳು ಓಡಿಸಿ ಅನೇಕರು ಸಿರಿವಂತರಾಗಿ ಬೆಳೆದರು. ಹೀಗಾಗಿ ಬಸ್ಸುಗಳು ಹೆಚ್ಚಿಗೆ ಓಡಿದವು. ರಸ್ತೆಗಳು ಸುಧಾರಣೆಯಾದವು. ಇವತ್ತಿನ ಗುಲಬರ್ಗಾದ ಕೇಂದ್ರ ಬಸ್‌ನಿಲ್ದಾಣ ಅವರ ಕನಸಿನ ಕೂಸು. ಎಲ್ಲಾ ಹಳ್ಳಿಗಳಿಗೆ ಬಸ್ಸಗಳು ಹೋಗುವಂತೆ ರಸ್ತೆ ನಿರ್ಮಾಣ ಮಾಡಿಸಿದರು. ಇಂದಿನ ರಸ್ತೆಗಳು ಅವರ ಪ್ರಯತ್ನದ ಫಲವೆನ್ನಬೇಕು. ಹೈದ್ರಾಬಾದ ಕರ್ನಾಟಕದ ಬಸ್ ನಿಲ್ದಾಣಗಳು ಮತ್ತು ರಸ್ತೆಗಳು **ಮೊ**ಹಮ್ಮದ ಅಲಿ ಸಾಹೇಬರ ಸ್ಮಾರಕಗಳೆಂದು ಹೇಳಿದರೆ ತಪ್ಪಾಗಲಾರದು. ಆಗ ಕೈ ಇಟ್ಟಲ್ಲಿ ಸಮಸ್ಯೆಗಳಿರುವ ಕಾಲದಲ್ಲಿ ಅತ್ಯಂತ ತಾಳ್ಮೆಯಿಂದ, ಸಹನ ಶೀಲತೆಯಿಂದ ಕೆಲಸ ಮಾಡಿದ್ದು ತೀರ ಆಶ್ಚರ್ಯದ ಪ್ರಸಂಗವಾಗಿದೆ. ಅಷ್ಟಾಗಿಯೂ ಜನ ಅವರಿಗೆ ಎಂದೂ ಪ್ರತಿಭಟಿಸಲಿಲ್ಲ. ಎದುರಿಗೆ ಮಾತನಾಡಲಿಲ್ಲ. ಪ್ರಾಮಾಣಿಕವಾಗಿ ಜನೋಪಕಾರಿ ಕೆಲಸ ಮಾಡುವ ವ್ಯಕ್ತಿಯೆಂದು ಬಣ್ಣಿಸುತ್ತಿದ್ದರು.

## ೭. ಸ್ನೇಹಮಯಿ ಹಾಗೂ ಕರುಣಾಮಯಿ

ಚುನಾವಣೆ ಬಂದಾಗ ಮಾತ್ರ ಪಕ್ಷ, ಎದುರಾಳಿ, ಪ್ರತಿಸ್ಪರ್ಧಿ ಎಂದು ಭಾವಿಸುತ್ತಿದ್ದರು. ಗೆದ್ದ ಮೇಲೆ ಸೋತವರೊಂದಿಗೆ ಕೈ ಮಿಲಾಯಿಸಿ ಒಟ್ಟಿಗೆ ಗುಲಬರ್ಗಾ ಅಭಿವೃದ್ಧಿ ಕೆಲಸಗಳನ್ನು ಕೈಗೆತ್ತಿಕೊಳ್ಳೋಣವೆಂದು ಹೇಳುತ್ತಿದ್ದರು. ಆಳುವ ಪಕ್ಷ ವಿರೋಧ ಪಕ್ಷವೆಂದು ಹೇಳಲಾಗುತ್ತಿತ್ತು. ಆದರೆ ವೈಯುಕ್ತಿಕವಾಗಿ ಯಾರೊಂದಿಗೂ ದ್ವೇಷ, ಹಗೆತನ ಸಾಧಿಸಲಿಲ್ಲ. ವೈರತ್ವ ಭಾವನೆ ಬೆಳೆಯಿಸಿಕೊಳ್ಳಲಿಲ್ಲ. ಎಲ್ಲರ ಬಾಯಿಯಲ್ಲಿ ಮೊಹಮ್ಮದ ಅಲಿ ಒಬ್ಬ ಒಳ್ಳೆಯ ಮನುಷ್ಯ ಎಂದೇ ಕರೆಯಿಸಿಕೊಂಡರು. ಅವರು ಒಳ್ಳೆಯವರಾಗುವುದಕ್ಕೆ ಕೆಲವು ಅವರದ್ದೇ ಆದ ವಿಚಾರ ಧಾರೆಗಳನ್ನು ಹೊಂದಿದ್ದರು. 1. ಜಾತ್ಯಾತೀತ ಮನೋಭಾವನೆ, 2.ರಾಷ್ಟ್ರೀಯವಾದಿತನ, 3. ಅಖಂಡ ಕರ್ನಾಟಕದ ಸುಂದರ ಕಲ್ಪನೆ, 4. ಸಾಮಾಜಿಕ ಹಾಗೂ ಜನಾಂಗಿಕ ಕಳಕಳಿ, 5. ಅಭಿವೃದ್ಧಿ ಕಾರ್ಯಗಳಲ್ಲಿ ಹಾಗೂ ಜನಾಂಗಿಕ ವ್ಯವಸ್ಥೆಯಲ್ಲಿ ಪಕ್ಷಪಾತತನವಿಲ್ಲದ್ದು, 6. ಸರಳ ಜೀವನದ ವ್ಯವಸ್ಥೆ, 7. ಮೌಲ್ಯಾಧಾರಿತ ರಾಜಕೀಯ ಚಿಂತನೆಗಳು, 8. ರಾಷ್ಟ್ರ ಮಟ್ಟದ ನಾಯಕರೊಡನೆ ಒಡನಾಟ, 9.ಎಲ್ಲ ವರ್ಗದ ಜನತೆಗೆ ಮುಕ್ತ ಮನಸ್ಸಿನ ಸಹಾಯ, 10. ತಮ್ಮ ಮನೆಯ ಬಾಗಿಲು ಸರ್ವರ ಪಾಲಿಗೆ ಮುಕ್ತ ದ್ವಾರವನ್ನಾಗಿಸಿದ್ದು. ಇವು ಮೊಹಮ್ಮದ ಅಲಿ ಅವರನ್ನು ಎತ್ತರಕ್ಕೆ ಏರಿಸಿದ ವಿಚಾರ ಧಾರೆಗಳಾಗಿದ್ದವು. ಸಾಮಾನ್ಯ ಮನುಷ್ಯನಿಗೂ ಅವರ ಮನೆಯಲ್ಲಿ ಗೌರವ ಭಾವನೆಯಿತ್ತು. ಇಂಥ ತತ್ವನಿಷ್ಟ ರಾಜಕಾರಣಿಯಾಗಿದ್ದರು. ಹೀಗಾಗಿ ಅವರ ಮಿತ್ರ ಬಳಗವನ್ನು ಅಂಕಿ ಸಂಖ್ಯೆಗಳಿಂದ ಲೆಕ್ಕ ಹಾಕಿದರೆ ಮುಸ್ಲಿಂರಿಗಿಂತ ಹಿಂದೂಗಳೇ ಅಧಿಕ ಸಂಖ್ಯೆಯಲ್ಲಿದ್ದರು.ಗುಲಬರ್ಗಾಕ್ಕೆ ಬಂದರೆ ವರ್ಗೀಸ, ಬೆಳಗುಂಪಿ, ಕಲಶೆಟ್ಟಿ, ಮುಕರಂಬಿ ಗುಂಡಪ್ಪ, ಕಲ್ಯಾಣರಾವ ಮರಗುತ್ತಿ, ಲಿಂಗನವಾಡಿ ನವಣಿ ಸ್ವಾಮಿ, ಮಾಣಿಕಪ್ಪ ಪಾಟೀಲ, ಶಿವಶಂಕರಪ್ಪ ನಂದ್ಯಾಳ, ಗುರಪ್ಪಾ ನಂದ್ಯಾಳ, ಧರ್ಮವೀರ, ರಘುವಂಶಿ ಧರ್ಮಸಿಂಗ, ಮಲ್ಲಿಕಾರ್ಜುನ ಖರ್ಗೆ, ಇಕ್ಬಾಲ್ ಅಹ್ಮದ ಸರಡಗಿ, ಮಲ್ಲಪ್ಪ ಗವ್ಹಾಂಹರ ಮುಂತಾದ ಗಣ್ಣರು ಅವರ ಆಪ್ತ ಮಿತ್ರರಾಗಿದ್ದರು. ಇದು ರಾಜಕೀಯ ಸಖ್ಯದೊಂದಿಗೆ ವೈಯುಕ್ತಿಕ ಆತ್ಮೀಯತೆಯೂ ಇತ್ತು. ಇವರಲ್ಲಿ ಸ್ನೇಹ ಸ್ನೇಹಕ್ಕಾಗಿ, ಚುನಾವಣೆ-ಚುನಾವಣೆಗಾಗಿ ಎಂಬ ಮಾತು ಅಳವಡಿಸಿಕೊಂಡಿದ್ದರು. ಹೀಗಾಗಿ ಆರೋಗ್ಯಕರ ವಾತಾವರಣ ನಿರ್ಮಾಣವಾಗಿತ್ತು.

ಮೊಹಮ್ಮದ ಅಲಿಯವರು ಒಂದು ಬಾರಿ ಗುಲಬರ್ಗಾ ವಿಧಾನ ಸಭಾ ಮತಕ್ಷೇತ್ರದಿಂದ ಹೈದ್ರಾಬಾದ ವಿಧಾನಸಭೆಗೆ ಶಾಸಕರಾಗಿ 1952ರಲ್ಲಿ ಆಯ್ಕೆಗೊಂಡರು. ಎರಡನೆಯ ಬಾರಿಗೆ 1957ರಲ್ಲಿ ಮೈಸೂರು ರಾಜ್ಯದ ವಿಧಾನ ಸಭೆಗೆ ಶಾಸಕರಾಗಿ ಆಯ್ಕೆಗೊಂಡರು. ಮೊದಲು ಗುಲಬರ್ಗಾ ಹೈದರಾಬಾದ

ರಾಜ್ಯದಲ್ಲಿತ್ತು. ಭಾಷಾವಾರು ಪ್ರಾಂತಗಳು ರಚನೆಯಾದ ಮೇಲೆ ಗುಲಬರ್ಗಾ ಮೈಸೂರು ರಾಜ್ಯಕ್ಕೆ ಸೇರಿಕೊಂಡಿತು. ಮೈಸೂರು ರಾಜ್ಯದಲ್ಲಿ ಮುಸ್ಲಿಂ ವರ್ಗದ ಹಿರಿಯ ಕಾಂಗ್ರೆಸ್ ನಾಯಕರಾಗಿದ್ದ ಮೊಹಮ್ಮದ ಅಲಿಯವರನ್ನು ಸಚಿವ ಸಂಪುಟ ಸಚಿವರನ್ನಾಗಿ ನೇಮಕ ಮಾಡಲಾಯಿತು. ಅವರು ಅಬಕಾರಿ ಮತ್ತು ಗ್ರಾಮೀಣ ಕೈಗಾರಿಕಾ ಸಚಿವರಾಗಿ ಕಾರ್ಯ ನಿರ್ವಹಿಸಿದರು. ಮತ್ತೆ 1967ರಲ್ಲಿ ಅವರು ಪುನರಾಯ್ಕೆಗೊಂಡರು. ಈ ಬಾರಿ ಅವರಿ ಸಾರಿಗೆ ಪ್ರವಾಸೋದ್ಯಮ ಮತ್ತು ವಸತಿ ಖಾತೆ ಸಚಿವರಾಗಿ ಪ್ರಮಾಣ ಸ್ವೀಕರಿಸಿದರು. ಸುದೀರ್ಘವಾಗಿ ಸೇವೆ ಸಲ್ಲಿಸಿದರು. 1972ರಲ್ಲಿ ಆಯ್ಕೆಗೊಂಡು ಜನಪ್ರಿಯ ನಾಯಕರಾದರು. ಇವೆಲ್ಲ ಘಟನೆಗಳು ನೋಡಿದರೆ ಅವರ ಅಪಾರವಾದ ಜನಪ್ರಿಯತೆ ಎಂಥದೆಂದು ನಮಗೆ ಗೊತ್ತಾಗುತ್ತದೆ. ನಾಲ್ಕುಬಾರಿ ಗುಲಬರ್ಗಾದಿಂದ ವಿಧಾನಸಭೆಗೆ ಆಯ್ಕೆಗೊಂಡು ಜನಪ್ರಿಯ ನಾಯಕರಾಗಿದ್ದ ಮೊಹಮ್ಮದ ಅಲಿ ಸಾಹೇಬರು. 1973ರ ಸಾರ್ವತ್ರಿಕ ಚುನಾವಣೆಯಲ್ಲಿ ಮತ್ತೆ ಸ್ಪರ್ಧಿಸಿದರು. ಇವರೆದುರಿಗೆ, ಅನಂತ ಶರ್ಮಾ, ಸಾದತ್ ಹುಸೇನ, ಇಕ್ಬಾಲ್ ಅಹ್ಮದ ಸರಡಗಿ, ಗಂಗಾಧರ ನಮೋಶಿ, ಸರದಾರ ಶರಣ ಗೌಡ ಇನಾಮದಾರ ಸ್ಪರ್ಧಿಸಿದ್ದರು. ಎಲ್ಲಕ್ಕಿಂತ ಚಿಕ್ಕ ವಯಸ್ಸಿನ ಮತ್ತು ಮುಸ್ಲಿಂ ಜನಾಂಗದ ನವ ಯುವಕ ಹಾಗೂ ಇವರ ರಾಜಕೀಯ ಗರಡಿಯಲ್ಲಿ ಬೆಳೆದು, ಚುನಾವಣೆಯಲ್ಲಿ ಕೆಲಸ ಮಾಡಿದ 28 ವರ್ಷದ ಖಮರುಲ್ ಇಸ್ಲಾಂ ಮುಸ್ಲಿಂ ಲೀಗ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದರು. ಈ ಚುನಾವಣೆಯಲ್ಲಿ ಒಂದು ಹೊಸ ತಿರುವುಉಂಟಾಯಿತು. ಮುಸ್ಲಿಂ ಲೀಗ ಅಭ್ಯರ್ಥಿ ಮೊಹಮ್ಮದ ಅಲಿ ಅವರಿಗಿಂತ 18 ಸಾವಿರ ಅಧಿಕ ಮತಗಳಿಂದ ಜಯಶಾಲಿಯಾದರು. ಆಗ ಮೊಹಮ್ಮದ ಅಲಿ ಅವರು ಖಿನ್ನ ಮನಸ್ಕರಾದರು. ಈ ಸೋಲು ಅವರಿಗೆ ಪ್ರತಿಷ್ಠೆಯ ಪ್ರಶ್ನೆಯಾಯಿತು. ಬಹಳಷ್ಟು ನೊಂದುಕೊಂಡರು. ನಿಜವಾಗಿ ಅವರು ಎಷ್ಟು ಜನರಿಗೆ ಕೆಲಸ ಕೊಟ್ಟಿದ್ದರೋ, ಎಷ್ಟು ಜನರಿಗೆ ಸಹಾಯ ಮಾಡಿದ್ದರೋ ಅಷ್ಟು ಜನ ಮತ ಹಾಕಿದರೂ ಗೆಲ್ಲುತ್ತಿದ್ದರು. ಆದರೆ ಮುಸ್ಲಿಂ ಲೀಗ ಪಕ್ಷದ ಅಭ್ಯರ್ಥಿ, ಮುಸ್ಲಿಂ ಕೋಮು ಭಾವನೆ ಕೆರಳಿಸಿ ಈ ರೀತಿ ಗೆಲುವು ಪಡೆದರೆಂದು ಆರೋಪಿಸಲಾಯಿತು. ಇಲ್ಲಿಂದ ಖಮರುಲ್ ಇಸ್ಲಾಂ ಅವರ ರಾಜಕೀಯ ವರ್ಚಸ್ಸು ಪ್ರಾರಂಭವಾಯಿತು. ಖಮರುಲ್ ಇಸ್ಲಾಂ ಶಾಸಕರಾಗಿ, ಸಚಿವರಾಗಿ, ಲೋಕಸಭಾ ಸದಸ್ಯರಾಗಿ ಪ್ರಭಾವಶಾಲಿ ನಾಯಕರಾಗಿ ಬೆಳೆದರು. ಇದೆಲ್ಲವು ಗಮನಿಸಿದ ಮೊಹಮ್ಮದ ಅಲಿ ಸಾಹೇಬರು ಕಲಬುರ್ಗಿ ಜಿಲ್ಲೆಯ ಬದಲಾದ ರಾಜಕೀಯ ವಾತಾವರಣದಲ್ಲಿ ತಾವು ಅಪ್ರಸ್ತುತರಾಗಿದ್ದನ್ನು ಅರಿತುಕೊಂಡರು. ಅವರು ಬೆಂಗಳೂರಿನಲ್ಲಿಯೇ ವಾಸಿಸತೊಡಗಿದರು. 21-2-1983ರಲ್ಲಿ ತೀವ್ರ ಹೃದಯಾಘಾತಕ್ಕೆ ಒಳಗಾಗಿ ಕೊನೆಯುಸಿರೆಳೆದರು. ಅಪಾರವಾದ ಸ್ನೇಹ ಬಳಗವನ್ನು ತ್ಯಜಿಸಿ, ಲೋಕ ಕಲ್ಯಾಣ ಕಾರ್ಯವನ್ನು ಮುಗಿಸಿ, ಕಣ್ಮರೆಯಾದರು.

ಆದರೆ ಅವರ ಸ್ನೇಹಮಯಿ ಗುಣವನ್ನು ಕರುಣಾಮಯ ಹೃದಯವನ್ನು ಜನತೆ ಇಂದಿಗೂ ಸ್ಮರಿಸಿಕೊಳ್ಳುತ್ತಾರೆ. ಮೊಹಮ್ಮದ ಅಲಿ ಅವರು ಕಾಂಗ್ರೆಸ್‌ನ ಹಿರಿಯ ನಾಯಕರಾಗಿ, ಸಚಿವರಾಗಿ, ನಿರ್ಣಾಯಕ ಮಹತ್ವದ ಪಾತ್ರ ವಹಿಸುವಾಗ ಈಗಿನ ಮುಖ್ಯಮಂತ್ರಿಗಳಾದ ಧರ್ಮಸಿಂಗ್ ಮತ್ತು ಕೆ.ಪಿ.ಸಿ.ಸಿ ಅಧ್ಯಕ್ಷರಾದ ಮಲ್ಲಿಕಾರ್ಜುನ ಖರ್ಗೆ ಅವರು ಶಿಷ್ಯರು ಮತ್ತು ಶಾಸಕರಾಗಿದ್ದರು. ಈಗಿನ ಲೋಕಸಭಾ ಸದಸ್ಯ ಇಕ್ಬಾಲ್ ಅಹ್ಮದ ಸರಡಗಿ, ಖಮರುಲ್ ಇಸ್ಲಾಂ ಇವರ ಆಪ್ತ ವಲಯದಲ್ಲಿದ್ದರು. ಅವರು ಹೇಳಿದ ಮಾತುಗಳನ್ನು ಇಲ್ಲಿ ಉಲ್ಲೇಖಿಸಬಹುದು.

ಮೊಹಮ್ಮದ ಅಲಿ ಸಾಹೇಬರು ಒಬ್ಬ ಒಳ್ಳೆಯ ಮನುಷ್ಯರು. ಅವರು ಒಳ್ಳೆಯ ವ್ಯಕ್ತಿಯೆಂದು ಇಡಿ ಕಲಬುರ್ಗಿ ಜಿಲ್ಲೆ ಹೇಳುತ್ತಿತ್ತು. ಈ ಜಿಲ್ಲೆಯ ಮತ್ತು ಹೈದ್ರಾಬಾದ ಕರ್ನಾಟಕ ಪ್ರದೇಶದ ಅಭಿವೃದ್ಧಿಯ ಸುಂದರ ಕನಸು ಹೊಂದಿದ್ದರು. ವಿರೇಂದ್ರ ಪಾಟೀಲ, ಚಂದ್ರಶೇಖರ ಪಾಟೀಲ, ಮಹಾದೇವಪ್ಪ ರಾಂಪೂರೆ, ಧರ್ಮರಾವ್ ಅಫಜಲಪೂರಕರ್ ಅವರಂಥ ನೂರಾರು ನಾಯಕರಿಗೆ ನೇತಾರರಾಗಿದ್ದರು. ಅವರ ಸೇವೆ ಸಹಾಯ ಪಡೆಯದ ನಾಗರಿಕರಿಲ್ಲವೆಂದು ಹೇಳಬಹುದು. ಆಡು ಮುಟ್ಟದ ಗಿಡವಿಲ್ಲ. ಮೊಹಮ್ಮದ ಅಲಿಯವರಿಂದ ಸಹಾಯ ಪಡೆಯದ ವ್ಯಕ್ತಿಯಿಲ್ಲವೆಂದು ಹೇಳಬಹುದು. ಎಲ್ಲರೊಂದಿಗೆ ಬೆರೆಯುವ ಸರಳತನ ಸಾದಾತನ ಅವರ ಬದುಕಿನ ವೈಶಿಷ್ಟ್ಯವಾಗಿತ್ತು. ಸದಾ ಸುಖಿ ಹಸನ್ಮುಖಿ ಕಳೆ ಅವರದು. ನಗುತ್ತ ನಗಿಸುತ್ತ ಬದುಕಿದವರು. ಮೌಲಿಕವಾದ ವಿಚಾರಗಳುಳ್ಳ ತೂಕದ ವ್ಯಕ್ತಿಯಾಗಿದ್ದರು. ಮೌಲ್ಯಾಧಾರಿತ ರಾಜಕೀಯಕ್ಕೆ ಬೆಲೆ ಕೊಟ್ಟರು. ಸಣ್ಣತನ ಸ್ವಾರ್ಥ ಭಾವನೆಗಳು ಅವರ ಸಮೀಪಕ್ಕೆ ಬರಲಿಲ್ಲ. ಅವರು ಆಕಸ್ಮಿಕವಾಗಿ ಮುಸ್ಲಿಂರಾಗಿ ಹುಟ್ಟಿದರೂ ಬೆಳೆದುದ್ದೆಲ್ಲ ಹಿಂದೂ ಪರಿಸರದಲ್ಲಿ. ಕೊನೆ ಕೊನೆಯಲ್ಲಿ ಅವರು ಲೋಕ ನಾಯಕರ ಅಗ್ರಗಣ್ಯ ಪಂಕ್ತಿಯಲ್ಲಿ ಸೇರಿ ಹೋದರು. ಅವರ ಕರುಣಾಮಯ ಹೃದಯ ಅಗಲಿ ಹೋದರೂ ಕಲಬುರ್ಗಿಯ ಜನತೆಗಾಗಿ ಸದಾ ಮಿಡಿಯುತ್ತಿರುತ್ತದೆ ಎಂಬುದು ಇಲ್ಲಿಯ ಜನರ ಭಾವನೆಯಾಗಿದೆ.

## ೮. ಚಲೇ ತೋ ಚಲೇ ನಹಿತೋ ಮೊಹಮ್ಮದ ಅಲಿ

ಕಲಬುರ್ಗಿ ಜನತೆಗೆ ಮೊಹಮ್ಮದ ಅಲಿ ಎಷ್ಟು ಅನಿವಾರ್ಯದ ವ್ಯಕ್ತಿಯಾಗಿದ್ದರೆಂಬುದು ಇದರ ಮೇಲೆ ತಿಳಿಯುತ್ತದೆ. ಅವರ ನಾಯಕತ್ವದ ಮೇಲೆ ಜನ ಸಾಮಾನ್ಯ ಎಂಥ ವಿಶ್ವಾಸವಿರಿಸಿದ್ದನೆಂಬುದು ನಮ್ಮ ಅರಿವಿಗೆ ಬರುತ್ತದೆ. ನಮ್ಮ ಸಂಸಾರದ ರಥ ನಮ್ಮ ವೈಯುಕ್ತಿಕ ಮಟ್ಟದಲ್ಲಿ ಶಕ್ತಿಗನುಸಾರವಾಗಿ ಎಳೆಯೋಣ. ನಿಂತ ಹೊತ್ತಿಗೆ ಮೊಹಮ್ಮದ ಅಲಿ ಸಾಹೇಬರು ಇದ್ದಾರೆ ಯಾಕೆ ಚಿಂತಿಸೋಣ ಎಂದು ಹೇಳುತ್ತಿದ್ದರು. ಪ್ರತಿಯೊಬ್ಬ

ಬಡವ, ಕೂಲಿಕಾರ, ಕೃಷಿ ಕಾರ್ಮಿಕ ಅವರು ಮಾಡುವ ಸಹಾಯದ ಮೇಲೆ ಅಷ್ಟೊಂದು ಭರವಸೆಯಿರಿಸಿಕೊಂಡಿದ್ದ. ಮೊಹಮ್ಮದ ಅಲಿ ಅವರಿಗೆ ಕೊನೆಯ ಅಸ್ತ್ರವಾಗಿದ್ದರು. ಎಲ್ಲಿಯೂ ಬಗೆ ಹರಿಯದ ಸಮಸ್ಯೆಗಳು ಅವರಲ್ಲಿ ಬಗೆ ಹರಿಯುತ್ತಿದ್ದವು. ಅವರ ಹತ್ತಿರ ಸಮಸ್ಯೆ ತೆಗೆದುಕೊಂಡು ಹೋದರೆ ಸಮಾಧಾನ ಮತ್ತು ಪರಿಹಾರ ಎರಡೂ ದೊರೆಯುತ್ತಿದ್ದವು. ಅವರು ರಾಜಕೀಯ ಸಂತರಾಗಿದ್ದರು. ಯಾವುದೇ ಕೆಲಸವಿರಲಿ ಅವರವರ ಮಟ್ಟದಲ್ಲಿ ಮಾಡಿ ಮುಗಿಸುತ್ತಿದ್ದರು. ಅವರ ಮಾತು ಯಾರೂ ಮೀರುತ್ತಿರಲಿಲ್ಲ. ಅಷ್ಟೊಂದು ವರ್ಚಸ್ಸಿನ ಅಪರೂಪದ ರಾಜಕಾರಣಿಯಾಗಿದ್ದರು. ಮತ್ತು ಎಂಥ ಕಠಿಣತರವಾದ ಸಮಸ್ಯೆಯಿರಲಿ ಅದು ನೀರು ಕುಡಿದಷ್ಟು ಸರಳಗೊಳಿಸಿಬಿಡುತ್ತಿದ್ದರು. ಆಗಿಂದಾಗ್ಗೆ ಸಂಬಂಧಪಟ್ಟವರಿಗೆ ಕರೆಯಿಸಿ, ಆಗ ಬಾ, ಈಗ ಬಾ ಹೋಗಿ ಬಾ ಎಂದು ಯಾರನ್ನೂ ಇಪ್ಪತ್ತು ಬಾರಿ ಅಲೆದಾಡಿಸಿದವರಲ್ಲ. ಜನ ಕಲ್ಯಾಣಕ್ಕಾಗಿ ಜನತೆ ಕೊಟ್ಟ ಅಧಿಕಾರವನ್ನು ಸಂಪೂರ್ಣವಾಗಿ ಸದುಪಯೋಗಪಡಿಸಿ ಕೊಂಡಿದ್ದರು. ಪಾಪ! ಹಳ್ಳಿಗಳಿಂದ ಏಳುತ್ತ ಬೀಳುತ್ತ ಬಂದು ನನ್ನನ್ನು ಜನತೆ ಒಮ್ಮೆ ಕಾಣುವುದರೊಳಗೆ ಸುಸ್ತಾಗಿರುತ್ತಾರೆ. ಅಂಥವರನ್ನು ಮತ್ತೊಮ್ಮೆ ಬಾ, ನಾಳೆ ಬಾ ನೋಡೋಣ, ಮಾಡೋಣ ಅನ್ನುವುದು ಎಲ್ಲಿ. ಅವರು ಬಂದಾಗಲೆ ಕೆಲಸ ಮಾಡಿ ಕೊಟ್ಟರೆ ಅವರೂ ಖುಷಿಯಾಗುತ್ತಾರೆ. ಮತ್ತು ನನಗೂ ಒಂದು ಭಾರ ಕಡಿಮೆಗೊಂಡು ಮ್ಯಾನಸಿಕವಾಗಿ ಖುಷಿಯಾಗಿರುತ್ತೇನೆ. ಹೃದಯ ಹಗುರವಾಗುತ್ತದೆಯೆಂದು ಹೇಳುತ್ತಿದ್ದರಂತೆ. ಜನತೆ ನನ್ನಿಂದ ಕೆಲಸ ಮಾಡಿಸಿಕೊಂಡು, ಸಂತೋಷದಿಂದ ಹರಕೆ ಕೊಟ್ಟರೆ ನನ್ನ ಅಧಿಕಾರವೂ ನಾಲ್ಕು ದಿನ ಮುಂದುವರೆಯಬಹುದು ಎಂಬ ಪ್ರಜ್ಞೆ ಹೊಂದಿದ್ದರೆಂದು ಆಗಾಗ ಅವರು ಹೀಗೆ ಹೇಳುತ್ತಿದ್ದರೆಂದು ಅವರ ಸಮೀಪವರ್ತಿಗಳಾಗಿದ್ದವರು ಸ್ಮರಿಸಿಕೊಳ್ಳುತ್ತಾರೆ.

ಯಾರೇ ಬರಲಿ, ಯಾವ ಕೆಲಸವೇ ತೆಗೆದುಕೊಂಡು ಬರಲಿ, ಮೊದಲು ಬೆಟ್ಟಿಯಾಗಿ ಎಲ್ಲರಿಂದ ಏನು ಕೆಲಸವೆಂದು ಕೇಳುತ್ತಿದ್ದರು. ಜೊತೆಗೆ ತಮ್ಮ ಆಪ್ತ ಕಾರ್ಯದರ್ಶಿಗೆ ಟಿಪ್ಪಣಿ ಮಾಡಿಕೊಳ್ಳಲು ಹೇಳುತ್ತಿದ್ದರು. ನಂತರ ಕುಳಿತು ಒಬ್ಬೊಬ್ಬರನ್ನು ಕರೆಯಿಸಿ, ಫೋನು ಮಾಡಿ ಅದಕ್ಕೆ ಸೂಕ್ತ ಪರಿಹಾರ ನೀಡುತ್ತಿದ್ದರು. ಈ ರೀತಿ ಸಮಾಧಾನದಿಂದ ಸಮಸ್ಯೆಗಳನ್ನು ಆಲಿಸುವ, ಅದಕ್ಕೆ ಪರಿಹಾರ ನೀಡುವ ರಾಜಕಾರಣಿಯನ್ನು ಕಾಣುವುದು ತೀರ ಅಪರೂಪವೆಂದು ಅವರನ್ನು ಕಂಡ ಕಲಬುರ್ಗಿ ಹಿರಿಯರು ಹೇಳುತ್ತಾರೆ. ಈಗಿನ ರಾಜಕಾರಣಿಗಳು ಅವರ ಆದರ್ಶಗಳನ್ನು ಸ್ವಲ್ಪ ಭಾಗ ಅನುಸರಿಸಿದರೆ ಸಾಕು ಎಷ್ಟೊ ಒಳ್ಳೆಯವರೆನ್ನಿಸಿಕೊಳ್ಳುತ್ತಾರೆ. ಮೊಹಮ್ಮದ ಅಲಿ ಅವರ ಮಾದರಿ ಇಂದಿನ ಯುವ ರಾಜಕಾರಣಿಗಳಿಗೆ ತೀರ ಅವಶ್ಯಕವೆಂದು ಹೇಳುತ್ತಾರೆ. ಮೊಹಮ್ಮದ ಅಲಿ

ಸಾಹೇಬರು ಶಿಕ್ಷಣ ಸಂಸ್ಥೆಗಳನ್ನು ಕಟ್ಟಲು ಹೋಗಲಿಲ್ಲ. ಮಸಿದಿ ಮಂದಿರ ನಿರ್ಮಾಣ ಮಾಡುವ ಗೊಡವೆಗೆ ಬೀಳಲಿಲ್ಲ. ತಮ್ಮ ಸ್ವಾರ್ಥ ಸಾಧನೆಗಾಗಿ ಕೋಮು ಗಲಭೆಗಳು ಎಬ್ಬಿಸಲಿಲ್ಲ. ತಮ ಪ್ರತಿಷ್ಠೆ ವರ್ಚಸ್ಸು ಬೆಳೆಸಿಕೊಳ್ಳಲು ಯಾರನ್ನೂ ಬಲಿಕೊಡಲಿಲ್ಲ. ಅತ್ಯಂತ ಪ್ರೀತಿ ಮತ್ತು ಸ್ನೇಹದಿಂದ ಬಾಳಿದರು. ಸಕಲ ಜೀವಾತ್ಮರಿಗೆ ಲೇಸು ಬಯಸಿದರು. ಸರ್ವೇಜನಾಃ ಸುಖಿನೋಭವಂತುಃ ಎಂಬ ವಾಕ್ಯ ತಮ್ಮ ಬದುಕಿನ ಉಸಿರಾಗಿಸಿಕೊಂಡಿದ್ದರು. ಹೀಗಾಗಿ ಮೊಹಮ್ಮದ ಅಲಿ ಸಾಹೇಬರು ಕಲಬುರ್ಗಿ ಜನತೆಯ ನೂರು ಜನರ ಬಾಯಲ್ಲಿ ಸ್ತುತಿಸಲ್ಪಡುತ್ತಿದ್ದರೆ ವಿನಃ ಯಾರ ಹಲ್ಲಿನಲ್ಲಿಯೂ ಅವರ ಹೆಸರು ಕಡಿಯುತ್ತಿರಲಿಲ್ಲ. ಎಷ್ಟೋ ಜನ ತಮ್ಮ ಸಂಸಾರ ಆರ್ಥಿಕ ತೊಂದರೆಯಿಂದ ಮುಗ್ಗರಿಸಿದರೆ, ತತ್ತರಿಸಿ ಹೋದರೆ ಇವರಲ್ಲಿಗೆ ಬಂದು ಮದುವೆ, ಮುಂಜಿವೆ, ಓದು, ಬರಹಗಳಿಗೆ ಸಹಾಯ ಪಡೆದಿದ್ದಾರೆ. ಅವರಿಂದ ಎಂ. ಎಸ್. ಆರ್. ಟಿ. ಸಿಯಲ್ಲಿ ಅವರ ಶಿಫಾರಸ್ಸಿನಿಂದ ನೇರ ನೇಮಕಾತಿ ಹೊಂದಿದವರು ಲಕ್ಷ ಲಕ್ಷ ಜನರಿದ್ದಾರೆ. ಅವರ ಕಾಲದಲ್ಲಿ ಓದಿ ಬರೆದವರ ಸಂಖ್ಯೆ ತುಂಬಾ ಕಡಿಮೆ. ಅವರವರ ಅರ್ಹತೆಗನುಸಾರವಾಗಿ ಕೆಲಸ ಕೊಟ್ಟರು. ಆಗಿನ ಕಾಲದಲ್ಲಿ ಸರಕಾರಿ ಕೆಲಸಗಳ ಒಂದು ಅಕ್ಷಯ ಪಾತ್ರೆಯಂತಿತ್ತು. ಬೇಡಿದವರಿಗೆಲ್ಲ ಕೊಡಬಹುದಾಗಿತ್ತು. ಆದರೆ ಬೇಡುವವರೆ ಕಡಿಮೆಯಿದ್ದರು. ಇದಕ್ಕಾಗಿ ಎಷ್ಟೋ ಬಾರಿ ಮೊಹಮ್ಮದ ಅಲಿ ಸಾಹೇಬರು ಕೊರಗಿದ್ದಾರೆ. ಜನ ಸಾಕ್ಷರಾಗಬೇಕು. ಅನಕ್ಷರತೆ ಹೋಗಲಾಡಿಸಬೇಕು. ಜನರಿಗೆ ತಿಳುವಳಿಕೆ ಬರಬೇಕು. ಅಂದಾಗ ಪ್ರಜಾಸತ್ತಾತ್ಮಕ ವ್ಯವಸ್ಥೆ ಯಶಸ್ವಿಯಾಗುತ್ತದೆಯೆಂದು ಹೇಳುತ್ತಿದ್ದರು. ಅಣ್ಣಾರಾವ ಗಣಮುಖಿ ಮತ್ತು ಮೊಹಮ್ಮದ ಅಲಿಯವರು ಸೇರಿ ಎಷ್ಟೋ ಬಾರಿ ಮಾತನಾಡಿ, ಒಂದು ಶೈಕ್ಷಣಿಕ ಆಂದೋಲನವೇ ಪ್ರಾರಂಭಿಸಿದ್ದಾರೆ. ಒಂದು ಮಾತಿನಲ್ಲಿ ಹೇಳುವುದಾದರೆ ಹೈದ್ರಾಬಾದ ಕರ್ನಾಟಕದಲ್ಲಿ ಶಾಲೆ ಕಾಲೇಜುಗಳು ಸ್ಥಾಪನೆಯಾದರೆ ಅದರ ಕೀರ್ತಿ ಅಣ್ಣಾರಾವ ಗಣಮುಖಿಯವರಿಗೆ ಸಲ್ಲಬೇಕು. ಯಾವುದೆ ರಸ್ತೆ, ಬಸ್ಸಿನ ಸೌಕರ್ಯ, ಬಸ್ ನಿಲ್ದಾಣ, ಸ್ಥಾಪನೆಯಾದರೆ ಅದರ ಕೀರ್ತಿ ಮೊಹಮ್ಮದ ಅಲಿಯವರಿಗೆ ಸಲ್ಲಬೇಕು. ಹಾಗೆ ಕೆಲಸ ಮಾಡಿದ್ದಾರೆ. ಈ ಇಬ್ಬರ ಮಹನೀಯರ ಸ್ಮಾರಕಗಳೆ ಇಲ್ಲವಲ್ಲ ಎಂದು ಕೇಳಿದರೆ ಅವರ ಅಭಿಮಾನಿ ಹಿರಿಯರೊಬ್ಬರು ಹೀಗೆ ಹೇಳುತ್ತಾರೆ - ಅವರ ಪುತ್ಥಳಿ ಕುಳ್ಳಿರಿಸಿ ಸ್ಮಾರಕ ಮಾಡುವ ಅವಶ್ಯಕತೆಯಿಲ್ಲ, ಗಣಮುಖಿ ಯವರು ಶಿಕ್ಷಣ ಸಚಿವರಾಗಿದ್ದಾಗ ಸ್ಥಾಪನೆಗೊಂಡ ಶಾಲೆಗಳೆಲ್ಲ ಅವು ಗಣಮುಖಿಯವರ ಸ್ಮಾರಕಗಳೆ ಆಗಿವೆ. ಮೊಹಮ್ಮದ ಅಲಿ ಸಾಹೇಬರು ಸಾರಿಗೆ ಸಚಿವರಾಗಿದ್ದಾರೆ ಅವರು ನಿರ್ಮಿಸಿದ ಬಸ್ ನಿಲ್ದಾಣ ಮತ್ತು ರಸ್ತೆಗಳು ಅವರ ಶಾಶ್ವತ ಸ್ಮಾರಕಗಳಾಗಿವೆ ಅಂದಾಗ ಬೇರೆ ಸ್ಮಾರಕದ ಅವಶ್ಯಕತೆ ಏನಿದೆ? ಎಂದು

ಕೇಳಿದರು. ಅವರು ಜನತೆಗೆ ತೋರಿಸುವುದಕ್ಕಾಗಿ , ಜನರಿಂದ ಹೌದೆನಿಸಿಕೊಳ್ಳುವುದಕ್ಕಾಗಿ ಕೆಲಸ ಮಾಡುವುದಕ್ಕಿಂತ ಹೆಚ್ಚಾಗಿ ಆತ್ಮ ತೃಪ್ತಿಗಾಗಿ ಮಾಡಿದರು. ಜನಾಂಗದ ಕಲ್ಯಾಣ ಅವರ ಕೆಲಸದ ಮೂಲ ಗುರಿಯಾಗಿತ್ತು. ಹೀಗಾಗಿ ಸಾರ್ವಜನಿಕ ವಲಯದಲ್ಲಿ ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ಎಷ್ಟು ಸಾಧ್ಯವೋ ಅಷ್ಟು ಆಂದೋಲನ ರೂಪದಲ್ಲಿ ಕೆಲಸ ಮಾಡಿದ್ದಾರೆ. ಹೈದ್ರಾಬಾದ ಕರ್ನಾಟಕದ ಹುಲಿ ಮೊಹಮ್ಮದ ಅಲಿ ಎಂಬ ಖ್ಯಾತಿಗೆ ಒಳಗಾಗಿದ್ದಾರೆ.

## ೯. ಲೋಕ ನಾಯಕ

ಮೊಹಮ್ಮದ ಅಲಿಯವರು ಕಲಬುರ್ಗಿಯಂತಹ ಹಿಂದುಳಿದ ಜಿಲ್ಲೆಯಲ್ಲಿ ಜನಿಸಿದರೂ ಅವರು ನವದೆಹಲಿಯವರೆಗೆ ಬೆಳೆದಿದ್ದರು. ರಾಜ್ಯ ಮಟ್ಟದಲ್ಲಿ ಅವರ ವ್ಯಕ್ತಿತ್ವ ಸಂಪೂರ್ಣ ಬೆಳೆದಿತ್ತು. ರಾಷ್ಟ್ರಮಟ್ಟದ ರಾಜಕಾರಣದಲ್ಲಿ ಹೊಸ ಸಂಚಲನ ನೀಡಿದ್ದರು. ಅವರು ಮುಂದಿನ ದಿನಗಳಲ್ಲಿ ಬದುಕಿದ್ದರೆ, ಯಾವುದೇ ರಾಜ್ಯದ ರಾಜ್ಯಪಾಲರಾಗಿ, ಇಲ್ಲವೆ ರಾಯಭಾರಿಯಿಗೆ, ಉಪರಾಷ್ಟ್ರಪತಿ, ರಾಷ್ಟ್ರಪತಿಗಳಾಗುವ ಸಾಧ್ಯತೆಯಿತ್ತು. ಬದಲಾದ ರಾಜಕೀಯ ಸಂದರ್ಭದಲ್ಲಿ ಬಿರುಗಾಳಿಗೆ ತತ್ತರಿಸಿದ ಹಣ್ಣೆಲೆಯಂತೆ ಅವರು ಉದುರಿಬಿದ್ದರು. ಮನುಷ್ಯ ದೊಡ್ಡವನಲ್ಲ. ಸಮಯ ದೊಡ್ಡದು. ಸಮಯ ಯಾರನ್ನೂ ಬೇಕಾದರೂ ಏನು ಬೇಕಾದರೂ ಮಾಡಬಲ್ಲದು. ಕಲಬುರ್ಗಿಯ ಹುಲಿ, ಹೈದ್ರಾಬಾದ ಕರ್ನಾಟಕದ ಹುಲಿ ಎನ್ನಿಸಿಕೊಂಡಿದ್ದ ಮೊಹಮ್ಮದ ಅಲಿ ಒಂದು ಮೂಲೆ ಸೇರುವಂತಾಯಿತು. ಅವರ ಕೈಯೊಳಗೆ ಬೆಳೆದ ಅವರ ಶಿಷ್ಯ ಖಮರುಲ್ಲ ಇಸ್ಲಾಂ ಎದುರಿಗೆ ಭಾರಿ ಬಹುಮತದಿಂದ ಸೋಲುವಂತಾಯಿತು. ಇದಕ್ಕೆ ಕಾರಣ ವ್ಯಕ್ತಿಯಲ್ಲ. ಸಮಯ. ಮಹಾತ್ಮಾಗಾಂಧಿಯವರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅತ್ಯಂತ ಪ್ರಸ್ತುತರಾಗಿದ್ದರು. ಅವರ ಹೆಸರು ಕೇಳಿದರೆ ಜನ ರೋಮಾಂಚಿತರಾಗುತ್ತಿದ್ದರು. ಆದರೆ ಅದೇ ಗಾಂಧೀಜೀ ಈಗ ಬದುಕಿದ್ದರೆ ತುಂಬ ಅಪ್ರಸ್ತುತರಾಗುತ್ತಿದ್ದರು. ಒಂದೊಂದು ವ್ಯಕ್ತಿಗೆ ನಿಸರ್ಗ ಒಂದೊಂದು ಕಾಲಾವಕಾಶ ನೀಡುತ್ತದೆ. ಎಲ್ಲ ವ್ಯಕ್ತಿಗಳಿಗೆ ಎಲ್ಲ ಕಾಲ ಒಳ್ಳೆಯದಾಗಿ ಒದಗಿ ಬರಲು ಸಾಧ್ಯವಿಲ್ಲ. ನಮಗೆ ನಿಸರ್ಗ ಅಥವಾ ದೇವರು ಒಂದು ಒಳ್ಳೆಯ ಅವಕಾಶ ಕೊಟ್ಟಾಗ, ಸೇವೆ ಮಾಡಿ, ಇಲ್ಲವೆ ಸೇವೆ ಪಡೆದು ಕೃತಾರ್ಥರಾಗಬೇಕು. ಭೀಮಾ ಕೃಷ್ಣಾ ನದಿಗಳು ಮಳೆಗಾಲದಲ್ಲಿ ತುಂಬಿ ಹರಿಯುತ್ತವೆ. ಆದರೆ ಬೇಸಿಗೆ ಕಾಲದಲ್ಲಿ ತಳಕಾಣುತ್ತವೆ. ಹಾಗೆ ನಿಸರ್ಗದಲ್ಲಿ ಒಬ್ಬ ವ್ಯಕ್ತಿಗೆ ಒಂದು ಒಳ್ಳೆಯ ಅವಕಾಶ ಬರುತ್ತದೆ. ಬಂದಾಗಲೆ ಕೆಲಸ ಮಾಡಿ ಕಡೆಗಾಗಬೇಕು. ಗಾಳಿ ಬಿಟ್ಟ ಕೈಲೆ ತೂರಿಕೊಳ್ಳಿರಯ್ಯ. ಗಾಳಿ ನಿಮ್ಮ ಸ್ವಾಧೀನವಲ್ಲ ಕಂಡಿರಯ್ಯ ಶಿವಶರಣರೆಂಬ

ಬಿಟ್ಟ ಗಾಳಿಯಲ್ಲಿ ಬೇಗ ತೂರಿಕೊಂಡ ನಮ್ಮ ಅಂಬಿಗರ ಚೌಡಯ್ಯ ಎಂದು ಶರಣರು ಹೇಳುವಂತೆ ಒಳ್ಳೆಯ ಕೆಲಸ ಮಾಡಿ, ಕೀರ್ತಿ, ವಾರ್ತೆ, ಪಡೆಯಲಿಕ್ಕೆ ಒಂದು ಅವಕಾಶ ಬಂದಿರುತ್ತದೆ. ಬಂದಾಗ ಅಧಿಕಾರದ ದುರುಪಯೋಗವಾಗಬಾರದು. ಅದು ಸದುಪಯೋಗವಾಗಬೇಕು. ಅಧಿಕಾರ ಬೆಂಕಿಯಿದ್ದಂತೆ ಆದರಿಂದ ಸುಡಲೂಬಹುದು. ಅಡುಗೆ ಮಾಡಿ ಊಟ ಮಾಡಿಸಲೂಬಹುದು. ಸುಟ್ಟರೆ ಅವನು ಬೇಗ ನಾಶವಾಗುತ್ತಾನೆ. ಅಡುಗೆ ಮಾಡಿ ಉಣಿಸಿದರೆ ನಾಲ್ಕು ದಿನ ಬಾಳಿ ಬದುಕುತ್ತಾರೆ. ಹಾಗೆ ಮೊಹಮ್ಮದ ಅಲಿ ಸಾಹೇಬರು ನಾಲ್ಕು ಜನರಿಗೆ ಅಡುಗೆ ಮಾಡಿ, ಊಟ ಮಾಡಿಸಿ, ಬಾಳಿ ಬದುಕಿದವರು. ಅವರ ರಾಜಕೀಯ ವರ್ಚಸ್ಸು ಪ್ರಾರಂಭವಾದದ್ದು 1952 ರಲ್ಲಿ. ಮುಕ್ತಾಯವಾದದ್ದು 1972ರಲ್ಲಿ. ಸುಮಾರು ಇಪ್ಪತ್ತು ವರ್ಷಗಳ ಕಲಬುರ್ಗಿಯನ್ನು ಆಳಿದರು ಎಂದರೂ ತಪ್ಪಾಗಲಾರದು. ಅಷ್ಟೊಂದು ಪ್ರಭಾವಶಾಲಿ ವ್ಯಕ್ತಿಯಾಗಿದ್ದರು. ಈ ಅವಧಿಗೆ ನಾವು ಮೊಹಮ್ಮದ ಅಲಿ ಯುಗವೆಂದು ಕರೆಯುಬಹುದು. ಕಲಬುರ್ಗಿ ಇತಿಹಾಸದಲ್ಲಿ ತಮ್ಮ ಅಮೂಲ್ಯವಾದ ಸಾರ್ವಜನಿಕ ಬದುಕನ್ನು ಸುವರ್ಣಾಕ್ಷರಗಳಿಂದ ಬರೆದಿಡಬಹುದು. ಹಾಗೆ ಬಾಳಿ ಬದುಕಿ ಹೋಗಿದ್ದಾರೆ. ಅವರು 1944ರಲ್ಲಿ ವಕೀಲಿ ವೃತ್ತಿಯನ್ನು ತ್ಯಜಿಸಿ 1945ರಲ್ಲಿ ಕಾಂಗ್ರೆಸ್ ಪಕ್ಷಕ್ಕೆ ಸೇರಿ ರಾಜಕೀಯ ಜೀವನ ಪ್ರಾರಂಭಿಸಿದರು. 1983ರಲ್ಲಿ ಜೀವನ ಮುಕ್ತಾಯಗೊಳಿಸಿದರು. ಅವಿರತವಾಗಿ ಸರಾಸರಿ ನಾಲ್ಕು ದಶಕಗಳ ಕಾಲ ಸಾರ್ವಜನಿಕ ಜೀವನ ನಡೆಯಿಸಿದರು. 64 ವರ್ಷಗಳ ತುಂಬು ಜೀವನ ನಡೆಯಿಸಿದರು. ಹಾಗೆ ನೋಡಿದರೆ ಅವರದ್ದು ಸಾಯುವ ವಯಸ್ಸಲ್ಲ. 80ರವರೆಗೆ ಬದುಕುವ ಕಾಲವದು. ಆದರೆ ಒಳ್ಳೆಯವರನ್ನು ದೇವರು ಬೇಗ ಕರೆಯಿಸಿಕೊಳ್ಳುತ್ತಾನಂತೆ. ಹಾಗೆ ಅವರನ್ನು ಬೇಗ ಕರೆಯಿಸಿಕೊಂಡ. ಅವರು ಹೋದರೆಂದು ಅವರ ಅಭಿಮಾನಿಗಳು ಹೇಳುತ್ತಾರೆ.

ಅವರು ರಾಷ್ಟ್ರಮಟ್ಟದ ರಾಜಕಾರಣಿಗಳೊಂದಿಗೆ ಸಖ್ಯವಿರಿಸಿ ಕೊಂಡಿದ್ದರು. ದೇಶದ ಮೂಲೆ ಮೂಲೆಗಳಿಗೆ ಸಂಬಂಧವಿರಿಸಿಕೊಂಡಿದ್ದರು. ಆಗ ನಾಯಕರಾದ ವಿ.ವಿ.ಗಿರಿ, ಫಕ್ರೋದ್ದೀನ ಅಲಿ ಅಹ್ಮದ, ಬಿ.ಡಿ.ಜತ್ತಿ, ಇಂದಿರಾಗಾಂಧಿ, ಕಾಮರಾಜ ನಾಡಾರ, ಎಸ್. ನಿಜಲಿಂಗಪ್ಪ, ಡಾ. ಇಸ್ಮಾಯಿಲ್ ಅಬ್ದೇಜುಯಿ, ಪಿ.ಸಿ.ಶೇಠಿ, ಕೆ.ಕೆ.ಶಾಹಾ, ಅಲಿಯವರ ಜಂಗ, ಎಂ. ಚೆನ್ನಾರೆಡ್ಡಿ, ಅಕ್ಬರ ಅಲಿ ಖಾನ್, ಸ್ವರ್ಣ ಸಿಂಗ್, ಹೆರಿಡೊ ಜೋಡಿ, ಕೆ. ಕರುಣಾನಿಧಿ, ಎಸ್. ಎಂ. ಅಬ್ದುಲ್ಲಾ ಹೀಗೆ ರಾಷ್ಟ್ರಮಟ್ಟದಲ್ಲಿ ಸ್ನೇಹಿತರನ್ನು ಹೊಂದಿದರೆ, ಕರ್ನಾಟಕದ ಇದುವರೆಗಿನ ಎಲ್ಲ ಮುಖ್ಯಮಂತ್ರಿಗಳು ಮತ್ತು ಸಚಿವ ಸಂಪುಟದ ಸಚಿವರು, ಕೇಂದ್ರ ಸರ್ಕಾರದ ಮಂತ್ರಿಗಳು ಇವರ ಆತ್ಮೀಯರಾಗಿದ್ದರು.

ಸಿ.ಕೆ.ಜಾಫರ ಷರೀಫ, ಪ್ರಣಬ್ ಮುಖರ್ಜಿ, ಕೆ.ಸಿ.ಪಂತ, ರೆಹಮಾನ್ ಖಾನ್, ಎಂ.ವಿ. ರಾಜಶೇಖರನ್, ವೀರೇಂದ್ರ ಪಾಟೀಲ, ರಾಜಶೇಖರ ಮೂರ್ತಿ ಎಂ. ಎಸ್. ಗುರುಪಾದಸ್ವಾಮಿ, ಎಚ್.ಡಿ.ದೇವೇಗೌಡ ಇವರ ಒಡನಾಡಿಗಳಾಗಿದ್ದರು. ಗುಲಬರ್ಗಾದ ಸಜ್ಜಾದ ಸಾಹೇಬರ ಮತ್ತು ದೊಡ್ಡಪ್ಪ ಅಪ್ಪಾ ಅವರನ್ನು ಅತ್ಯಂತ ಪ್ರೀತಿ ವಿಶ್ವಾಸದಿಂದ ಕಾಣುತ್ತಿದ್ದರು. ಹೀಗಾಗಿ ಮೊಹಮ್ಮದ ಅಲಿ ಸಾಹೇಬರು ಕೆಳಗಿನ ಕೂಲಿ ಮಾಡುವ ಮನುಷ್ಯನಿಂದ ಹಿಡಿದು ರಾಷ್ಟ್ರಪತಿಗಳವರೆಗೆ ಬೇಕಾದ ಮನುಷ್ಯರಾಗಿದ್ದರು.

*ಕಲ್ಲಾಗು ಬೆಟ್ಟದಡಿ, ಹುಲ್ಲಾಗು ಮರದಡಿ*

*ಮನೆಗೆ ಮಲ್ಲಿಗೆಯಾಗು, ಬೆಲ್ಲ ಸಕ್ಕರೆಯಾಗು*

*ಎಲ್ಲರೊಳು ಒಂದಾಗು ಮಂಕು ತಿಮ್ಮ*

ಎನ್ನುವಂತೆ ಎಲ್ಲರೊಳು ಒಂದಾಗಿ, ಬೆಲ್ಲ ಸಕ್ಕರೆಯಾಗಿ ಬಾಳಿದರು. ಮಹಾನುಭಾವ ಬಸವಣ್ಣನವರು ಹೇಳುವಂತೆ,

*ಲೇಸೆನಿಸಿಕೊಂಡು ಐದು ದಿನ ಬದುಕಿದರೆ ಸಾಲದೆ?*

*ಲೇಸೆನಿಸಿಕೊಂಡು ನಾಲ್ಕು ದಿನ ಬದುಕಿದರೆ ಸಾಲದೆ?*

*ಲೇಸೆನಿಸಿಕೊಂಡು ಮೂರು ದಿನ ಬದುಕಿದರೆ ಸಾಲದೆ?*

*ಲೇಸೆನಿಸಿಕೊಂಡು ಎರಡು ದಿನ ಬದುಕಿದರೆ ಸಾಲದೆ?*

*ಲೇಸೆನಿಸಿಕೊಂಡು ಕೂಡಲ ಸಂಗನ ಶರಣರಲ್ಲಿ ಒಂದು ದಿನ ಬದುಕಿದರೆ ಸಾಲದೆ?*

ಎನ್ನುವಂತೆ, ಅವರು ಬದುಕಿದಷ್ಟು ದಿನಗಳು ಸಾರ್ಥಕವಾಗಿ ಬದುಕಿದರು. ಲೋಕನಾಯಕರಾಗಿ ಅಗಲಿದರು.

## ಅಧ್ಯಾಯ - 1
## ತಂಗಡಿ ಚಕ್ಕೆ ಕೈಗಾರಿಕೆ

**ಶ್ರೀ ಹನುಮಯ್ಯ (ಚಳ್ಳಕೆರೆ,) -**

ಸರ್ಕಾರದವರು ದಯವಿಟ್ಟು ಇದನ್ನು ತಿಳಿಸುವರೇ -

(ಎ) ಹರಿಜನರು ಬಹಳ ಕಾಲದಿಂದ ನಿರ್ವಹಿಸುತ್ತಾ ಬರುತ್ತಿರುವ ತಂಗಡಿ ಚಕ್ಕೆ ಕೈಗಾರಿಕೆಯ ಬಗ್ಗೆ ತಮಗೆ ತಿಳಿದಿದೆಯೇ;

(ಬಿ) ಗುಡಿ ಕೈಗಾರಿಕೆಗಳನ್ನು ಪರಿಶೀಲಿಸುವ ಕೆಲಸ ವಹಿಸಿರುವ ಅಧಿಕಾರಿಗಳು ಈ ಬಗ್ಗೆ ತಮ್ಮ ಗಮನ ಹರಿಸಿದ್ದಾರೆಯೇ ಅಥವಾ ಇಲ್ಲವೇ?

**ಮೊಹಮದ್ ಅಲಿ (ಅಬಕಾರಿ ಮತ್ತು ಗ್ರಾಮೀಣ ಕೈಗಾರಿಕಾ ಸಚಿವರು) -**

(ಎ) ತಂಗಡಿ ಚಕ್ಕೆ ಕೈಗಾರಿಕೆ ಎಂಬುದೇ ಇಲ್ಲ.

(ಬಿ) ಉದ್ಭವಿಸುವುದಿಲ್ಲ.

**ಶ್ರೀ ಟಿ. ಹನುಮಯ್ಯ** - ತಂಗಡಿ ಚಕ್ಕೆ ಕೈಗಾರಿಕೆ ಎಂಬುದಾಗಿ ಯಾವುದೂ ಇಲ್ಲವೆಂದು ಉತ್ತರ ಕೊಡೋಣವಾಗಿದೆ. ಹಾಗಾದರೆ, ಈ ಕೈಗಾರಿಕೆಯ ಲಕ್ಷಣ ಏನು?

**ಶ್ರೀ ಮೊಹಮದ್ ಅಲಿ** - ತಂಗಡಿ ಚಕ್ಕೆಯನ್ನು ಚರ್ಮ ಹದಮಾಡುವ ಉದ್ದೇಶಕ್ಕಾಗಿ ಬಳಸುತ್ತಾರೆ ಮತ್ತು ತಂಗಡಿ ಚಕ್ಕೆ ಒಂದು ಕೈಗಾರಿಕೆಯಲ್ಲ.

**ಶ್ರೀ ಟಿ. ಹನುಮಯ್ಯ** - ಇದು ಒಂದು ಕೈಗಾರಿಕೆಯಲ್ಲವೆಂದು ಹೇಗೆ ಹೇಳುತ್ತೀರಿ ಮತ್ತು ಅದನ್ನು ಹೇಗೆ ಸಾಬೀತುಪಡಿಸುತ್ತೀರಿ? ಈ "ಕೈಗಾರಿಕೆ"ಯ ಲಕ್ಷಣ ಏನು?

**ಶ್ರೀ ಮೊಹಮದ್ ಅಲಿ** - ಚಕ್ಕೆಯನ್ನು ತೆಗೆಯುವುದು ಕೈಗಾರಿಕೆಯಾಗುವುದಿಲ್ಲ.

**ಶ್ರೀ ಟಿ. ಹನುಮಯ್ಯ** - ತಂಗಡಿ ಚಕ್ಕೆಯನ್ನು ತೆಗೆಯುವುದು ಕೈಗಾರಿಕೆಯಾಗುವುದಿಲ್ಲ ಎಂದು ಹೇಳುವಾಗ ಕೈಗಾರಿಕೆಯೆನ್ನುವುದರ ಅರ್ಥವೇನು?

**ಮಾನ್ಯ ಸಭಾಧ್ಯಕ್ಷರು** - ತಾವು ಹಾಗೆ ಪರೀಕ್ಷೆಗೆ ನಿಲ್ಲಬಾರದು. ಏತಕ್ಕೆ ಅಲ್ಲ ಎಂಬುದಾಗಿ ಬೇಕಾಗಿದ್ದರೆ ಪ್ರಶ್ನೆ ಹಾಕಿ.

**ಶ್ರೀ ಜಿ. ವೆಂಕಟಯ್ಯ ಗೌಡ** - ಇದು ಒಂದು ಕೈಗಾರಿಕೆಯೇ ಅಥವಾ ಅಲ್ಲವೇ ಎಂಬುದಕ್ಕಿಂತ ಬಹಳ ಕಾಲದಿಂದಲೂ ಹರಿಜನರು ಚಕ್ಕೆಯನ್ನು ತೆಗೆಯುವಂತಹ ಕೆಲಸವನ್ನು ಮಾಡುತ್ತಿದ್ದಾರೆಯೇ ತಿಳಿಸಿ?

**ಶ್ರೀ ಮೊಹಮದ್ ಅಲಿ** – ಹೌದು. ಇದು ಹರಿಜನರ ಮುಖ್ಯ ಕಸುಬಾಗಿದೆ ಮತ್ತು ಚರ್ಮ ಹದಮಾಡುವುದಕ್ಕಾಗಿ ಅವರು ಈ ಚಕ್ಕೆಯನ್ನು ಬಳಸುತ್ತಿದ್ದಾರೆ.

**ಶ್ರೀ ಜಿ. ಶಿವಪ್ಪ** – ತಂಗಡಿ ಬಾರ್ಕ್ ತೆಗೆಯುವುದು ಒಂದು ಕೈಗಾರಿಕೆಯಲ್ಲವೆಂದು ಹೇಳಲಾಗಿದೆ. ಹಾಗಿದ್ದರೆ ಈ ಬಾರ್ಕ್ ತೆಗೆಯುವುದಕ್ಕೇನು ಹೆಸರು?

**ಶ್ರೀ ಮೊಹಮದ್ ಅಲಿ** – ಇದು ಚರ್ಮ ಹದಮಾಡುವ ಕಾರ್ಯದಲ್ಲಿ ಬಳಸುವಂಥ ಒಂದು ಕಚ್ಚಾ ಸಾಮಗ್ರಿ.

**ಶ್ರೀ ಜಿ. ಶಿವಪ್ಪ** – ಇದು ಒಂದು ಕೈಗಾರಿಕೆಯಲ್ಲದಿದ್ದರೆ ಇದನ್ನು ಮತ್ತೇನೆಂದು ಕರೆಯುತ್ತಾರೆ?

**ಸಭಾಧ್ಯಕ್ಷರು** – ಅದಕ್ಕೆ ಆಗಲೇ ಉತ್ತರ ಹೇಳಿದ್ದಾರೆ.

**ಡಾ. ಆರ್. ನಾಗನಗೌಡ** – ತಂಗಡಿ ಮರದ ಕಾಂಡದಿಂದ ಚಕ್ಕೆಯನ್ನು ತೆಗೆಯುವ ಮತ್ತು ಸಂಸ್ಕರಣ ಕೆಲಸಕ್ಕಾಗಿ ಇದನ್ನು ಒಣಗಿಸುವ ಕಾರ್ಯದಲ್ಲಿ ಭಾರೀ ಪ್ರಮಾಣದ ಜನ ತೊಡಗಿಲ್ಲ ಅಲ್ಲವೇ? ಈ ಕೈಗಾರಿಕೆಯನ್ನು ಸಂಘಟಿಸಲು ಸರ್ಕಾರ ಏನನ್ನಾದರೂ ಮಾಡಿದೆಯೇ?

**ಶ್ರೀ ಮೊಹಮದ್ ಅಲಿ** – ಇದನ್ನು ಪರಿಗಣಿಸಲಾಗುತ್ತದೆ.

**ಡಾ. ಆರ್. ನಾಗನಗೌಡ** – ಈ ಕೈಗಾರಿಕೆಯ ಕೆಲಸಗಾರರನ್ನು ಸಂಘಟಿಸುವುದಕ್ಕೆ, ಚಿತ್ರದುರ್ಗ ಜಿಲ್ಲೆಯಲ್ಲಿ ಒಂದು ಸಹಕಾರ ಸಂಸ್ಥೆ ಪ್ರಯತ್ನ ಮಾಡುತ್ತಿರುವುದು ಸರ್ಕಾರದವರಿಗೆ ತಿಳಿದಿದೆಯೇ?

**ಶ್ರೀ ಮೊಹಮದ್ ಅಲಿ** – ನನಗೆ ನೋಟೀಸ್ ಬೇಕು.

**ಶ್ರೀ ಬಿ.ಎನ್. ಬೋರಣ್ಣಗೌಡ** – ಈ ಕೈಗಾರಿಕೆಯಲ್ಲಿ ತುಂಬಾ ಜನ ತೊಡಗಿರುವುದು ನಿಮಗೆ ತಿಳಿದಿದೆಯೇ?

**ಮಾನ್ಯ ಸಭಾಧ್ಯಕ್ಷರು** – ಅದಕ್ಕೆ ಆಗಲೇ ಉತ್ತರ ಹೇಳಿದ್ದಾರೆ.

# ಅಬಕಾರಿ ಮಾರಾಟ

**ಶ್ರೀ ಮೊಹಮದ್ ಅಲಿ (ಅಬಕಾರಿ ಸಚಿವರು)** – ಸ್ವಾಮಿ ಸನ್ಮಾನ್ಯ ಸಭಾಧ್ಯಕ್ಷರೇ, ಮಾನ್ಯ ಮುಕ್ಕಣ್ಣಪ್ಪನವರು, ಬೇರೊಂದು ದಿನ ಅಬಕಾರಿ ಆದಾಯದಲ್ಲಿ ಈ ವರ್ಷನಲ್ವತ್ತರಿಂದ ಐವತ್ತು ಲಕ್ಷ ರೂಪಾಯಿ ಕಡಿಮೆಯಾಗಿದೆ ಮತ್ತು ಅಬಕಾರಿ ಮಾರಾಟದಲ್ಲಿ ಅನುಸರಿಸುತ್ತಿರುವ ಕಾರ್ಯವಿಧಾನದ ಬಗ್ಗೆ ಟೀಕೆ ಮಾಡಲಾಗುತ್ತಿದೆ ಎಂದು ಸದನದಲ್ಲಿ ತಿಳಿಸಿದರು.

ಸದಸ್ಯರ ಈ ಹೇಳಿಕೆಯನ್ನು ಸರಿಪಡಿಸಬೇಕಾಗುತ್ತದೆ...

**ಶ್ರೀ ಬಿ.ಕೆ. ಪುಟ್ಟರಾಮಯ್ಯ (ಚನ್ನಪಟ್ಟಣ)** – ಸ್ವಾಮಿ, ಮಾನ್ಯ ಸಚಿವರು ಯಾವ ಕಾರ್ಯವಿಧಾನದ ಬಗ್ಗೆ ಹೇಳುತ್ತಿದ್ದಾರೆ ಎಂಬುದನ್ನು ನಾನು ತಿಳಿಯಬಯಸುತ್ತೇನೆ.

**ಸನ್ಮಾನ್ಯ ಸಭಾಧ್ಯಕ್ಷರು** – ಹೇಳಿಕೆಯನ್ನು ಕೊಡಲು ಅವರು ಈಗ ಅನುಮತಿಯನ್ನು ಕೇಳುತ್ತಿದ್ದಾರೆ.

**ಶ್ರೀ ಮೊಹಮದ್ ಅಲಿ** – ಸನ್ಮಾನ್ಯ ಸಚಿವರ ಹೇಳಿಕೆಯು ದಾರಿ ತಪ್ಪಿಸುವಂತಿದೆ. ತುಂಬಾ ಮಹತ್ವದ ಸರ್ಕಾರದ ಆದಾಯಕ್ಕೆ ಸಂಬಂಧಿಸಿದ ವಿಷಯಗಳಿಗೆ ಸಂಬಂಧಿಸಿದಂತೆ ಮಾನ್ಯ ಸದಸ್ಯರ ಹೇಳಿಕೆ ಸರಿಯಲ್ಲ. ಈ ವರ್ಷ ಅಬಕಾರಿ ಮಾರಾಟದ ಸರಿಯಾದ ಲೆಕ್ಕವನ್ನು ಕೊಡುವುದು ಬಹಳ ಅವಶ್ಯವೆಂದು ಸರ್ಕಾರವು ಭಾವಿಸುತ್ತದೆ. ಆದ್ದರಿಂದ ಅಬಕಾರಿ ಮಾರಾಟದ ಲೆಕ್ಕವನ್ನು ಕೊಡಲು ಒಂದು ಹೇಳಿಕೆ ಕೊಡುವುದಕ್ಕೆ ನನಗೆ ಅನುಮತಿ ನೀಡಬೇಕೆಂದು ಸನ್ಮಾನ್ಯ ಸಭಾಧ್ಯಕ್ಷರನ್ನು ನಾನು ವಿನಂತಿಸುತ್ತೇನೆ.

**ಸನ್ಮಾನ್ಯ ಸಭಾಧ್ಯಕ್ಷರು** – ಆಗಬಹುದು.

**ಶ್ರೀ ಎಂ. ಮೊಹಮದ್ ಅಲಿ** – 1957–58ರ ಸಾಲಿನ ಅಬಕಾರಿ ಮಾರಾಟ...

**ಶ್ರೀ ಬಿ.ಕೆ. ಪುಟ್ಟರಾಮಯ್ಯ** – ಇದನ್ನು ಸದನದಲ್ಲಿ ಓದುವುದು ಅನುಮತೀಯವೇ?

**ಸನ್ಮಾನ್ಯ ಸಭಾಧ್ಯಕ್ಷರು** – ಅನುಮತಿಸಬಹುದಾಗಿದೆ. ಮಂತ್ರಿಗಳು ತಮ್ಮ ಹೇಳಿಕೆಗಳನ್ನು ಓದಿಹೇಳಬಹುದು, ಆದರೆ ಸದಸ್ಯರಿಗೆ ಈ ಅವಕಾಶವಿಲ್ಲ.

**ಶ್ರೀ ಮೊಹಮದ್ ಅಲಿ** – ಅಬಕಾರಿ ಮಾರಾಟವನ್ನು ಗೊತ್ತುಪಡಿಸಿದ ನಿಯಮಗಳಿಗನುಸಾರವಾಗಿಯೇ ವಾಡಿಕೆಯಂತೆ 1957–58ರ ಸಾಲಿನಲ್ಲಿನಡೆಸಲಾಯಿತು. ಹರಾಜಿಗೆ ಮುಂಚೆ, ಇರುವ ಪ್ರವೃತ್ತಿಗಳನ್ನು ಗೊತ್ತುಪಡಿಸಿಕೊಳ್ಳಲು ಮಾರಾಟ ಟೆಂಡರುಗಳನ್ನು ಕರೆಯಲಾಯಿತು. ಹರಾಜು ಮಾರಾಟಕ್ಕೆ ಮೊದಲು ಟೆಂಡರುಗಳನ್ನು ಕರೆಯುವ ಬಗ್ಗೆ ಕೆಲವು

ಆಕ್ಷೇಪಣೆಗಳಿದ್ದಂತೆ ತೋರುತ್ತದೆ. ಇದು ಹೊಸ ಪದ್ಧತಿಯೇನಲ್ಲ. ತುಂಬಾ ಹಿಂದಿನಿಂದಲೂ ಅಳವಡಿಸಿಕೊಂಡು ಬಂದಿರುವ ಪದ್ಧತಿ ಇದು. ಈ ಟೆಂಡರ್ ವ್ಯವಸ್ಥೆಯಲ್ಲಿ ಸ್ವಇಚ್ಛೆಯಿಂದ ಆಫರ್ ಮಾಡಲಾಗುತ್ತದೆ ಮತ್ತು ಹರಾಜುಗಳನ್ನು ಕೂಗಿದನಂತರವೂ ಹೆಚ್ಚಿನ ಬಿಡ್‌ಗಳನ್ನು ಮಾಡುವುದಕ್ಕೆ ಗುತ್ತಿಗೆದಾರರಿಗೆ ಮುಕ್ತ ಅವಕಾಶವಿದೆ. ಹರಾಜು ಮಾರಾಟಕ್ಕೆ ಮೊದಲೇ ಟೆಂಡರುಗಳನ್ನು ಕರೆಯುವುದರಿಂದ ಹೆಚ್ಚಿನ ಪ್ರಮಾಣದ ಆಫರ್‌ಗಳನ್ನು ನೀಡಲು ಗುತ್ತಿಗೆದಾರರಿಗೆ ನಿರ್ಬಂಧವೇನಿಲ್ಲ. ಬಹಳ ಕಾಲದಿಂದ ಮತ್ತು ಈ ವರ್ಷವೂ ಅಳವಡಿಸಿಕೊಂಡಿರುವ ಪದ್ಧತಿಯಿಂದ ಅಬಕಾರಿ ಬಾಡಿಗೆ ವರಮಾನಕ್ಕೆ ವಾಸ್ತವವಾಗಿ ಯಾವುದೇ ಬಾಧಕವಾಗುವುದಿಲ್ಲ. ಗುತ್ತಿಗೆದಾರರಿಗೆ ಮಾರಾಟವಾದನಂತರವೂ ಅಬಕಾರಿ ಮಾರಾಟ ಮಾಡಲು ಬಯಸುವ ಗುತ್ತಿಗೆದಾರರ ಅಪೇಕ್ಷೆಯನ್ನು ಅವಲಂಬಿಸಿರುತ್ತದೆ. ಇಡೀ ಬೆಂಗಳೂರುನಗರ, ಸಿವಿಲ್ ಏರಿಯಾ ಮತ್ತು ತಾಲೂಕುಗಳಿಗೆ ಸಂಬಂಧಿಸಿದಂತೆ ಅಂಗಡಿಗಳನ್ನು ಬಿಡಿಬಿಡಿಯಾಗಿ ಮಾರಾಟ ಮಾಡಬೇಕೇ ಹೊರತು ಗುಂಪುಗಳಲ್ಲಿ ಅಲ್ಲ ಎಂದು ಕೆಲವು ಮೂಲಗಳಿಂದ ಸಲಹೆಗಳು ಬಂದಿರುವಂತೆ ತೋರುತ್ತದೆ.

ಮೊದಲಿನಿಂದಲೂ, ಬೆಂಗಳೂರುನಗರ ಮತ್ತು ತಾಲೂಕುಗಳಲ್ಲಿ ಎಲ್ಲ ಅಂಗಡಿಗಳನ್ನು ಒಂದುಗೂಡಿಸುವ ಪದ್ಧತಿ ಇದೆ. ನಿಯಮಗಳ ಪ್ರಕಾರ, ಅಂಗಡಿಗಳನ್ನು ಬಿಡಿಬಿಡಿಯಾಗಿ ಹರಾಜುಮಾಡಲು ಅಥವಾ ಗುಂಪುಗಳಲ್ಲಿ ಹರಾಜು ಮಾಡಲು ಬಿಡ್‌ದಾರರು ಬಯಸುತ್ತಾರೆಯೇ ಎಂದು ಮಾರಾಟದ ಪ್ರಾರಂಭದಲ್ಲೇ ಬಿಡ್‌ದಾರರೆಲ್ಲರಿಂದ ಖಚಿತಪಡಿಸಿಕೊಳ್ಳಲಾಯಿತು. ಆದರೆ, ಅವರಲ್ಲಿ ಯಾರೊಬ್ಬರು ಬಿಡಿಬಿಡಿ ಅಂಗಡಿಗಳ ಹರಾಜಿಗೆ ಒಪ್ಪಲಿಲ್ಲ. ಸಕ್ಷಮ ಪ್ರಾಧಿಕಾರಿಯವರು ಮಾರಾಟವನ್ನು ಸ್ಥಿರೀಕರಿಸುವುದಕ್ಕೆ ಮೊದಲು ಯಾರೊಬ್ಬರು ಬಿಡಿ ಬಿಡಿ ಅಂಗಡಿಗಳ ಹರಾಜಿಗೆ ಮುಂದೆ ಬರಲಿಲ್ಲ. ಅಂಗಡಿಗಳನ್ನು ಒಟ್ಟುಗೂಡಿಸಿ ಹರಾಜು ಹಾಕುವುದನ್ನು ಬದಿಗಿರಿಸಿ ಅಂಗಡಿಗಳನ್ನು ಬಿಡಿಬಿಡಿಯಾಗಿ ಹರಾಜು ಹಾಕುವಂತೆ ಇಂದಿನವರೆಗೆ ಯಾವುದೇ ಮನವಿಗಳು ಬಂದಿಲ್ಲ. ಆದ್ದರಿಂದ ಹೊಸ ವ್ಯವಸ್ಥೆಯು ಆದಾಯವನ್ನು ಒಳಗೊಂಡಿರುವುದರಿಂದ ಅದರ ಬಗ್ಗೆ ಪ್ರಯೋಗ ಮಾಡುವುದು ಅಪಾಯಕರ. ಅಬಕಾರಿ ಸುಂಕವನ್ನು ವಿಧಿಸಲು ಪ್ರಾರಂಭಿಸಿದಾಗಿನಿಂದ ಭಾರತದ ಎಲ್ಲ ರಾಜ್ಯಗಳ ಅನುಭವವು ಅಂಗಡಿಗಳನ್ನು ಗುಂಪಿನಲ್ಲಿ ಹರಾಜು ಹಾಕುವುದನ್ನು ಬೆಂಬಲಿಸುತ್ತದೆ. ಈ ನೀತಿಯು ಆಡಳಿತ ಅನುಕೂಲಗಳ ಮತ್ತು ಯಾವುದೇ ಸುಲಭವಾದ ಮತ್ತು ಖಾತ್ರಿಯಾದ ವಿಧಾನದಲ್ಲಿ ಬಾಡಿಗೆಗಳನ್ನು ಗಳಿಸುವ ವಿಷಯದ ಪರಿಗಣನೆಗಳನ್ನು ಒಳಗೊಂಡಿದೆ. ಬೆಂಗಳೂರಿನ ಅಂಗಡಿಗಳ ಗುಂಪಿಗೆ ಸಂಬಂಧಿಸಿದಂತೆ ಪಾನ ನಿರೋಧ ಜಾರಿಯಲ್ಲಿರುವ ಜಿಲ್ಲೆಗಳಲ್ಲಿ ಮರಗಳಿಂದ ಸೇಂದಿ ಇಳಿಸುವುದಕ್ಕೆ ಅನುಮತಿಸುವ ಬಗ್ಗೆ ಒಂದು ಮನವಿ ಬಂದಿತ್ತು. ಅದರ ಹಣಕಾಸು ಪರಿಣಾಮಗಳನ್ನು ಗಣನೆಗೆ ತೆಗೆದುಕೊಳ್ಳದೆ ಅದನ್ನು ತಳ್ಳಿಹಾಕಲಾಯಿತು. ಗುತ್ತಿಗೆದಾರರು ತುಂಬ ದೂರದ ಪ್ರದೇಶಗಳಲ್ಲಿನ ಅಂದರೆ ಬೆಂಗಳೂರಿನಿಂದ ಸುಮಾರು 140 ಮೈಲುಗಳ (ಸರಾಸರಿ) ದೂರದಲ್ಲಿರುವ ಚಾಮರಾಜನಗರ ಮತ್ತುನಂಜನಗೂಡು ತಾಲೂಕುಗಳಲ್ಲಿ ಇರುವ ಮರಗಳಿಂದ ಸೇಂದಿ ಇಳಿಸಬೇಕಾಗುತ್ತದೆ. ಇದಕ್ಕೆ ತುಂಬಾ ಸಾಗಣೆ ವೆಚ್ಚ ತಗಲುತ್ತದೆ. ತುಂಬ ದೂರದ ಸ್ಥಳಗಳಿಂದ ಸೇಂದಿಯನ್ನು ಸಾಗಣೆ ಮಾಡಲು ವ್ಯವಸ್ಥೆ ಮಾಡುವುದಕ್ಕೆ ಸಣ್ಣ ಗುತ್ತಿಗೆದಾರರಿಗೆ ಅಥವಾ ಅಂಗಡಿ

ಮಾರಾಟಗಾರರಿಗೆ ಸಾಧ್ಯವಾಗುವುದಿಲ್ಲವಾದ್ದರಿಂದ ಅವರಿಗೆ ಬಿಡಿಬಿಡಿ ಅಂಗಡಿಗಳನ್ನು ಮಾರಾಟಮಾಡಿದ್ದರೆ ತುಂಬಾ ತೊಂದರೆಯಾಗುತ್ತಿತ್ತು. ಸಣ್ಣ ಗುತ್ತಿಗೆದಾರರು ತುಂಬಾ ಹೆಚ್ಚಿನ ವೆಚ್ಚ ಭರಿಸಬೇಕಾದ ಕಾರಣ ಬಾಡಿಗೆ ರೂಪದಲ್ಲಿ ಸರ್ಕಾರಕ್ಕೆ ಹೆಚ್ಚು ಹಣ ಕಟ್ಟಲು ಅವರಿಗೆ ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ ಸರ್ಕಾರಕ್ಕೆ ತುಂಬಾನಷ್ಟವಾಗುತ್ತಿತ್ತು. ಅದೇನೇ ಇರಲಿ ಮೈಸೂರುನಗರದ ಮಾರಾಟದಲ್ಲಿ ಪ್ರತ್ಯೇಕವಾಗಿ ಮಾರಾಟಕ್ಕಿಡುತ್ತಿದ್ದ ಸೇಂದಿ, ಸಾರಾಯಿ ಮತ್ತು ಇತರ ಅಂಗಡಿಗಳನ್ನು ಈ ವರ್ಷ ಗುಂಪುಗೂಡಿಸಲಾಗಿದೆ. ಅಂಗಡಿಗಳನ್ನು ಸದಾ ಗುಂಪುಗೂಡಿಸುವುದರಿಂದ ಸಣ್ಣ ಗುತ್ತಿಗೆದಾರರು ಬೆಂಗಳೂರಿನಲ್ಲಿ ಉಳಿಯುವುದೇ ಅನುಮಾನ.

ಈ ವರ್ಷ ಬೆಂಗಳೂರಿನ ಅಂಗಡಿಗಳ ಸಮೂಹಗಳಿಂದ ಬರುವ ಬಾಡಿಗೆ ವರಮಾನವನ್ನು ಹಿಂದಿನ ವರ್ಷದ ಬಾಡಿಗೆ ವರಮಾನಕ್ಕೆ ಹೋಲಿಸಿದರೆ, ವರ್ಷದಿಂದ ವರ್ಷಕ್ಕೆ ಅಬಕಾರಿ ಬಾಡಿಗೆ ವರಮಾನ ಅವಶ್ಯವಾಗಿ ವ್ಯತ್ಯಾಸಗೊಂಡರೂ ಮತ್ತು ಏರಿಳಿತ ಕಂಡರೂ 1956–57ರ ಸಾಲಿನಲ್ಲಿ ಬೆಂಗಳೂರಿನ ಅಂಗಡಿಗಳ ಸಮೂಹಗಳ ಬಾಡಿಗೆ ವರಮಾನವು ಹಿಂದಿನ ಯಾವುದೇ ವರ್ಷಗಳಿಗೆ ಹೋಲಿಸಿದರೆ ಅಸಾಧಾರಣ ಏರಿಕೆಯಾಗದಿರುವುದು ಅಚ್ಚರಿಯ ವಿಷಯವೇ. ಕಳೆದ ಐದು ವರ್ಷಗಳ ತುಲನಾತ್ಮಕ ಅಂಕಿಸಂಖ್ಯೆಗಳು ಕೆಳಗಿನಂತಿವೆ –

| | ರೂಪಾಯಿಗಳು |
|---|---|
| 1952–53 | 55,12,416 |
| 1953–54 | 48,31,800 |
| 1954–55 | 46,36,488 |
| 1955–56 | 58,83,520 |
| 1956–57 | 60,34,980 |
| 1957–58 | 51,39,300 |

ಹಿಂದಿನ ವರ್ಷಗಳಲ್ಲಿ ಪಡೆದ ಸರಾಸರಿಯನ್ನು ಪರಾಮರ್ಶಿಸಿ ಮುಂದಿನ ವರ್ಷದ ಬಾಡಿಗೆ ವರಮಾನವನ್ನು ನಿರ್ಧರಿಸಲಾಗುತ್ತದೆ. ಇತ್ತೀಚಿನ ಮಾರಾಟಗಳಲ್ಲಿ ಮುಂದಿನ ವರ್ಷ ಗಳಿಸಬಹುದಾದ ಬಾಡಿಗೆ ಆದಾಯವು, ಕಳೆದ ಮೂರು ವರ್ಷಗಳ ಮತ್ತು ಐದು ವರ್ಷಗಳ ಸರಾಸರಿ ವರಮಾನಕ್ಕೆ ಹೋಲಿಸಿ ನೋಡಿದರೆ ಆಶಾದಾಯಕವಾಗಿದೆ. 1957–58 ರಲ್ಲಿ ಗಳಿಸಿದ ಬಾಡಿಗೆ ವರಮಾನವು 1956–57 ರಲ್ಲಿ ಗಳಿಸಿದ್ದಕ್ಕಿಂತ 8,83,428 ರೂಪಾಯಿಗಳಷ್ಟು ಕಡಿಮೆಯಾಗಿದೆ. ಅದು, ಅದೇ ಸಮಯದಲ್ಲಿ, 1953–54 ರಿಂದ 1955–56ರ ವರೆಗಿನ ಮೂರು ವರ್ಷಗಳ ಸರಾಸರಿ ಬಾಡಿಗೆ ವರಮಾನಕ್ಕಿಂತ 9,08,861 ರೂ.ಗಳಷ್ಟು ಹೆಚ್ಚಾಗಿದೆ. ಇಡೀ ಹಳೆಯ ಮೈಸೂರು ರಾಜ್ಯಕ್ಕೆ ಸಂಬಂಧಿಸಿದಂತೆ ತುಲನಾತ್ಮಕ ಅಂಕಿ ಸಂಖ್ಯೆಗಳು ಈ ಕೆಳಗಿನಂತಿವೆ:

| | |
|---|---|
| 1953–54 | 1,02,13,698 |
| 1954–55 | 1,03,27,404 |
| 1955–56 | 1,07,81,016 |

1956–57ನೇ ವರ್ಷದಲ್ಲಿ ಅಸಾಮಾನ್ಯ ಏರಿಕೆಯಾಗಿದೆ ಅಂದರೆ, ಬಾಡಿಗೆ ಆದಾಯ 1,22,33,104 ರೂಪಾಯಿಗಳಿಗೆ ಏರಿದೆ. ಇದು ಲಾಭ–ನಷ್ಟದ ಲೆಕ್ಕಾಚಾರಕ್ಕೆ ಆಧಾರವಾಗುವುದಿಲ್ಲ. ಅದೇನೇ ಆಗಲಿ, ಈ ವರ್ಷದ ಮಾರಾಟದಿಂದ ಒಟ್ಟು 1,13,49,567 ರೂಪಾಯಿಗಳಷ್ಟು ಬಾಡಿಗೆ ವರಮಾನವು ಸಂಗ್ರಹವಾಗಿದೆ. ಇದು ತೃಪ್ತಿಕರವಾಗಿಲ್ಲವೆಂದು ಪರಿಗಣಿಸಲಾಗದು.

ಅಬಕಾರಿ ಮಾರಾಟಗಳ ವಿಷಯವನ್ನು ಪರಿಶೀಲಿಸುವಾಗ ಹಲವಾರು ಅಂಶಗಳನ್ನು ಪರಿಗಣಿಸಬೇಕಾಗುತ್ತದೆ. ಕಳೆದ ವರ್ಷ ಬೆಳೆಗಳ ವೈಫಲ್ಯ ಮತ್ತು ಆಹಾರ ಧಾನ್ಯಗಳ ಬೆಲೆಗಳು ಗಗನಕ್ಕೇರಿದ ಪರಿಣಾಮ ಆ ವರ್ಷ ಹೇಳಿಕೊಳ್ಳುವಷ್ಟು ಅನುಕೂಲವಾಗಿರಲಿಲ್ಲ ಮತ್ತು ಅಂಥ ಪರಿಸ್ಥಿತಿಗಳಿಂದಾಗಿ ವರ್ಷದಲ್ಲಿ ಸ್ವಾಭಾವಿಕವಾಗಿಯೇ ಬಾಡಿಗೆ ವರಮಾನ ಕಡಿಮೆಯಾಯಿತು. ಮಿಗಿಲಾಗಿ, ಪ್ರಸಕ್ತ ಸ್ಥಿತಿಯು ಕಳೆದ ವರ್ಷದ ಪರಿಸ್ಥಿತಿಗಳ ಪರಿಣಾಮವಾಗಿ, ಈ ವರ್ಷ ಅನುಕೂಲಕರ ವರ್ಷವಾಗಿರುತ್ತದೆ ಎಂಬುದನ್ನು ಸೂಚಿಸಲಾರದು.

ಸರ್ಕಾರದ ಘೋಷಿತ ನೀತಿಯು ರಾಜ್ಯದಾದ್ಯಂತ ಪೂರ್ಣ ಪಾನನಿರೋಧವನ್ನು ಜಾರಿಗೆ ತರುವುದಕ್ಕೆ ಸಂಬಂಧಿಸಿರುವುದರಿಂದ ಅಬಕಾರಿ ಕ್ಷೇತ್ರವು ಹೊಸ ಗುತ್ತಿಗೆದಾರರಿಗೆ ಉದ್ಯಮವಾಗಿಲ್ಲ ಹಾಗೂ ಸ್ಪರ್ಧೆಯನ್ನು ಕನಿಷ್ಠಗೊಳಿಸಿದಂತಾಗಿದೆ.

**ಶ್ರೀ ಬಿ.ಕೆ.ಪುಟ್ಟರಾಮಯ್ಯ (ಚನ್ನಪಟ್ಟಣ)**– ಸ್ವಾಮಿ ಈ ಸಭೆಗಳುನಡೆಯುವ ಕೊನೆಯ ದಿವಸಗಳನ್ನು ಅಥವಾ ಸದಸ್ಯರು ಸರ್ಕಾರ ಹೇಳಿದ್ದು ಸರಿಯಾಗಿಲ್ಲವೆಂದು ಹೇಳುವುದಕ್ಕೆ ಅವಕಾಶವಿಲ್ಲದಿರುವ ಕಾಲವನ್ನು ಸರ್ಕಾರ ಉಪಯೋಗಿಸಿಕೊಂಡು ಯಾವಾಗಲೂ ಹೇಳಿಕೆಗಳನ್ನು ಮಾಡುವುದರಿಂದ ಜನಾಭಿಪ್ರಾಯಕ್ಕೆ ಸರಿಯಾದ ಮನ್ನಣೆ ದೊರೆಯದೇ ಹೋಗುತ್ತದೆ. ಆದ್ದರಿಂದ ಸರ್ಕಾರ ಮಾಡುತ್ತಿರುವುದು ಸರಿಯೇ, ಅಲ್ಲವೇ ಎಂಬುದನ್ನು ನೋಡಿ ಒಂದು ಸತ್ಸಂಪ್ರದಾಯ ಬೆಳೆಸಬೇಕೆಂದು ಅಧ್ಯಕ್ಷರಲ್ಲಿ ಪ್ರಾರ್ಥನೆ ಮಾಡುತ್ತೇನೆ.

# ರಾಜ್ಯದಲ್ಲಿ ಅಬಕಾರಿ ಸುಸ್ತಿದಾರರು

**ಶ್ರೀ ಬೋರಣ್ಣ ಗೌಡ (ಬೇಲೂರು)** – ಸರ್ಕಾರದವರು ದಯವಿಟ್ಟು ಇದನ್ನು ತಿಳಿಸುವರೇ?

(ಎ) ರಾಜ್ಯದಲ್ಲಿರುವ ಅಬಕಾರಿ ಸುಸ್ಥಿದಾರರ ಸಂಖ್ಯೆ (ಸಾರಾಯಿ, ಗಾಂಜಾ, ಬ್ರಾಂದಿ ಮತ್ತು ಅಫೀಮು)

(ಬಿ) ಈ ಗುತ್ತಿಗೇದಾರರಿಂದ ವಸೂಲಿಯಾಗಬೇಕಾದ ಒಟ್ಟು ಹಣ

(ಸಿ) ಈ ಗುತ್ತಿಗೇದಾರರು ಕಳೆದ ಆರು ತಿಂಗಳಲ್ಲಿ ಜಮೆ ಮಾಡಿರುವ ಒಟ್ಟು ಹಣ

**ಉತ್ತರ: ಶ್ರೀ ಮೊಹಮದ್ ಅಲಿ (ಅಬಕಾರಿ ಮತ್ತು ಗ್ರಾಮೀಣ ಕೈಗಾರಿಕಾ ಸಚಿವರು)** –

| | **ಹಳೇ ರಾಜ್ಯ** | **ಏಕೀಕರಣಗೊಂಡ ಪ್ರದೇಶಗಳು** |
|---|---|---|
| ಎ. | 64 | 2,188 |
| ಬಿ | 8,78,194 | 60,64,435 |
| ಸಿ. | 11,130 | 2,56,147 |

**ಶ್ರೀ ಬಿ.ಎ. ಬೋರಣ್ಣಗೌಡ** – ಬಾಕಿಗಳು ಬಹಳವಾಗಿವೆಯೆಂದು ಸರ್ಕಾರದವರು ಒಪ್ಪಿಕೊಳ್ಳುತ್ತಾರೆಯೇ?

**ಶ್ರೀ ಮೊಹಮದ್ ಅಲಿ** – ಅಂಕಿಅಂಶದಿಂದ ಇದು ಸ್ಪಷ್ಟವಾಗುತ್ತದೆ ಮತ್ತು ಅವು ಏಕೀಕರಣಗೊಂಡ ಪ್ರದೇಶಗಳಿಗೆ ಸಂಬಂಧಿಸಿದಂತೆ 20 ವರ್ಷಗಳ ಬಾಕಿಗಳು.

**ಶ್ರೀ ಬಿ.ಎ. ಬೋರಣ್ಣಗೌಡ** – ಹಾಗಾದರೆ ಈಗ ವಸೂಲಾಗಿರುವುದೆಲ್ಲಾ, ಇಲ್ಲಿಗೆ ಆರು ತಿಂಗಳ ಹಿಂದೆ ವಸೂಲು ಮಾಡಿರುವುದಲ್ಲವೇ?

**ಶ್ರೀ ಮೊಹಮದ್ ಅಲಿ** – ಹೌದು, ಕಳೆದು ಆರು ತಿಂಗಳ ವಧಿಯಲ್ಲಿ ಬಾಕಿಯಿದ್ದ ಹಣದ ಪೈಕಿ 2ಲಕ್ಷ ರೂಪಾಯಿಗೂ ಹೆಚ್ಚು ಹಣವನ್ನು ವಸೂಲಿ ಮಾಡಲಾಗಿದೆ.

**ಶ್ರೀ ಬಿ.ಎ. ಬೋರಣ್ಣಗೌಡ** – ಬಾಕಿ ಹಣವನ್ನು ಇನ್ನೆಷ್ಟು ದಿವಸಗಳಲ್ಲಿ ವಸೂಲು ಮಾಡಬೇಕೆಂದು ತೀರ್ಮಾನ ಮಾಡಿದ್ದೀರಿ?

**ಶ್ರೀ ಮೊಹಮದ್ ಅಲಿ** – ಆದಷ್ಟು ಬೇಗನೆ.

**ಶ್ರೀ ಜೆ.ಹೆಚ್. ಶಮ್‌ಸುದ್ದೀನ್**– ಈ ಬಾಕಿಗಳನ್ನು ಮನ್ನಾ ಮಾಡುವುದಕ್ಕೆ ಕಾರಣಗಳೇನು?

**ಸನ್ಮಾನ್ಯ ಸಭಾಧ್ಯಕ್ಷರು** – ಹಾಗಂತ ಎಲ್ಲಿ ಹೇಳಿದೆ?

**ಶ್ರೀ ಮೊಹಮದ್ ಅಲಿ** – ಮನ್ನಾ ಮಾಡುವ ಪ್ರಶ್ನೆಯೇ ಇಲ್ಲ.

**ಶ್ರೀ ಹೆಚ್. ಶಮ್‌ಸುದ್ದೀನ್**– ಕಂಟ್ರಾಕ್ಟರುಗಳು ಜಮೆ ಮಾಡಿರುವ ಒಟ್ಟು ಹಣ ಎಷ್ಟು?

**ಸನ್ಮಾನ್ಯ ಸಭಾಧ್ಯಕ್ಷರು** – "ಗುತ್ತಿಗೆದಾರರಿಂದ ಜಮೆ" ಎಂದರೆ ಸಂಬಂಧಪಟ್ಟ ವ್ಯಕ್ತಿಗಳು ಪಾವತಿ ಮಾಡಿರುವ ಹಣ.

**ಶ್ರೀ ಯು.ಎಂ. ಮಾದಪ್ಪ** – ಏಕೀಕರಣಗೊಂಡ ಪ್ರದೇಶಗಳಿಗೆ ಸಂಬಂಧಪಟ್ಟಂತೆ ಸುಸ್ಥಿದಾರರ ಸಂಖ್ಯೆಯನ್ನು ತಿಳಿಸುವಿರಾ?

**ಶ್ರೀ ಮೊಹಮದ್ ಅಲಿ** – ಏಕೀಕರಣಗೊಂಡ ಪ್ರದೇಶಗಳ ಸುಸ್ಥಿದಾರರ ಸಂಖ್ಯೆ 2188. ವಿವರಗಳನ್ನು ಇನ್ನೂ ಸಂಗ್ರಹಿಸಲಾಗುತ್ತಿದೆ.

(ಸಚಿವರು ತಮ್ಮ ಸ್ಥಾನದಲ್ಲಿ ಕುಳಿತುಕೊಳ್ಳುವುದಕ್ಕೆ ಮುಂಚೆ ಕೆಲವು ಸದಸ್ಯರು ಎದ್ದು ನಿಂತರು)

**ಸನ್ಮಾನ್ಯ ಸಭಾಧ್ಯಕ್ಷರು** – ಮಾನ್ಯ ಸಚಿವರು, ಉತ್ತರಿಸಿದನಂತರ ಆಸೀನರಾಗುವವರೆಗೆ ಯಾರೇ ಮಾನ್ಯ ಸದಸ್ಯರು ಎದ್ದುನಿಲ್ಲಬಾರದು. ನಾನು ಸಾಧ್ಯವಾದಷ್ಟು ಎಲ್ಲ ಸದಸ್ಯರಿಗೂ ಪ್ರಶ್ನೆ ಕೇಳುವುದಕ್ಕೆ ಅವಕಾಶ ಮಾಡಿಕೊಡುತ್ತೇನೆ. ಆದರೆ ಮಾನ್ಯ ಸಚಿವರು ತಮ್ಮ ಸ್ಥಾನದಲ್ಲಿ ಕುಳಿತುಕೊಳ್ಳುವುದಕ್ಕೆ ಮುಂಚೆಯೇ ಎದ್ದು ನಿಲ್ಲಲು ಸದಸ್ಯರು ಏಕೆ ತಳಮಳಗೊಳ್ಳುತ್ತಿದ್ದಾರೆ ಎಂಬುದು ನನಗೆ ಅರ್ಥವಾಗುತ್ತಿಲ್ಲ.

**ಶ್ರೀ ವಿ.ಪಿ. ದೀನದಯಾಳು ನಾಯ್ಡು** – ಸರ್ಕಾರದವರು ಈ ಗುತ್ತಿಗೆದಾರರಿಂದ ಭದ್ರತೆಯನ್ನು ಪಡೆದಿಲ್ಲವೆ?

**ಶ್ರೀ ಮೊಹಮದ್ ಅಲಿ** – ಭದ್ರತೆಯನ್ನು ತೆಗೆದುಕೊಳ್ಳಲಾಗಿದೆ.

**ಶ್ರೀ ವಿ.ಪಿ. ದೀನದಯಾಳು ನಾಯ್ಡು** – ಬಾಕಿಯಿರುವ ಹಣವನ್ನು ವಸೂಲಿ ಮಾಡಲು ಸರ್ಕಾರ ಭದ್ರತೆಗಳ ವಿರುದ್ಧ ಮುಂದುವರೆಯಬಹುದಲ್ಲವೆ?

**ಶ್ರೀ ಮೊಹಮದ್ ಅಲಿ** – ಹಳೇ ಮೈಸೂರು ರಾಜ್ಯಕ್ಕೆ ಸಂಬಂಧಪಟ್ಟಂತೆ ಸುಸ್ಥಿದಾರರ ಸ್ವತ್ತನ್ನು ಹರಾಜು ಹಾಕಲು ವ್ಯವಹರಣೆಗಳನ್ನು ಪ್ರಾರಂಭಿಸಲಾಗಿದೆ. ನಾನು ಈಗಾಗಲೇ ತಿಳಿಸಿರುವಂತೆ ಏಕೀಕರಣಗೊಂಡ ಪ್ರದೇಶಗಳಿಗೆ ಸಂಬಂಧಿಸಿದಂತೆ ವಿವರಗಳು ನನಗೆ ಇನ್ನೂ ಲಭ್ಯವಾಗಿಲ್ಲ. ಆದ್ದರಿಂದ ಏಕೀಕರಣಗೊಂಡ ಪ್ರದೇಶಗಳನ್ನು ಕುರಿತಂತೆ ವಿವರಗಳನ್ನು ನೀಡುವ ಸ್ಥಿತಿಯಲ್ಲಿ ನಾನಿಲ್ಲ.

**ಶ್ರೀ ಸಿ.ಎಸ್. ಹುಲಕೋಟಿ** – ಈಗ ಬಾಕಿಯಿರುವ 60,64,435 ರೂಪಾಯಿಗಳು ಏಕೀಕರಣಗೊಂಡ ಪ್ರದೇಶಗಳಿಗೆ ಸೇರಿದ್ದೆಂದು ಹೇಳಿದ್ದೀರಿ. ಏಕೀಕರಣಗೊಂಡ ಪ್ರದೇಶಗಳೆಂದರೆ ಹೊಸದಾಗಿ ಬಂದಿರುವ ಎಲ್ಲ ಭಾಗಗಳೂ ಸೇರುತ್ತವೆಯೇ?

**ಶ್ರೀ ಮೊಹಮದ್ ಅಲಿ** – ಹಳೆಯ ಮೈಸೂರು ರಾಜ್ಯಕ್ಕೆ ಸೇರಿಸಲಾದ ಎಲ್ಲಾ ಹೊಸ ಪ್ರದೇಶಗಳು.

**ಶ್ರೀ ಕುಂದೂರು ರುದ್ರಪ್ಪ** – ಆ ಬಾಕಿ ಕೊಡಬೇಕಾಗಿರುವವರ ಹೆಸರನ್ನು ಹೇಳುತ್ತೀರಾ?

**ಮಾನ್ಯ ಸಭಾಧ್ಯಕ್ಷರು** – ಆ ಪಾರ್ಟಿಗಳ ಹೆಸರನ್ನು ಹೇಳುವುದಕ್ಕೆ ನಾನು ಅವಕಾಶ ಕೊಡುವುದಿಲ್ಲ.

**ಶ್ರೀ ಕುಂದೂರು ರುದ್ರಪ್ಪ** – ಇಲ್ಲದಿದ್ದರೆ, ಬಾಕಿದಾರರುಗಳ ಹೆಸರಿನ ಪಟ್ಟಿಯನ್ನಾದರೂ ಟೇಬಲ್ ಮುಂದಿಡುತ್ತೀರಾ?

**ಶ್ರೀ ಮೊಹಮದ್ ಅಲಿ**–ಏಕೀಕರಣಗೊಂಡ ಪ್ರದೇಶಗಳೆಂದರೆ ಹಳೆಯ ಮೈಸೂರು ರಾಜ್ಯಕ್ಕೆ ಸಂಭಂಧಿಸಿದಂತೆ, ಸುಸ್ಥಿದಾರರ ಹೆಸರುಗಳ ಪಟ್ಟಿಯನ್ನು ನಾನು ಮಂಡಿಸುತ್ತೇನೆ.

**ಸನ್ಮಾನ್ಯ ಸಭಾಧ್ಯಕ್ಷರು** – ಅಗತ್ಯವಿಲ್ಲ; ಸುಸ್ಥಿದಾರರ ಸಂಖ್ಯೆಯನ್ನು ನೀಡಿದರೆ ಸಾಕು.

**ಶ್ರೀ ಕೆ.ಎಸ್. ಸೂರ್ಯನಾರಾಯಣರಾವ್**– ಹೆಸರುಗಳನ್ನು ನೀಡಲು ಮಾನ್ಯ ಸಚಿವರು ಸಿದ್ಧರಿರುವಾಗ, ಆಕ್ಷೇಪಣೆ ಏಕೆ?

**ಸನ್ಮಾನ್ಯ ಸಭಾಧ್ಯಕ್ಷರು** – ಇದು ಕ್ರಿಯಾಲೋಪ (ಪಾಯಿಂಟ್ ಆಫ್ ಆರ್ಡರ್) ಆಗಿದ್ದರೆ ಅದಕ್ಕೆ ನಾನು ಉತ್ತರಿಸುತ್ತೇನೆ. ಮಾನ್ಯ ಸಚಿವರು ಮಾಹಿತಿಯನ್ನು ನೀಡುವುದಕ್ಕೆ ಸಿದ್ಧರಾಗಿದ್ದಾಗ್ಯೂ, ಹಾಗೆ ಮಾಡಲು ಅವಕಾಶ ನೀಡುವುದು ಅಥವಾ ನೀಡದಿರುವುದು ನನ್ನ ವಿವೇಚನೆಗೆ ಬಿಟ್ಟ ವಿಷಯ. ಇಲ್ಲಿ ಉಪಸ್ಥಿತರಿಲ್ಲದ ವ್ಯಕ್ತಿಗಳ ಹೆಸರುಗಳನ್ನು ತಿಳಿಸಲು ಸಚಿವರುಗಳ ಪ್ರಾಜ್ಞರಿಲ್ಲ ಎಂದು ನಾನು ಭಾವಿಸಿದರೆ ಅವರು ಹಾಗೆ ಮಾಡುವುದನ್ನು ನಾನು ತಡೆಯಲೇ ಬೇಕು.

**ಶ್ರೀ ಹೆಚ್.ಎಂ. ಚೆನ್ನಬಸಪ್ಪ** – ಸ್ವಾಮಿ, ಇದು ಹಕ್ಕು ಬಾಧ್ಯತೆಯ ಪ್ರಶ್ನೆ ಎಂದು ನಾನು ನಿವೇದಿಸಿಕೊಳ್ಳಬಯಸುತ್ತೇನೆ. ಪ್ರಕರಣದ ವಿವರಗಳನ್ನು ತಿಳಿದಿಕೊಳ್ಳಲು ಮಾನ್ಯ ಸದಸ್ಯರುಗಳಿಗೆ ಹಕ್ಕಿದೆ. ಈ ಪ್ರಶ್ನೆ ಸರ್ಕಾರಿ ಹಣಕ್ಕೆ ಸಂಬಂಧಿಸಿದ್ದು. ಆದ್ದರಿಂದ ಸರ್ಕಾರಕ್ಕೆ ಹಣ ಬಾಕಿ ಉಳಿಸಿಕೊಂಡಿರುವ ಎಲ್ಲಾ ವ್ಯಕ್ತಿಗಳ ಬಗ್ಗೆ ತಿಳಿದುಕೊಳ್ಳಲು ಈ ಸದನದ ಸದಸ್ಯರುಗಳಿಗೆ ಹಕ್ಕಿದೆ ಎಂಬುದನ್ನು ನಾನು ನಿವೇದಿಸಿಕೊಳ್ಳಬಯಸುತ್ತೇನೆ.

**ಸನ್ಮಾನ್ಯ ಸಭಾಧ್ಯಕ್ಷರು** – ಸುಸ್ಥಿದಾರರಾದ ವ್ಯಕ್ತಿಗಳ ಸಂಖ್ಯೆಯನ್ನು ತಿಳಿದುಕೊಳ್ಳಲು ಸದಸ್ಯರುಗಳಿಗೆ ಹಕ್ಕಿದೆ. ಆದರೆ ಈ ಸದನದಲ್ಲಿ ಹಾಜರಿರದ ಸುಸ್ಥಿದಾರರುಗಳ ಹೆಸರುಗಳನ್ನು

ತಿಳಿದುಕೊಳ್ಳುವ ಹಕ್ಕು ಸದಸ್ಯರುಗಳಿಗಿಲ್ಲ. ತಿಳಿದಿಕೊಳ್ಳುವ ಹಕ್ಕು ತಮಗಿದೆ ಎಂದು ಅವರು ಭಾವಿಸಿದರೆ ಅವರು ಸಂಬಂಧಪಟ್ಟ ಸಚಿವರನ್ನು ಭೇಟಿ ಮಾಡಿ ಪಟ್ಟಿಯನ್ನು ಪಡೆಯಬಹುದು.

**ಶ್ರೀ ಸಿ.ಜೆ.ಮುಕ್ಕಣ್ಣಪ್ಪ** – ಇದು ಅಷ್ಟೊಂದು ರಹಸ್ಯದ ವಿಷಯವೆ?

**ಸನ್ಮಾನ್ಯ ಸಭಾಧ್ಯಕ್ಷರು** – ಇರಬಹುದು ಅಥವಾ ಇಲ್ಲದಿರಬಹುದು. ಹೊರಗಿನವರ ಹಕ್ಕುಗಳನ್ನು ನಾನು ರಕ್ಷಿಸಲೇ ಬೇಕು. ಅವರು ಸುಸ್ತಿದಾರರಾಗಿರಲಿ ಅಥವಾ ಆಗಿಲ್ಲದಿರಲಿ. ಆದ್ದರಿಂದ ಅಂಥ ವ್ಯಕ್ತಿಗಳ ಹಿತಾಸಕ್ತಿಗಳಿಗೆ ಹಾನಿಯುಂಟಾಗುತ್ತದೆ ಮತ್ತು ಹಾಗೆ ಅವರ ಹೆಸರುಗಳನ್ನು ಬಹಿರಂಗ ಪಡಿಸಿದ ವ್ಯಕ್ತಿಯ ವಿರುದ್ಧ ಕ್ರಮ ತೆಗೆದುಕೊಳ್ಳುವುದಕ್ಕೆ ಅವರಿಗೆ ಅವಕಾಶವಿರುವುದಿಲ್ಲ.

**ಶ್ರೀ ಕುಂದೂರು ರುದ್ರಪ್ಪ** – ತಾವು ಹೆಸರುಗಳನ್ನು ಕೊಡುವುದಿಲ್ಲವೆಂದರೆ ಈ 68 ಲಕ್ಷ ರೂಪಾಯಿಗಳನ್ನು ಹೇಗೆ ಯಾರಿಂದ ತೆಗೆದುಕೊಳ್ಳುವುದು?

**ಮಾನ್ಯ ಸಭಾಧ್ಯಕ್ಷರು** – ಹೆಸರುಗಳನ್ನು ಕೊಡುವುದಕ್ಕೆ ಅವಕಾಶ ಕೊಡಲಾರೆ. ಎಷ್ಟು ಜನರು ಕೊಡಬೇಕಾಗಿದೆಯೆಂಬುದನ್ನು ತಿಳಿದುಕೊಳ್ಳಬಹುದು. ಇದರ ಮೇಲೆ ಮತ್ತೇ ಕೇಳುವುದು ಅನಾವಶ್ಯಕ; ಹಾಗೆ ಮಾಡುವುದು ಯೋಗ್ಯವೂ ಅಲ್ಲ.

**ಶ್ರೀ ಕುಂದೂರು ರುದ್ರಪ್ಪ** – ಹಾಗಾದರೆ ಮುಂದಿನ ಅಧಿವೇಶನದೊಳಗೆ ಈ ಹಣವನ್ನೆಲ್ಲಾ ವಸೂಲು ಮಾಡುತ್ತಾರೆಯೇ?

**ಶ್ರೀ ಮೊಹಮದ್ ಅಲಿ** – ಸರ್ಕಾರದವರು ಬಾಕಿಗಳನ್ನು ವಸೂಲಿ ಮಾಡಲು ಸರ್ವ ಪ್ರಯತ್ನವನ್ನು ಮಾಡುತ್ತಾರೆ.

**ಶ್ರೀ ಕೆ.ಎಸ್. ಸೂರ್ಯನಾರಾಯಣರಾವ್** – ಸುಸ್ಥಿದಾರರ ಹೆಸರುಗಳನ್ನು ಅಧಿಕೃತ ರಾಜಪತ್ರದಲ್ಲಿ ಪ್ರಕಟಿಸಲಾಗಿದೆಯೆ?

**ಶ್ರೀ ಮೊಹಮದ್ ಅಲಿ** – ಸುಸ್ಥಿದಾರರ ಹೆಸರುಗಳನ್ನು ರಾಜಪತ್ರದಲ್ಲಿ ಪ್ರಕಟಿಸುವ ಅವಶ್ಯಕತೆ ಇಲ್ಲ.

**ಶ್ರೀ ಜಿ. ದುಗ್ಗಪ್ಪ** – ಈಗ ಉತ್ತರದಲ್ಲಿ ಕೊಟ್ಟಿರತಕ್ಕ ಡಿಫಾಲ್ಟರ್ಸ್ ಪಟ್ಟಿಯಲ್ಲಿ ಸೇರಿರತಕ್ಕವರ ಪೈಕಿ ಯಾರಿಗಾದರೂ ಈ ವರ್ಷ ಪುನ: ಕಂಟ್ರಾಕ್ಟನ್ನು ಕೊಡಲಾಗಿದೆಯೇ?

**ಸನ್ಮಾನ್ಯ ಸಭಾಧ್ಯಕ್ಷರು** – ಇದು ಕೂಡ ಈ ಪ್ರಶ್ನೆಗೆ ಸಂಬಂಧಪಡುವುದಿಲ್ಲ.

**ಶ್ರೀ ಎ.ಆರ್. ಬದರಿನಾರಾಯಣ್** – ಈ ಹಣ ಎಷ್ಟು ವರ್ಷಗಳಿಂದ ಸಂಚಿತಗೊಳ್ಳುತ್ತಾ ಬಂದಿದೆ.

**ಮಾನ್ಯ ಸಭಾಧ್ಯಕ್ಷರು** – "20 ವರ್ಷಗಳಿಂದ" ಎಂದು ಆಗಲೇ ಹೇಳಿದ್ದಾರೆ.

**ಶ್ರೀ ಕೆ.ಎಸ್. ಸೂರ್ಯನಾರಾಯಣರಾವ್** – ಮುಂದಿನ ಹರಾಜಿನಲ್ಲಿ ಬಿಡ್ ಮಾಡಲು ಸುಸ್ತಿದಾರರಿಗೆ (ಡಿಫಾಲ್ಟರ್ಸ್) ಅನುಮತಿ ನೀಡಲಾಗುವುದಿಲ್ಲ ಎಂದು ತಿಳಿಸಿ ಅಂಥ ಸುಸ್ತಿದಾರರ ಹೆಸರುಗಳನ್ನು ಇಲಾಖೆ ಪ್ರಕಟಿಸುತ್ತದೆ ಎಂಬುದು ವಾಸ್ತವ ಸಂಗತಿಯಲ್ಲವೆ?

**ಶ್ರೀ ಮೊಹಮದ್ ಅಲಿ** – ಕೆಲವು ಪ್ರಕರಣಗಳಲ್ಲಿ ಹಾಗೆ ಮಾಡಲಾಗಿದೆ.

**ಶ್ರೀ ಟಿ ತಾರೇಗೌಡ** – ಈಗಿನ ಕಂಟ್ರಾಕ್ಟರುಗಳಲ್ಲಿ ಯಾರಾದರೂ ಸುಸ್ತಿದಾರರಡಿಯಲ್ಲಿ ಬರುತ್ತಾರೆಯೆ ಎಂಬುದನ್ನು ತಿಳಿಸುತ್ತೀರಾ?

**ಶ್ರೀ ಮೊಹಮದ್ ಅಲಿ** – ನಾನು ನೋಟೀಸ್ ಬಯಸುತ್ತೇನೆ.

**ಶ್ರೀ ಎ. ಮುನಿಯಪ್ಪ**– ಇಪ್ಪತ್ತು ವರ್ಷಗಳಿಂದಲೂ ಈ ಹಣವನ್ನು ವಸೂಲು ಮಾಡಲು ಸರ್ಕಾರದವರು ಕೈಗೊಂಡಿದ್ದ ಕಾರ್ಯಕ್ರಮಗಳೇನೇನು ಸ್ವಾಮಿ?

**ಶ್ರೀ ಮೊಹಮದ್ ಅಲಿ** – ಸಾಧ್ಯವಾದ ಎಲ್ಲಾ ಪ್ರಯತ್ನಗಳನ್ನು ಮಾಡಲಾಗಿದೆ.

**ಶ್ರೀ ಎ.ಮುನಿಯಪ್ಪ**– ರೈತನಾದವನು ಅಕಸ್ಮಾತ್ ಎಂಟು ಆಣೆ ಕಂದಾಯ ಕೊಡದಿದ್ದರೆ ಅವನ ಮನೆಯನ್ನು ಜಪ್ತಿ ಮಾಡಬೇಕೆಂಬ ವಿಚಾರ ಸರ್ಕಾರದವರಿಗೆ ಬಹಳ ಚೆನ್ನಾಗಿ ಗೊತ್ತಿದೆಯಲ್ಲವೇ?

**ಶ್ರೀ ಮೊಹಮದ್ ಅಲಿ** – ಇಲ್ಲಾ ಸ್ವಾಮಿ.

**ಶ್ರೀ ಎ. ಮುನಿಯಪ್ಪ**– ಪರ್ಮಿಟ್‌ಗಳನ್ನು ಕೊಡುವಾಗ ಯಾವ ಅರ್ಹತೆಗಳಿದ್ದರೆ ಕೊಡುತ್ತೀರಿ?

**ಮಾನ್ಯ ಸಭಾಧ್ಯಕ್ಷರು**– " Addicts" ಅಂದರೆ ಕುಡಿಯುವ ಚಟವಿದ್ದವರಿಗೆ ಕೊಡುತ್ತೇವೆ ಎಂದು ಉತ್ತರದಲ್ಲಿ ಕೊಟ್ಟಿದ್ದಾರೆ.

**ಶ್ರೀ ಕೆ.ಎಸ್. ಸೂರ್ಯನಾರಾಯಣರಾವ್**– ಕುಡಿಯುವ ಚಟವಿರುವವರು ವೈದ್ಯಕೀಯ ಸಲಹೆಯಲ್ಲಿರುವವರು ಎಂಬುದು ಸರ್ಕಾರದವರ ಅಭಿಪ್ರಾಯವೇ?

**ಸನ್ಮಾನ್ಯ ಸಭಾಧ್ಯಕ್ಷರು**– ಇದು ಈ ಪ್ರಶ್ನೆಗೆ ಸಂಬಂಧಪಡುವುದಿಲ್ಲ.

**ಶ್ರೀ ಡಿ.ಟಿ. ಸೀತಾರಾಮರಾವ್**– ಅಭ್ಯಾಸವಿರುವವರಿಗೆ ಕೊಡುತ್ತಾರೆಯೇ ಅಥವಾ ಡಾಕ್ಟರ್ ಸರ್ಟಿಫಿಕೇಟ್ ಕೊಟ್ಟರೆ ಹೊಸಬರಿಗೂ ಕೊಡುತ್ತಾರೆಯೇ?

**ಮಾನ್ಯ ಸಭಾಧ್ಯಕ್ಷರು**– ಉತ್ತರದಲ್ಲಿ addict ಎಂದರೆ ಅಭ್ಯಾಸವಿರುವವರು ಎಂದು ಅರ್ಥವಾಗುತ್ತದೆ.

**ಶ್ರೀ ಡಿ.ಟಿ. ಸೀತಾರಾಮರಾವ್**– 1955–56ರಲ್ಲಿ 27 ಜನರಿಗೆ ಪರ್ಮಿಟ್ ಕೊಟ್ಟಿದೆ ಎಂದು

ಕಂಡುಬರುತ್ತದೆ. ಇದನ್ನು ಕುಡುಕರಿಗೆ ಕೊಡುತ್ತಿದ್ದೀರೋ ಅಥವಾ ಹೊಸದಾಗಿ ಕುಡಿಯುವುದನ್ನು ಕಲಿಯತಕ್ಕವರಿಗೆ ಕೊಡುತ್ತೀರೋ?

**ಶ್ರೀ ಮೊಹಮದ್ ಅಲಿ** – ಅದರರ್ಥ ಸಹಜವಾಗಿ ಕುಡಿಯುವ ಚಟವಿರುವವರು.

**ಶ್ರೀ ಟಿ.ಎ.ಮೂಡಲಗಿರಿಗೌಡ**– ಕುಡಿಯುವ ಅಭ್ಯಾಸವಿರುವವರಿಗೆ ಪರ್ಮಿಟ್ ಕೊಡುತ್ತಾರೆಂದು ಅಪ್ಪಣೆಯಾಗಿದೆ. 'ಫ್ಲೂ' ಬಂದ ಕಾರಣ ಜನಗಳಿಗೆ ಕುಡಿಯುವ ಅಭ್ಯಾಸವಾಗಿಲ್ಲವೇ?

**ಸನ್ಮಾನ್ಯ ಸಭಾಧ್ಯಕ್ಷರು** – ಆರ್ಡರ್, ಆರ್ಡರ್.

**ಶ್ರೀ ಟಿ. ತಾರೇಗೌಡ**– ಅಬಕಾರಿ ಕಂಟ್ರಾಕ್ಟರುಗಳ ನೆಂಟರುಗಳಾಗಿರುವ ಪರ್ಮಿಟ್‌ದಾರರಿದ್ದಾರೆ, ಸ್ವಾಮಿ?

**ಶ್ರೀ ಮೊಹಮದ್ ಅಲಿ** – ಅಂಥ ಯಾವುದೇ ಪ್ರಕರಣ ಸರ್ಕಾರದ ಗಮನಕ್ಕೆ ಬಂದಿಲ್ಲ.

**ಶ್ರೀ ಅಣ್ಣಾರಾವ್ ಗಣಮುಖಿ**– ವರ್ಷದಿಂದ ವರ್ಷಕ್ಕೆ ಕುಡಿಯುವ ಚಟವಿರುವವರ ಸಂಖ್ಯೆ ಹೆಚ್ಚಾಗುತ್ತಿದೆಯೇ ಅಥವಾ ಕಡಿಮೆಯಾಗುತ್ತಿದೆಯೇ ಎಂಬುದನ್ನು ತಿಳಿಸುತ್ತೀರಾ?

**ಮಾನ್ಯ ಸಭಾಧ್ಯಕ್ಷರು** – 1953–54ರಲ್ಲಿ 22, 1954–55ರಲ್ಲಿ 28 ಮತ್ತು 1955–56ರಲ್ಲಿ 27 ಪರ್ಮಿಟ್‌ಗಳನ್ನು ಕೊಟ್ಟಿದೆ ಎಂದು ಉತ್ತರದಲ್ಲಿ ತಿಳಿಸಿದ್ದಾರೆ.

**ಶ್ರೀ ಅಣ್ಣಾರಾವ್ ಗಣಮುಖಿ**–ಹೊರಗಿನ ಸ್ಥಳಗಳಿಗೆ ಬ್ರಾಂದಿ ಮತ್ತು ಸಾರಾಯಿಯನ್ನು ಸಾಗಿಸಿದ್ದಕ್ಕಾಗಿ ಕುಡಿಯುವ ಚಟವಿರುವವರ ವಿರುದ್ಧ ಯಾವುದಾದರೂ ಪ್ರಕರಣಗಳನ್ನು ದಾಖಲಿಸಲಾಗಿದೆಯೆ ಎಂಬುದನ್ನು ತಿಳಿಸುತ್ತೀರಾ ಸ್ವಾಮಿ?

**ಸನ್ಮಾನ್ಯ ಸಭಾಧ್ಯಕ್ಷರು**–ಪ್ರಶ್ನೋತ್ತರ ವೇಳೆ ಮುಗಿಯಿತು.

**ಶ್ರೀ ಬಿ.ಎನ್. ಬೋರಣ್ಣಗೌಡ** – ಕಳೆದ ನಾಲ್ಕು ವರ್ಷಗಳಲ್ಲಿ ಈ ರೀತಿಯ ಎಷ್ಟು ಪರ್ಮಿಟ್ಟುಗಳನ್ನು ನೀಡಲಾಗಿದೆ?

(ಉತ್ತರವಿಲ್ಲ)

**ಶ್ರೀ ಬಿ.ಎನ್. ಬೋರಣ್ಣಗೌಡ** – ಈ ಕುಡಿಯುವ ಚಟವುಳ್ಳವವರಿಗೆ ಇನ್ನಷ್ಟು ಪರ್ಮಿಟ್ಟುಗಳನ್ನು ನೀಡುವ ಉದ್ದೇಶ ಸರ್ಕಾರಕ್ಕಿದೆಯೆ? ಕುಡಿತದ ಚಟಕ್ಕೆ ಬಿದ್ದವರ ಸಂಖ್ಯೆಯನ್ನು ಹೆಚ್ಚಿಸುವ ಪ್ರಶ್ನೆಯೇ ಇಲ್ಲ.

**ಶ್ರೀ ಕೆ.ಎಸ್. ಸೂರ್ಯನಾರಾಯಣರಾವ್** – ಈ ಜಿಲ್ಲೆಯಲ್ಲಿ ಈ ಪರ್ಮಿಟ್ಟುಗಳ ಅಡಿಯಲ್ಲಿ ಸರಬರಾಜು ಮಾಡಿದ ಮದ್ಯದ ಒಟ್ಟು ಪ್ರಮಾಣ ಎಷ್ಟು?

**ಶ್ರೀ ಮೊಹಮದ್ ಅಲಿ** – ಆ ವಿವರಗಳು ನನ್ನ ಬಳಿ ಇಲ್ಲ.

**ಶ್ರೀ ಕೆ.ಎಸ್. ಸೂರ್ಯನಾರಾಯಣರಾವ್**– ಹಿಂದೆಂದೂ ಪೂರೈಸದಷ್ಟು ಪ್ರಮಾಣದ ಸಾರಾಯಿ ಮತ್ತು ಬ್ರಾಂದಿಯನ್ನು ಈ ಜಿಲ್ಲೆಗೆ ಪೂರೈಸಿರುವುದು ಸರ್ಕಾರಕ್ಕೆ ತಿಳಿದಿದೆಯೇ?

**ಶ್ರೀ ಮೊಹಮದ್ ಅಲಿ** – ನನಗೆ ಹಾಗೆ ಅನ್ನಿಸುವುದಿಲ್ಲ?

**ಡಾ. ಎ.ಆರ್. ಕರಿಸಿದ್ದಪ್ಪ**– ವೈದ್ಯಕೀಯ ಸಲಹೆಯ ಮೇಲಿರುವ ಕುಡಿತದ ಚಟವುಳ್ಳ ಒಬ್ಬ ವ್ಯಕ್ತಿಗೆ ಪೂರೈಸಬೇಕಾದ ಮಧ್ಯದ ಗರಿಷ್ಠ ಪ್ರಮಾಣ ಎಷ್ಟು?

**ಶ್ರೀ ಮೊಹಮದ್ ಅಲಿ** – ನನಗೆ ತಿಳಿದ ಮಟ್ಟಿಗೆ ತಿಂಗಳಿಗೆ ನಾಲ್ಕು ಸೀಸೆಗಳು.

**ಶ್ರೀ ಇ. ನಾರಾಯಣಗೌಡ** –26 ಜನಗಳಿಗೆ ಬ್ರಾಂದಿ ಲೈಸೆನ್ಸ್ ಕೊಟ್ಟಿದ್ದೀರಿ. ಇದರಲ್ಲಿ ಕಾಂಗ್ರೆಸ್‌ನವರು ಎಷ್ಟು ಜನ ಇದ್ದಾರೆ?

(ಉತ್ತರವಿಲ್ಲ)

**ಮಧ್ಯಾಹ್ನ 3 ಗಂಟೆ.**

**ಶ್ರೀ ಎಸ್. ಶರಣಗೌಡ** – ಈಗ ಮೂರು ವರ್ಷಗಳಿಂದ ಯಾವ ಮನುಷ್ಯನಿಗೆ ಡಾಕ್ಟರಿಂದ ಇಲಾಜಿಗಾಗಿ ಔಷಧಿ ರೂಪವಾಗಿ ಕೊಟ್ಟಿದ್ದಾರೆ, ಮೂರು ವರ್ಷಗಳಿಂದ ಕುಡಿಯುತ್ತಿರುವವನು ಮತ್ತೆ ಗುಣಹೊಂದಿಲ್ಲ ಎಂದು ಡಾಕ್ಟರ್‌ರಿಂದ ಸರ್ಟಿಫಿಕೇಟ್ ಪಡೆಯುತ್ತಾರೆಯೇ?

**ಶ್ರೀ ಮೊಹಮದ್ ಅಲಿ** – ಪರ್ಮಿಟ್ಟುಗಳನ್ನು ವೈದ್ಯಕೀಯ ಪ್ರಮಾಣಪತ್ರದ ಆಧಾರದ ಮೇಲೆ ಪ್ರತಿ ವರ್ಷ ನೀಡಲಾಗುತ್ತಿದೆ.

**ಶ್ರೀ ಎಸ್. ಶರಣಗೌಡ** – ಆ ವ್ಯಕ್ತಿಗಳಿಗೆ ಆರೋಗ್ಯದ ಕಾರಣದ ಮೇಲೆ ಪರ್ಮಿಟ್ಟುಗಳನ್ನು ನೀಡಲಾಗಿದೆಯೇ, ಅವರು ಗುಣಹೊಂದಿದ್ದಾರೆಯೇ ಅಥವಾ ಇಲ್ಲವೆ ಎಂಬುದನ್ನು ಗಮನಿಸುವುದು ಸರ್ಕಾರದ ಕರ್ತವ್ಯವಲ್ಲವೆ.

**ಸನ್ಮಾನ್ಯ ಸಭಾಧ್ಯಕ್ಷರು** – " ಇದು ಅಭಿಪ್ರಾಯದ ವಿಷಯ ".

**ಶ್ರೀ ಬಿ.ಪಿ.ದೀನದಯಾಳು ನಾಯ್ಡು** – ಈ ಪ್ರಕ್ರಿಯೆಯ ಅರ್ಥ ಕುಡಿತದ ಚಟವಿರುವವರು ತಮ್ಮ ಜೀವಿತಾಂತ ಮಾದಕ ವಸ್ತುಗಳನ್ನು ತೆಗೆದುಕೊಳ್ಳುತ್ತಿರಬೇಕು ಎಂಬುದು.

**ಸನ್ಮಾನ್ಯ ಸಭಾಧ್ಯಕ್ಷರು** –ಅದು ವೈದ್ಯಕೀಯ ಸಲಹೆಯನ್ನು ಅವಲಂಬಿಸಿರುತ್ತದೆ.

**ಶ್ರೀ ಬಿ.ಪಿ. ದೀನದಯಾಳು ನಾಯ್ಡು** – ಡಾ. ಪಾರ್ಥಸಾರಥಿಯವರು ಉತ್ತರಿಸಬೇಕಾದರೆ ಎಷ್ಟು ಸಮಯಬೇಕು? (ನಗು)

**ಡಾ.ಟಿ.ಪಾರ್ಥಸಾರಥಿ** – 'ಕುಡಿತದ ಚಟವಿರುವವ' ಎಂದರೇನು? ಎಂಬುದನ್ನು ಮಾನ್ಯ ಸಚಿವರು ನನಗೆ ತಿಳಿಸುವರೆ?

**ಸನ್ಮಾನ್ಯ ಸಭಾಧ್ಯಕ್ಷರು** – ಇದು ಈ ಪ್ರಶ್ನೆಗೆ ಸಂಬಂಧಪಡುವುದಿಲ್ಲ.

**ಡಾ.ಟಿ. ಪಾರ್ಥಸಾರಥಿ** –'ಕುಡಿತದ ಚಟವಿರುವವ' ಈ ಶಬ್ದದ ಬಗ್ಗೆ ತುಂಬಾ ಸಂದಿಗ್ಧತೆ ಇದೆ ಸ್ವಾಮಿ. ಆತ ಗುಣಹೊಂದಬಹುದು. ಪರ್ಮಿಟ್ಟುಗಳನ್ನು ಅನಿರ್ದಿಷ್ಟಾವಧಿ ನೀಡುತ್ತಾ ಹೋದರೆ ಗುಣಹೊಂದಲು ಸಾಧ್ಯವಿಲ್ಲ ಎಂಬುದು ನನ್ನನಂಬಿಕೆ. ವಾಸ್ತವವಾಗಿ ಯಾರೇ ವೈದ್ಯ ಕರುಣೆಯಿಂದ ಹೊರತು ಕೇವಲ ವೈದ್ಯಕೀಯ ಕಾರಣಗಳ ಮೇಲೆ ಪರ್ಮಿಟ್ಟ್ ನೀಡುವುದಿಲ್ಲ. ಆದರೆ ಪರ್ಮಿಟ್ಟನ್ನು ಓಂದಕ್ಕೆ ಪಡೆಯುವುದರಿಂದ ಕುಡಿತದ ಚಟವಿರುವವರು ಚೆನ್ನಾಗಿ ಗುಣಹೊಂದಬಹುದು.

**ಸನ್ಮಾನ್ಯ ಸಭಾಧ್ಯಕ್ಷರು** – ಇವೆಲ್ಲಾ ಅಭಿಪ್ರಾಯದ ವಿಷಯಗಳು.

**ಡಾ. ಟಿ.ಪಿ. ಪಾರ್ಥಸಾರಥಿ** – ಯಾವ ಆಧಾರದ ಮೇಲೆ ಪರ್ಮಿಟ್ ನೀಡಲಾಗಿದೆ? ಎಂಬುದನ್ನು ನಾನು ತಿಳಿಯಬಯಸುತ್ತೇನೆ.

**ಸನ್ಮಾನ್ಯ ಸಭಾಧ್ಯಕ್ಷರು** – ಈ ಪ್ರಶ್ನೆಗೆ ನಿಮ್ಮಂಥ ವೈದ್ಯರೇ ಉತ್ತರ ನೀಡಬೇಕು. ಸರ್ಕಾರ ವೈದ್ಯರನ್ನುನಂಬುತ್ತದೆ ಮತ್ತು ಅವರ ಸಲಹೆಯನ್ನು ಅಂಗೀಕರಿಸುತ್ತದೆ. ನಿಮ್ಮ ಪ್ರಶ್ನೆಗೆ ಉತ್ತರ ನೀಡಲು ಆ ಬಡಪಾಯಿ ಸಚಿವರಿಗೆ ಹೇಗೆ ಸಾಧ್ಯ. (ನಗೆ)?

**ಶ್ರೀ ಬಿ.ಎನ್.ಬೋರಣ್ಣ ಗೌಡ** – ಇನ್ನು ಮುಂದೆ ಪರ್ಮಿಟ್‌ಗಳನ್ನು ನೀಡುವ ಕಾರ್ಯವಿಧಾನವನ್ನು ಸರ್ಕಾರ ನಿಲ್ಲಿಸಿಬಿಡುತ್ತದೆಯೇ ಸ್ವಾಮಿ?

**ಶ್ರೀ ಮೊಹಮದ್ ಅಲಿ** – ಪರ್ಮಿಟ್‌ಗಳನ್ನು ಆರೋಗ್ಯದ ಪರಿಗಣನೆಗಳ ಮೇಲೆ ನೀಡಲಾಗುತ್ತದೆ. ಹಾಗಾಗಿ, ಪರ್ಮಿಟ್‌ಗಳನ್ನು ನೀಡುವುದು ವೈದ್ಯಕೀಯ ಅಭಿಪ್ರಾಯವನ್ನು ಅವಲಂಬಿಸಿರುತ್ತದೆ.

**ಶ್ರೀ ಜಿ. ದುಗ್ಗಪ್ಪ** – ಪ್ರಶ್ನೆ (ಎ) ಪ್ಯಾರಾಗೆ ಪೂರಕ ಪ್ರಶ್ನೆಯಾಗಿ ನಾನೊಂದು ಪ್ರಶ್ನೆ ಕೇಳಬಹುದೆ ಸ್ವಾಮಿ, ವೈದ್ಯಕೀಯ ಪ್ರಾಧಿಕಾರದಿಂದ ಯಾವುದೇ ಪ್ರಮಾಣ ಪತ್ರವಿಲ್ಲದೆಯೂ ಪರ್ಮಿಟ್‌ಗಳನ್ನು ನೀಡಲಾಗುತ್ತದೆಯೇ ಸ್ವಾಮಿ?

## ರಾಜ್ಯದಲ್ಲಿ ಪಾನನಿರೋಧ ಜಾರಿ

**ಶ್ರೀ ಎಂ.ರಾಮಪ್ಪ (ಹರಿಹರ)** – ಸರ್ಕಾರದವರು ದಯವಿಟ್ಟು ಇದನ್ನು ತಿಳಿಸುವರೆ?–

(ಎ) ಮೈಸೂರು ರಾಜ್ಯದಲ್ಲಿ ಪಾನ ನಿರೋಧ ಜಾರಿಗೊಳಿಸಿದ್ದು ಯಾವಾಗ?

(ಬಿ) 1950 ಮತ್ತು 1951ರಲ್ಲಿ ಪಾನ ನಿರೋಧ ಪ್ರಕರಣಗಳ ಸಂಖ್ಯೆ.

**ಉತ್ತರ: ಶ್ರೀ ಮೊಹಮದ್ ಅಲಿ – (ಅಬಕಾರಿ ಮತ್ತು ಗ್ರಾಮೀಣ ಕೈಗಾರಿಕಾ ಸಚಿವರು)**

(ಎ) ಪಾನನಿರೋಧವನ್ನು ಮೈಸೂರು ರಾಜ್ಯದಲ್ಲಿ ಜಾರಿಗೊಳಿಸಿದ್ದು 1947ರ ಜನವರಿ ಒಂದರಿಂದ ಮತ್ತು ಈ ಮುಂದೆ ತಿಳಿಸಿದ ಸ್ಥಳಗಳಿಗೆ ಅವುಗಳ ಮುಂದೆ ನಮೂದಿಸಿದ ದಿನಾಂಕಗಳನ್ನು ವಿಸ್ತರಿಸಲಾಯಿತು.

| | ಸ್ಥಳಗಳು | ಜಾರಿಗೊಳಿಸಿದ ದಿನಾಂಕ |
|---|---|---|
| 1) | ತುಮಕೂರು ಜಿಲ್ಲೆಯ ಪಾವಗಡ ತಾಲೂಕು ಹಾಗೂ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕು | 1–1–1947 |
| 2) | ಕೋಲಾರ, ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಗಳು | 01–07–1948 |
| 3 | ಚಿಕ್ಕಮಗಳೂರು ಮತ್ತು ಶಿವಮೊಗ್ಗ ಜಿಲ್ಲೆಗಳು | 1–07–1949 |
| 4. | ಹಾಸನ ಜಿಲ್ಲೆಯ ಬೇಲೂರು ಮತ್ತು ಸಕಲೇಶಪುರ ತಾಲೂಕುಗಳು | 1–7–1951 |
| 5. | ಹಾಸನ ಜಿಲ್ಲೆಯ ಆಲೂರು ಮತ್ತು ಅರಕಲಗೂಡು ತಾಲೂಕುಗಳು | 1–7–1954 |

| (ಬಿ) ವರ್ಷ | ಅಕ್ರಮ | ಭಟ್ಟಿ ಕಳ್ಳ | ಸಾಗಾಣಿಕೆ ಅಮಲು ಸ್ಥಿತಿ |
|---|---|---|---|
| 1950(9 ತಿಂಗಳು) | 914 | 2221 | 3552 |
| 1955 | 2822 | 7034 | 9807 |

**ಶ್ರೀ ಎಂ.ರಾಮಪ್ಪ** – 'ಬಿ'ಗೆ ನೀಡಿದ ಉತ್ತರದಲ್ಲಿ ಕಳ್ಳ ಸಾಗಾಣಿಕೆ ಪ್ರಕರಣಗಳ ಸಂಖ್ಯೆಯನ್ನು ನೀಡಲಾಗಿದೆ. ಕಳ್ಳ ಸಾಗಾಣಿಕೆ ಎಂದರೇನು? ತಿಳಿಸುತ್ತೀರಾ?

**ಸನ್ಮಾನ್ಯ ಸಭಾಧ್ಯಕ್ಷರು** – 'ಕಳ್ಳಸಾಗಾಣಿಕೆ' ಎಂದರೆ ಕಳ್ಳಸಾಗಾಣಿಕೆ (ನಗು)

**ಶ್ರೀ ಎಂ.ರಾಮಪ್ಪ** – ಈ ಪ್ರವರ್ಗದಡಿಯಲ್ಲಿ ಯಾವ ಯಾವ ಅಪರಾಧಗಳು ಬರುತ್ತವೆ?

**ಶ್ರೀ ಮೊಹಮದ್ ಅಲಿ** – ಮದ್ಯವನ್ನು ವೆಟ್ ಪ್ರದೇಶದಿಂದ ಡ್ರೈ ಪ್ರದೇಶಕ್ಕೆ ಕಳ್ಳ ಸಾಗಾಣಿಕೆ ಮಾಡುವುದನ್ನು ಇದು ಸೂಚಿಸುತ್ತದೆ.

**ಶ್ರೀ ಎಂ. ರಾಮಪ್ಪ** – ನಾನು ಮೈಸೂರು ಸಂಸ್ಥಾನಕ್ಕೆ ಸಂಬಂಧಪಟ್ಟಂತೆ ಪ್ರಶ್ನೆ ಕೇಳಿದ್ದೇನೆ. ಆದರೆ ಉತ್ತರದಲ್ಲಿ ಹಳೆಯ ಮೈಸೂರಿಗೆ ಸಂಬಂಧಪಟ್ಟ ಅಂಕಿಗಳನ್ನು ಮಾತ್ರ ಕೊಟ್ಟಿದ್ದಾರೆ. ಹೊಸ ಮೈಸೂರಿಗೆ ಸಂಬಂಧಪಟ್ಟುದನ್ನು ಏಕೆ ಕೊಟ್ಟಿಲ್ಲ?

**ಶ್ರೀ ಮೊಹಮದ್ ಅಲಿ** – ಮಾನ್ಯ ಸದಸ್ಯರು 1950 – 55ನೇ ಸಾಲಿಗೆ ಸಂಬಂಧಿಸಿದ ಅಂಕಿ ಅಂಶ ಮಾಹಿತಿಯನ್ನು ಕೇಳಿದ್ದರು ಮತ್ತು 1950 – 55 ರಲ್ಲಿ ನವ ಮೈಸೂರು ರಾಜ್ಯ ಅಸ್ತಿತ್ವಕ್ಕೆ ಬಂದಿರಲಿಲ್ಲ ಎಂಬ ಸಂಗತಿ ಅವರಿಗೆ ಚೆನ್ನಾಗಿ ಗೊತ್ತಿದೆ.

**ಶ್ರೀ ಎ.ಆರ್. ಬದರಿನಾರಾಯಣ್** – ಅಪರಾಧಗಳ ಸಂಖ್ಯೆಯಲ್ಲಿ ಇಷ್ಟೊಂದು ಅಪಾರವಾದ ಹೆಚ್ಚಳ ಉಂಟಾಗಲು ಕಾರಣವೇನು?

**ಶ್ರೀ ಮೊಹಮದ್ ಅಲಿ** – ವಾಸ್ತವ ಸಂಗತಿಯೆಂದರೆ, ಅಪರಾಧಗಳನ್ನು ಪತ್ತೆ ಹಚ್ಚುವ ಪ್ರಕರಣಗಳ ಸಂಖ್ಯೆ ಹೆಚ್ಚಾಗಿದೆ.

**ಶ್ರೀ ಎ.ಆರ್. ಬದರಿನಾರಾಯಣ್** – ಅಂದರೆ ಅಪರಾಧಗಳ ಸಂಖ್ಯೆಯಲ್ಲಿ ಯಾವುದೇ ಹೆಚ್ಚಳ ಆಗಿಲ್ಲ ಎಂದೆ?

**ಶ್ರೀ ಮೊಹಮದ್ ಅಲಿ** – ಅಂಥ ತೀರ್ಮಾನಕ್ಕೆ ಬರುವುದು ಕಷ್ಟ. ಏಕೆಂದರೆ ಅಕ್ರಮ ಭಟ್ಟಿ ಇಳಿಸುವ ಮತ್ತು ಅದಕ್ಕೆ ಸಂಬಂಧಿಸಿದ ಅಪರಾಧ ಪ್ರಕರಣಗಳು ಪಾನನಿರೋಧದಿಂದಾಗಿ ಉಂಟಾದುವಲ್ಲ.

**ಶ್ರೀ ಎ.ಆರ್. ಬದರಿನಾರಾಯಣ್** – ಅಪರಾಧ ಪ್ರಕರಣಗಳಲ್ಲಿ ಇಳಿಕೆಯಾಗಿರುವುದು ಸರ್ಕಾರಕ್ಕೆ ಮನವರಿಕೆಯಾಗಿದೆಯೆ?

**ಶ್ರೀ ಮೊಹಮದ್ ಅಲಿ** – ಇದು ಅಭಿಪ್ರಾಯದ ವಿಷಯವಷ್ಟೆ.

**ಶ್ರೀ ವಿ.ಪಿ. ದೀನದಯಾಳು ನಾಯ್ಡು** – ಇಂಥ ಎಷ್ಟು ಪ್ರಕರಣಗಳಲ್ಲಿ ಶಿಕ್ಷೆ ವಿಧಿಸಲಾಗಿದೆ ಸ್ವಾಮಿ?

**ಶ್ರೀ ಮೊಹಮದ್ ಅಲಿ** – ನೋಟೀಸ್, ಸ್ವಾಮಿ.

**ಶ್ರೀ ಎಸ್.ಡಿ. ಕೊಥ್ವಾಲೆ** – ಪ್ರಕರಣಗಳ ಸಂಖ್ಯೆಯಲ್ಲಿ ಹೆಚ್ಚಳವುಂಟಾಗಿರುವುದಕ್ಕೆ 1954ರಲ್ಲಿ ಹಾಸನ ಜಿಲ್ಲೆಯ ಬೇಲೂರು ಮತ್ತು ಸಕಲೇಶಪುರ ತಾಲ್ಲೂಕುಗಳಿಗೆ ಹಾಗೂ ಆಲೂರು ಮತ್ತು ಅರಕಲಗೂಡು ತಾಲ್ಲೂಕುಗಳಿಗೆ ಪಾನನಿರೋಧವನ್ನು ವಿಸ್ತರಿಸಿರುವುದು ಕಾರಣವಲ್ಲ ಅಲ್ಲವೆ? ತಿಳಿಸಿ.

**ಶ್ರೀ ಮೊಹಮದ್ ಅಲಿ** – ಪ್ರಕರಣಗಳ ಸಂಖ್ಯೆಯಲ್ಲಿ ಏರಿಳಿತಕ್ಕೆ ಹಲವಾರು ಅಂಶಗಳಿವೆ. ವಿಶೇಷವಾಗಿ 1950 – 51 ರಲ್ಲಿ ಅಧಿಕೃತ ವರ್ಷದಲ್ಲಿ ಬದಲಾವಣೆಯಾದದ್ದು ಒಂದು ಕಾರಣ. ಆ

ವರ್ಷದಲ್ಲಿ ತೋರಿಸಿರುವ ಪ್ರಕರಣಗಳ ಸಂಖ್ಯೆ 1950ರಲ್ಲಿ 9 ತಿಂಗಳುಗಳಿಗೆ ಮಾತ್ರ ಸಂಬಂಧಿಸಿದ್ದಾಗಿದೆ. ಆನಂತರ ಪಾನನಿರೋಧಕ್ಕೆ ಸಂಬಂಧಿಸಿದಂತಹ ಅಪರಾಧಗಳನ್ನು ಪೊಲೀಸ್ ಇಲಾಖೆಗೆ ವಹಿಸಿಕೊಡಲಾಯಿತು. ಆ ಇಲಾಖೆಯು ಆ ವರ್ಷದ ಕೊನೆಯಲ್ಲಿ ಪಾನನಿರೋಧಕ್ಕೆ ಸಂಬಂಧಿಸಿದ ಆಡಳಿತವನ್ನು ವಹಿಸಿಕೊಂಡಿತು.

**ಶ್ರೀ ಕುಂದೂರ ರುದ್ರಪ್ಪ** – ಚನ್ನಗಿರಿ ಮತ್ತು ದಾವಣಗೆರೆ ಕಡೆ ಮಂತ್ರಿಗಳು ಹೋದಾಗ ರೈತರಿಗೆ ಅನೇಕ ತೊಂದರೆಗಳು ಆಗುತ್ತಿವೆ ಎಂದು ಮನವಿಗಳನ್ನು ಕೊಟ್ಟಿದ್ದಾರಲ್ಲವೆ?

**ಸನ್ಮಾನ್ಯ ಸಭಾಧ್ಯಕ್ಷರು** – ಅದು ಮುಖ್ಯ ಪ್ರಶ್ನೆಗೆ ಸಂಬಂಧಪಡುವುದಿಲ್ಲ.

**ಶ್ರೀಮತಿ ಬಸವರಾಜೇಶ್ವರಿ** – ಪಾನ ಪ್ರತಿ ಬಂಧವನ್ನು ಹೈದರಾಬಾದ್ ಕರ್ನಾಟಕದಲ್ಲಿ ಜಾರಿಗೆ ತರಬೇಕೆಂದು ಸರ್ಕಾರಕ್ಕೆ ಉದ್ದೇಶವಿದೆಯೆ?

**ಅಧ್ಯಕ್ಷರು** – ಅದು ಈ ಪ್ರಶ್ನೆಗೆ ಸಂಬಂಧಪಡುವುದಿಲ್ಲ.

**ಶ್ರೀ ಎಫ್.ಹೆಚ್. ಮೊಹ್ಸಿನ್** – ಬಾಂಬೆ ಕರ್ನಾಟಕದಲ್ಲಿ ಪಾನನಿರೋಧ ಜಾರಿಗೆ ಬಂದಿದ್ದು ಯಾವಾಗ?

**ಸನ್ಮಾನ್ಯ ಸಭಾಧ್ಯಕ್ಷರು** – ಅದೂ ಕೂಡ ಮುಖ್ಯ ಪ್ರಶ್ನೆಗೆ ಸಂಬಂಧಪಡುವುದಿಲ್ಲ.

ಮಧ್ಯಾಹ್ನ 3 ಗಂಟೆ

**ಶ್ರೀ ಕೆ.ಎಸ್. ಸೂರ್ಯನಾರಾಯಣರಾವ್** – ಔಷಧಿಗಳ ಹೆಸರಿನಲ್ಲಿ ಭಾರೀ ಪ್ರಮಾಣದ ಮದ್ಯವನ್ನು ರಾಜ್ಯದ ಹೊರಗೆ ಕಳ್ಳಸಾಗಣೆ ಮಾಡುತ್ತಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ?

**ಸನ್ಮಾನ್ಯ ಸಭಾಧ್ಯಕ್ಷರು** – ಇದೂ ಕೂಡ ಮುಖ್ಯ ಪ್ರಶ್ನೆಗೆ ಸಂಬಂಧಪಡುವುದಿಲ್ಲ.

**ಶ್ರೀ ಎ.ಮುನಿಯಪ್ಪ** – ಕಳ್ಳಭಟ್ಟಿ ಸರಾಯಿ ಸಂಬಂಧದಲ್ಲಿ ಕಂಡು ಹಿಡಿದ ಕೇಸುಗಳ ಸಂಖ್ಯೆ ಎಷ್ಟು ಸ್ವಾಮಿ?

**ಸನ್ಮಾನ್ಯ ಸಭಾಧ್ಯಕ್ಷರು** – ಅದೂ ಕೂಡ ಮುಖ್ಯ ಪ್ರಶ್ನೆಗೆ ಸಂಬಂಧಪಡುವುದಿಲ್ಲ.

**ಶ್ರೀ ಎಂ. ರಾಮಪ್ಪ** – ಕಳ್ಳಭಟ್ಟಿ ಸರಾಯಿ ಸಂಬಂಧದಲ್ಲಿ ಇರತಕ್ಕಂಥ ಕೇಸುಗಳಲ್ಲಿ ವಾಪಸು ತೆಗೆದುಕೊಂಡಥವುಗಳು ಎಷ್ಟು?

**ಮಾನ್ಯ ಸಭಾಧ್ಯಕ್ಷರು** – ಇದು ಮೂಲ ಪ್ರಶ್ನೆಯಿಂದ ಉದ್ಭಸುವುದಿಲ್ಲ.

**ಶ್ರೀ ಕೆ.ಎಸ್. ಸೂರ್ಯನಾರಾಯಣರಾವ್** – ಭಾರೀ ಪ್ರಮಾಣದಲ್ಲಿ ಅಕ್ರಮ ಭಟ್ಟಿ ಇಳಿಸುತ್ತಿರುವುದರಿಂದ ಸಾಮಾನ್ಯ ಆರೋಗ್ಯ ಮಟ್ಟ ಕ್ಷೀಣಿಸುತ್ತಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೆ?

**ಸನ್ಮಾನ್ಯ ಸಭಾಧ್ಯಕ್ಷರು** – ಇದು ಕೂಡ ಪ್ರಶ್ನೆಗೆ ಸಂಬಂಧಪಡುವುದಿಲ್ಲ.

**ಶ್ರೀ ಕೆ. ಪುಟ್ಟರಾಮಯ್ಯ** – ಸ್ವಾಮಿ, ಉತ್ತರದಲ್ಲಿ ಈ ಕೆಳಗೆ ಕಂಡ ಸ್ಥಳಗಳಲ್ಲಿ ಪಾನ ನಿರೋಧವನ್ನು ಜಾರಿಗೆ ತರಲಾಯಿತು ಎಂದು ಹೇಳಿದೆ. ಅದರಂತೆ ಚನ್ನಪಟ್ಟಣ ಮತ್ತು ರಾಮನಗರದಲ್ಲಿ illicit distillationಗೆ ಸಂಬಂಧಿಸಿದ ಕೇಸುಗಳನ್ನು ಹಾಕಿರುವುದಕ್ಕೆ ಕಾರಣವೇನು, ಸ್ವಾಮಿ?

**ಶ್ರೀ ಮೊಹಮದ್ ಅಲಿ** – 1938ನೇ ಸಾಲಿನಲ್ಲಿ ಚನ್ನಪಟ್ಟಣ ತಾಲ್ಲೂಕಿನಲ್ಲಿ ಪಾನನಿರೋಧ ಜಾರಿಗಳಿಸಲಾಯಿತು.

**ಶ್ರೀ ಬಿ.ಕೆ.ಪುಟ್ಟರಾಮಯ್ಯ** – ಅಂದ ಮೇಲೆ ಇಲ್ಲಿ ಯಾಕೆ ಸೇರಿಸಿಲ್ಲ? ಇಲ್ಲಿ ಸೇರಿಸಿಲ್ಲದಿರುವಾಗ ಚನ್ನಪಟ್ಟಣದಲ್ಲಿ ಪಾನನಿರೋಧ ಜಾರಿಗೊಳಿಸಿಲ್ಲ ಎಂದರ್ಥ. ಆದರೆ ಪಾನನಿರೋಧಕ್ಕೆ ಸಂಬಂಧಿಸಿದ ಅಪರಾಧಗಳ ಬಗ್ಗೆ ಪ್ರಕರಣಗಳನ್ನು ದಾಖಲಿಸಲಾಗಿದೆ. ನೀವು ಹೀಗೇಕೆ ಮಾಡಿದ್ದೀರಿ?

**ಶ್ರೀ ಮೊಹಮದ್ ಅಲಿ** – ಸ್ವಾಮಿ, ಚನ್ನಪಟ್ಟಣ ತಾಲ್ಲೂಕಿನಲ್ಲಿ ಪಾನನಿರೋಧ ಜಾರಿಗೊಳಿಸಲಾಗಿದೆ. ಅಷ್ಟೇ ಅಲ್ಲ, 1938ರಿಂದ ಅದು ಜಾರಿಯಲ್ಲಿದೆ. ಪ್ರಮಾದವಶಾತ್ ಇಲ್ಲಿ ಅದನ್ನು ತಿಳಿಸಿಲ್ಲ.

**ಶ್ರೀ ಎಂ.ಸಿ.ನರಸಿಂಹನ್** – ಈ ಎಲ್ಲಾ ಸ್ಥಳಗಳಲ್ಲಿ ನೀರಾ ಮಾರಾಟ ಮಾಡಲಾಗುತ್ತಿದೆಯೆ?

**ಸನ್ಮಾನ್ಯ ಸಭಾಧ್ಯಕ್ಷರು** – ಅದು ಬೇರೆಯದೇ ಆದ ಪ್ರಶ್ನೆ.

ಪ್ರಶ್ನೋತ್ತರ ವೇಳೆ ಮುಗಿಯಿತು.

# ರಾಜ್ಯದಲ್ಲಿ ಸೇಂದಿ ಮತ್ತು ಸಾರಾಯಿ ಬಾಕಿ

**ಶ್ರೀ ಎಂ. ಲಿಂಗೇಗೌಡ**– ಸರ್ಕಾರದವರು ದಯವಿಟ್ಟು ಇದನ್ನು ತಿಳಿಸುವರೇ?

(ಎ) ಹಳೆಯ ಮೈಸೂರು ರಾಜ್ಯದಲ್ಲಿ ಸೇಂದಿ ಮತ್ತು ಸಾರಾಯಿ ಸಂಬಂಧ ಇನ್ನೂ ವಸೂಲಿಯಾಗಬೇಕಾಗಿರುವ ಬಾಕಿಯ ಮೊತ್ತ.

(ಬಿ) ಆ ಬಾಕಿಗಳನ್ನು ಉಳಿಸಿಕೊಂಡಿರುವ ವ್ಯಕ್ತಿಗಳ ಹೆಸರುಗಳು.

(ಸೇಂದಿ ಮತ್ತು ಸಾರಾಯಿ ಅಂಕಿಗಳನ್ನು ಪ್ರತ್ಯೇಕವಾಗಿ ಒದಗಿಸಬೇಕು)

**ಶ್ರೀ ಎಂ.ಲಿಂಗೇಗೌಡ** – ಹೆಂಡದ ಬಾಬ್ತು ಐದು ಲಕ್ಷ ಚಿಲ್ಲರೆ ರೂಪಾಯಿ ಬಾಕಿ ಇರುವುದಕ್ಕೆ ಕಾರಣವೇನು?

**ಶ್ರೀ ಮೊಹಮದ್ ಅಲಿ** – ಏಕೆಂದರೆ ಅವರು ಹಣ ಕಟ್ಟಿಲ್ಲ.

**ಶ್ರೀ ಎಂ.ಲಿಂಗೇಗೌಡ** – ತಾವು ಸ್ಟಾಂಪ್ಡ್ ಪೇಪರ್ ಮೇಲೆ ಮುಚ್ಚಳಿಕೆಯನ್ನು ತೆಗೆದುಕೊಂಡಿದ್ದೀರಾ?

**ಶ್ರೀ ಮೊಹಮದ್ ಅಲಿ** – ಹೌದು, ಎಲ್ಲಾ ಕಾನೂನುಬದ್ಧ ಭದ್ರತೆಗಳನ್ನು ಅವರಿಂದ ಪಡೆಯಲಾಗಿದೆ.

**ಶ್ರೀ ಎಂ.ಲಿಂಗೇಗೌಡ** – ಮುಚ್ಚಳಿಕೆಗಳನ್ನು ರಿಜಿಸ್ಟರ್ ಮಾಡಬೇಕೆಂದು ಕಾನೂನಿದೆ. ಆ ರೀತಿ ರಿಜಿಸ್ಟರ್ ಮಾಡಿಸಿದ್ದೀರಾ?

**ಶ್ರೀ ಮೊಹಮದ್ ಅಲಿ** – ಅವರೇ ತಮ್ಮ ಹೆಸರನ್ನು ನೋಂದಾಯಿಸಿರುವಾಗ, ನೋಂದಾಯಿಸುವ ಅವಶ್ಯಕತೆಯಾದರೂ ಎಲ್ಲಿದೆ?

**ಶ್ರೀ ಬಿ. ರಾಚಯ್ಯ** – arrear ಎಷ್ಟು ವರ್ಷಗಳಿಂದ ಬಾಕಿ ಇದೆ?

**ಶ್ರೀ ಮೊಹಮದ್ ಅಲಿ** – ಆ ವಿವರಗಳು ಸದ್ಯಕ್ಕೆ ನನ್ನಲ್ಲಿ ಇಲ್ಲ.

**ಶ್ರೀ ಬಿ. ರಾಚಯ್ಯ** – ಪ್ರತಿ ವರ್ಷವೂ ಕೂಡ ಎಷ್ಟೆಷ್ಟು out standing arrear ಇದೆ ಎನ್ನ ತಕ್ಕದ್ದರ ಬಗ್ಗೆ ತಾವು ದಾಖಲೆ ತರಿಸಿಕೊಳ್ಳುವುದಿಲ್ಲವೆ?

**ಶ್ರೀ ಮೊಹಮದ್ ಅಲಿ** – ಹೌದು, ತರಿಸಿಕೊಳ್ಳುತ್ತೇನೆ, ವಿವರಗಳನ್ನು ಮುಂದೆ ನೀಡುತ್ತೇನೆ.

**ಶ್ರೀ ಜಿ.ವೆಂಕಟಯ್ಯಗೌಡ** – ಎಷ್ಟು ಜನ ಬಾಕಿ ಹಣ ಕಟ್ಟಿಲ್ಲ?

**ಶ್ರೀ ಮೊಹಮದ್ ಅಲಿ** – 64.

**ಶ್ರೀ ಎ.ಜಿ.ನರಸಿಂಹೇಗೌಡ** – ಬಾಕಿ ಇರುವುದರಲ್ಲಿ ಯಾವ ಯಾವ ಜಿಲ್ಲೆಯಿಂದ ಎಷ್ಟೆಷ್ಟಿದೆ ಎಂದು ಹೇಳುತ್ತೀರಾ?

**ಶ್ರೀ ಮೊಹಮದ್ ಅಲಿ** – ಆ ವಿವರಗಳು ಸದ್ಯಕ್ಕೆ ನನ್ನ ಬಳಿ ಇಲ್ಲ.

**ಶ್ರೀ ಸಿ.ಕೆ. ರಾಜಂಯ್ಯಶೆಟ್ಟಿ** – ಬಾಕಿ ಇರುವುದು ವ್ಯಕ್ತಿಗಳಿಂದಲೋ ಅಥವಾ ಫರ್ಮ್‌ಗಳಿಂದಲೋ?

**ಶ್ರೀ ಮೊಹಮದ್ ಅಲಿ** – ವ್ಯಕ್ತಿಗಳಿಂದ

**ಶ್ರೀ ಬಿ.ಎ. ಪುಟ್ಟಣ್ಣ** – ಸರ್ಕಾರದವರು ಈ ಬಾಕಿಯನ್ನು write off ಮಾಡಬೇಕೆಂದು ಯೋಚನೆ ಮಾಡಿದ್ದಾರೆಯೆ?

**ಶ್ರೀ ಮೊಹಮದ್ ಅಲಿ** – ಬಾಕಿಗಳನ್ನು ಮನ್ನಾ ಮಾಡುವ ಪ್ರಶ್ನೆಯೇ ಇಲ್ಲ.

**ಶ್ರೀ ಎಚ್.ಸಿ.ಲಿಂಗಾರೆಡ್ಡಿ** – ಸುಸ್ತಿದಾರರಿಂದ ಬಾಕಿಗಳನ್ನು ವಸೂಲಿ ಮಾಡಲು ಅವರ ಆಸ್ತಿಗಳನ್ನು ಯಾವಾಗಲಾದರೂ ಹರಾಜು ಮಾಡಿದ್ದೀರಾ?

**ಶ್ರೀ ಮೊಹಮದ್ ಅಲಿ** – ಸುಸ್ತಿದಾರರಿಂದ ಬಾಕಿಗಳನ್ನು ವಸೂಲಿ ಮಾಡಲು ಸೂಕ್ತ ಕ್ರಮ ಕೈಗೊಳ್ಳಲಾಗಿದ್ದು, ಕೈಗೊಂಡಿರುವ ಕ್ರಮಗಳು ಈಗ ವಿವಿಧ ಹಂತಗಳಲ್ಲಿವೆ.

**ಶ್ರೀ ಹೆಚ್.ಸಿ. ಲಿಂಗಾರೆಡ್ಡಿ** – ಬಂಧಪತ್ರಗಳನ್ನು ಬರೆದುಕೊಟ್ಟಿರುವವರಿಂದ ಮತ್ತು ಭದ್ರತೆಗಳನ್ನು ನೀಡಿರುವವರಿಂದ ಆದಷ್ಟು ಬೇಗನೆ ಹಣವನ್ನು ವಸೂಲಿ ಮಾಡುವ ಸಲುವಾಗಿ ಅವರ ಸ್ವತ್ತುಗಳ ಬಗ್ಗೆ ಕ್ರಮ ಕೈಗೊಳ್ಳಲಾಗಿದೆಯೇ? ತಿಳಿಸಿ.

**ಶ್ರೀ ಮೊಹಮದ್ ಅಲಿ** – ಹೌದು.

**ಶ್ರೀ ಅಣ್ಣಾರಾವ್ ಗಣಮುಖಿ** – ಬಾಕಿ ಕಟ್ಟದಿರುವ ಯಾರಾದರೂ ಗುತ್ತಿಗೆದಾರ, ಬಾಕಿಯನ್ನು ಮನ್ನಾ ಮಾಡುವಂತೆ ಕೋರಿದ್ದಾನೆಯೇ?

**ಶ್ರೀ ಮೊಹಮದ್ ಅಲಿ** – ನನಗೆ ಗೊತ್ತಿಲ್ಲ.

**ಶ್ರೀ ಅಣ್ಣಾರಾವ್ ಗಣಮುಖಿ** – ಈ ಬಾಕಿ ಕಟ್ಟದಿರುವ ಗುತ್ತಿಗೆದಾರರ ಪೈಕಿ ಕಂತುಗಳಲ್ಲಿ ಬಾಕಿ ಕಟ್ಟುವ ರಿಯಾಯಿತಿಗಾಗಿ ಎಷ್ಟು ಜನ ಅರ್ಜಿ ಸಲ್ಲಿಸಿದ್ದಾರೆ?

**ಶ್ರೀ ಮೊಹಮದ್ ಅಲಿ** – ಅವರಲ್ಲಿ ಕೆಲವೇ ಕೆಲವರು ಕಂತುಗಳಿಗಾಗಿ ಅರ್ಜಿ ಸಲ್ಲಿಸಿದ್ದಾರೆ. ಅವರಿಗೆ ಕಂತುಗಳಲ್ಲಿ ಸಂದಾಯ ಮಾಡುವ ಸೌಲಭ್ಯವನ್ನು ಸಹ ನೀಡಲಾಗುತ್ತಿದೆ.

**ಶ್ರೀ ವೈ.ವೀರಪ್ಪ** – ಬಾಕಿ ವಸೂಲಿಗಾಗಿ ಮೇಲ್ನೋಟಕ್ಕೆ ಯಾವುದಾದರೂ ನಿರ್ಬಂಧಕ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆಯೇ?

**ಶ್ರೀ ಮೊಹಮದ್ ಅಲಿ** – ಭೂ ಕಂದಾಯ ಸಂಹಿತೆಯಡಿಯಲ್ಲಿ ಎಲ್ಲಾ ನಿರ್ಬಂಧಕ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ ಅಥವಾ ಪ್ರಾರಂಭಿಸಲಾಗಿದೆ.

**ಶ್ರೀ ವೈ.ವೀರಪ್ಪ** – ಹಾಗಿದ್ದಲ್ಲಿ, ಬಾಕಿ ಕಟ್ಟದವರ ವಿರುದ್ಧ ಕ್ರಮ ತೆಗೆದುಕೊಳ್ಳಲು ಸರ್ಕಾರಕ್ಕಿರುವ ತೊಂದರೆಯಾದರೂ ಏನು?

**ಶ್ರೀ ಮೊಹಮದ್ ಅಲಿ** – ತೊಂದರೆ ಏನಿಲ್ಲ. ಬಾಕಿ ಹಣವನ್ನು ಆದಷ್ಟು ಬೇಗ ವಸೂಲಿ ಮಾಡಲಾಗುವುದು.

**ಶ್ರೀ ಬಿ.ರಾಚಯ್ಯ** – defaulter ಪೈಕಿ ಈ ವರ್ಷ ಯಾರಿಗಾದರೂ ಟೆಂಡರುಗಳನ್ನು ಕೊಟ್ಟಿದ್ದೀರಾ?

**ಶ್ರೀ ಮೊಹಮದ್ ಅಲಿ** – ಆ ಮಾಹಿತಿ ನನ್ನ ಬಳಿ ಇಲ್ಲ.

**ಶ್ರೀ ಬಿ.ರಾಚಯ್ಯ** – ಟೆಂಡರುಗಳನ್ನು ಒಪ್ಪಿಕೊಳ್ಳುವುದಕ್ಕೆ ಮುಂಚಿತವಾಗಿ ಹಿಂದಿನ ಸಲದ ಬಾಕಿಯನ್ನು ಕೊಡುತ್ತ ಬಂದಿದ್ದಾರೆಯೇ ಅಥವಾ ಇಲ್ಲವೆ ಎಂದು ನೋಡಿ ಕೊಡುತ್ತೀರಾ?

**ಶ್ರೀ ಮೊಹಮದ್ ಅಲಿ** – ಅದನ್ನು ನಿಯಮಗಳ ಪ್ರಕಾರ ಪರಿಗಣಿಸಲಾಗುವುದು.

**ಶ್ರೀ ಬಿ.ಎ. ಬೋರಣ್ಣಗೌಡ** – ಬಾಕಿ ಇರತಕ್ಕ ಕಂಟ್ರಾಕ್ಟರುಗಳು ತಮಗೆ ಇರತಕ್ಕ ಆಸ್ತಿಯನ್ನು ಬೇರೆಯವರ ಹೆಸರಿಗೆ ಮಾಡಿ ಸರ್ಕಾರಕ್ಕೆ ಮೋಸ ಮಾಡಬೇಕೆಂಬ ಅಭಿಪ್ರಾಯದಿಂದಿದ್ದಾರೆನ್ನುವುದು ತಮಗೆ ಗೊತ್ತಿದೆಯೇ?

**ಶ್ರೀ ಮೊಹಮದ್ ಅಲಿ** – ಅದು ಸರ್ಕಾರದ ಗಮನಕ್ಕೆ ಬಂದಿಲ್ಲ.

**ಶ್ರೀ ಬಿ.ಎ.ಬೋರಣ್ಣಗೌಡ** – ಅಂಥವರಿಂದ ಯಾವ ರೀತಿ ಬಾಕಿ ಇರುವ ಹಣವನ್ನು ವಸೂಲ್ಮಾಡುತ್ತೀರಿ?

**ಶ್ರೀ ಮೊಹಮದ್ ಅಲಿ** – ಅದು ಸಕಾರದ ಗಮನಕ್ಕೆ ಬಂದರೆ, ಸರ್ಕಾರ ತಕ್ಕ ಕ್ರಮ ಕೈಗೊಳ್ಳುತ್ತದೆ.

**ಶ್ರೀ ಎ.ಜಿ.ದೊಡ್ಡಮೇಟಿ** – ಕನ್ನಡದಲ್ಲಿ ಪ್ರಶ್ನೆ ಕೇಳಿದರೆ ಮಂತ್ರಿಗಳು ಇಂಗ್ಲೀಷಿನಲ್ಲಿ ಉತ್ತರವನ್ನು ಹೇಳಿದರೆ ಹೇಗೆ ತಿಳಿಯಬೇಕು. ಕನ್ನಡದಲ್ಲಿ ಪ್ರಶ್ನೆ ಕೇಳಿದರೆ ಕನ್ನಡದಲ್ಲಿ ಉತ್ತರ ಹೇಳುವ ಸಂಪ್ರದಾಯವಿಲ್ಲವೆ?

**ಅಧ್ಯಕ್ಷರು** – ಹಾಗೆ ಸಂಪ್ರದಾಯವಿಲ್ಲ.

**ಶ್ರೀ ಎ.ಜಿ.ದೊಡ್ಡಮೇಟಿ** – ಮಂತ್ರಿಗಳಿಗೆ ಕನ್ನಡ ಬರುವುದಿಲ್ಲವೆಂದು ಇಂಗ್ಲೀಷಿನಲ್ಲಿ ಹೇಳುತ್ತಾರೆಯೇ?

**ಅಧ್ಯಕ್ಷರು** – ಅದು ತಮಗೇ ಗೊತ್ತಿದೆ.

**ಶ್ರೀ ವೈ. ವೀರಪ್ಪ** – ಬೆಂಗಳೂರುನಗರದಲ್ಲಿ ಬಾಕಿ ಕಟ್ಟದವರಾರಾದರೂ ಇದ್ದಾರೆಯೇ?

**ಶ್ರೀ ಮೊಹಮದ್ ಅಲಿ** – ಕೆಲವರಿರಬಹುದು.

**ಶ್ರೀ ಎಂ.ರಾಮಪ್ಪ** – ಪಕ್ಷಕಾರರ ಮತ್ತು ಸರ್ಕಾರದನಡುವೆ ಹಣಕ್ಕೆ ಸಂಬಂಧಿಸಿದಂತೆ ವಿವಾದವೇನಾದರೂ ಇದೆಯೇ?

**ಶ್ರೀ ಮೊಹಮದ್ ಅಲಿ** – ಆ ವಿವರಗಳು ನನ್ನ ಬಳಿ ಇಲ್ಲ.

**ಶ್ರೀ ಎಂ. ರಾಮಪ್ಪ** – ಪಕ್ಷಕಾರರು ಈ ಹಣವನ್ನು ಒಪ್ಪಿಕೊಂಡಿದ್ದಾರೆಯೇ? ಅಥವಾ ಆ ಬಗ್ಗೆ ಏನಾದರೂ ವಿವಾದವಿದೆಯೇ?

**ಶ್ರೀ ಮೊಹಮದ್ ಅಲಿ** – ಈಗ ಆ ವಿವರಗಳನ್ನು ನೀಡುವ ಸ್ಥಿತಿಯಲ್ಲಿ ನಾನಿಲ್ಲ

**ಶ್ರೀ ಸಿ.ಕೆ.ರಾಜಯ್ಯಶೆಟ್ಟಿ** – ಈ ಸುಸ್ತಿ ದಾರರ ಪೈಕಿ ಯಾರಾದರೂ ಈಗ ಗುತ್ತಿಗೆ ನೀಡಿರುವಂತಹ ಹೊಸದಾಗಿ ಸ್ಥಾಪಿತವಾಗಿರುವ ಕಂಪನಿಯಲ್ಲಿ ಪಾಲುದಾರರಾಗಿದ್ದಾರೆಯೆ ಎಂಬುದನ್ನು ತಿಳಿಸುತ್ತೀರಾ?

**ಶ್ರೀ ಮೊಹಮದ್ ಅಲಿ** – ಆ ವಿವರಗಳು ನನ್ನ ಬಳಿ ಇಲ್ಲ.

**ಶ್ರೀ ವಿ.ಪಿ. ದೀನದಯಾಳು ನಾಯ್ಡು** – ಈ ಹಣದಲ್ಲಿ ಬಡ್ಡಿಯೂ ಸೇರಿದೆಯೇ? ಅಥವಾ ಇದು ಬಡ್ಡಿ ಸೇರಿಸದಿರುವ ಬಾಕಿ ಹಣವೇ?

**ಶ್ರೀ ಮೊಹಮದ್ ಅಲಿ** – ಆ ವಿವರಗಳು ಸಹಾ ಸದ್ಯಕ್ಕೆ ನನ್ನ ಬಳಿ ಇಲ್ಲ.

**ಶ್ರೀ ಜಿ. ವೆಂಕಟಯ್ಯ ಗೌಡ** – ಮುಂದೆ ಯಾವುದೇ ಬಿಡ್ ಮಾಡದಂತೆ ಈ ಬಾಕಿ ಕಟ್ಟದಿರುವವರನ್ನು ಡಿಬಾರ್ ಮಾಡುವಂಥ ಯಾವುದಾದರೂ ಉಪಬಂಧ ಟೆಂಡರ್‌ನಲ್ಲಿದೆಯೆ?

**ಶ್ರೀ ಮೊಹಮದ್ ಅಲಿ** – ಬಿಡ್ ಮಾಡದಂತೆ ಬಾಕಿ ಕಟ್ಟದಿರುವವರನ್ನು ಡಿಬಾರ್ ಮಾಡಲು ನಿಯಮಗಳಿವೆ.

**ಶ್ರೀ ಅಣ್ಣಾರಾವ್ ಗಣಮುಖಿ** – ಈ ಬಾಕಿ ಹಣದಲ್ಲಿ ಎಷ್ಟು ಶೇಕಡಾ ಪ್ರಮಾಣ ವಸೂಲಿಯಾಗಬಹುದು?

**ಶ್ರೀ ಮೊಹಮದ್ ಅಲಿ** – ಶೇಕಡಾ ನೂರಕ್ಕೆ ನೂರರಷ್ಟು ಬಾಕಿ ಹಣ ವಸೂಲಾಗುವ ಭರವಸೆ ನನಗಿದೆ.

ಶ್ರೀ **ವೈ. ವೀರಪ್ಪ** – ಈ 54 ಬಾಕಿ ಕಟ್ಟದಿರುವವರ ಪೈಕಿ ಅತ್ಯಂತ ಹೆಚ್ಚು ಬಾಕಿ ಉಳಿಸಿಕೊಂಡಿರುವವರಾರು?

**ಸನ್ಮಾನ್ಯ ಸಭಾಧ್ಯಕ್ಷರು** – ಹೆಸರನ್ನು ಇಲ್ಲಿ ಬಹಿರಂಗ ಪಡಿಸಲಾಗುವುದಿಲ್ಲ.

ಶ್ರೀ **ಮುನಿಯಪ್ಪ** – ಐದು ಲಕ್ಷ ಚಿಲ್ಲರೆ ರೂಪಾಯಿಗಳು ಬಾಕಿ ಇದೆ. ಇವರ ಆಸ್ತಿ ಪಾಸ್ತಿಗಳು ಎಷ್ಟಿವೆ ಎಂದು ತಿಳಿದುಕೊಂಡಿದ್ದೀರಾ?

ಶ್ರೀ **ಮೊಹಮದ್ ಅಲಿ** – ಹೌದು, ಸಾಕಷ್ಟು ಭದ್ರತೆಯನ್ನು ತೆಗೆದುಕೊಳ್ಳಲಾಗಿದೆ.

ಶ್ರೀ **ಎ. ಮುನಿಯಪ್ಪ** – ಸುಮಾರು ಎಷ್ಟಿರಬಹುದು?

ಶ್ರೀ **ಮೊಹಮದ್ ಅಲಿ** – ಈಗ ಅದನ್ನು ನೀಡಲಾಗುವುದಿಲ್ಲ.

ಶ್ರೀ **ಸಿ.ಕೆ. ರಾಜಯ್ಯ ಶೆಟ್ಟಿ** – ಮುಂದಿನ ವರ್ಷದ ಕೊನೆಯ ವೇಳೆಗೆ ಎಲ್ಲಾ ಬಾಕಿಯನ್ನು ವಸೂಲಿ ಮಾಡುವುದಾಗಿ ಸರ್ಕಾರ ಸದನಕ್ಕೆ ಭರವಸೆ ನೀಡಬಲ್ಲುದೆ?

ಶ್ರೀ **ಮೊಹಮದ್ ಅಲಿ** – ಅಂಥ ಯಾವುದೇ ಭರವಸೆಯನ್ನು ನೀಡಲಾಗುವುದಿಲ್ಲ. ಅದು ಕಾರ್ಯಸಾಧ್ಯವೂ ಅಲ್ಲ.

ಶ್ರೀ **ಎಸ್.ಆರ್. ರಾಮಯ್ಯ** – ಈ ಹಣವನ್ನು ಬಡ್ಡಿ ಸಮೇತ ವಸೂಲ್ಮಾಡುತ್ತಿರೋ ಅಥವಾ ಇಲ್ಲಿ ತೋರಿಸಿರುವಷ್ಟನ್ನೇ ವಸೂಲ್ಮಾಡುತ್ತೀರೋ?

ಶ್ರೀ **ಮೊಹಮದ್ ಅಲಿ** – ಹೌದು, ಬಡ್ಡಿ ವಿಧಿಸುವುದಕ್ಕೆ ಕಾನೂನಿನಲ್ಲಿ ಅವಕಾಶವಿದೆ.

ಶ್ರೀ **ಎಸ್.ಆರ್. ರಾಮಯ್ಯ** – defaulter ಪೈಕಿ ಯಾರಾದರೂ ಚುನಾವಣೆಗಳಿಗೆ ನಿಂತುಕೊಂಡಿದ್ದರೆ?

**ಅಧ್ಯಕ್ಷರು** – ಅದು ಸರ್ಕಾರಕ್ಕೆ ಗೊತ್ತಾಗುತ್ತದೆ. ತಮಗೆ ಗೊತ್ತಿರಬಹುದು.

ಶ್ರೀ **ಕುಂದೂರು ರುದ್ರಪ್ಪ** – ಆಯಾಯಾ ಪಾರ್ಟಿಗಳಿಂದ ಆಯಾಯ ವರ್ಷವೇ ಹಣವನ್ನು ವಸೂಲ್ಮಾಡಿದ್ದರೆ ಇಷ್ಟು ಬಾಕಿಯಾಗುತ್ತಿರಲಿಲ್ಲವಲ್ಲವೇ?

**ಮಾನ್ಯ ಸಭಾಧ್ಯಕ್ಷರು** – ಅದು ತಮ್ಮ ಅಭಿಪ್ರಾಯ.

ಶ್ರೀ **ಕುಂದೂರು ರುದ್ರಪ್ಪ** – ಪ್ರತಿ ವರ್ಷವೂ ಸರಿಯಾಗಿ ವಸೂಲ್ಮಾಡದೆ ಬಿಟ್ಟಿದ್ದರಿಂದ ಇಷ್ಟು ಬಾಕಿ ಇದೆಯಲ್ಲವೆ?

ಶ್ರೀ **ಮೊಹಮದ್ ಅಲಿ** – ಇದು ಸುಸ್ಪಷ್ಟ. ಬಾಕಿ ವಸೂಲಿ ಮಾಡಲು ಪ್ರತಿ ವರ್ಷ ಪ್ರಯತ್ನಗಳನ್ನು ಮಾಡಲಾಗುತ್ತಿದೆ. ಆದರೆ ಗುತ್ತಿಗೆದಾರರು ಗುತ್ತಿಗೆ ಹಣವನ್ನು ಕಟ್ಟುತ್ತಿಲ್ಲ. ಹಾಗಾಗಿ ಅದು ಬಾಕಿ ಉಳಿದಿದೆ.

**ಶ್ರೀ ಕೆ.ಎಲ್.ನರಸಿಂಹಯ್ಯ** – ಯಾವ ಯಾವ ಜಿಲ್ಲೆಯವರು ಎಷ್ಟು ಎಷ್ಟು ಜನ ಇದ್ದಾರೆ ಎಂಬುದನ್ನು ಹೇಳಬಹುದೋ?

**ಶ್ರೀ ಮೊಹಮದ್ ಅಲಿ** – ಇದಕ್ಕೆ ತುಂಬಾ ವಿವರ ನೀಡಬೇಕಾಗುತ್ತದೆ ಸ್ವಾಮಿ.

**ಸನ್ಮಾನ್ಯ ಸಭಾಧ್ಯಕ್ಷರು** – ಹೆಸರುಗಳನ್ನು ತಿಳಿಸಲು ನಾನು ಅವಕಾಶ ನೀಡುವುದಿಲ್ಲ.

**ಶ್ರೀ ಜಿ. ದುಗ್ಗಪ್ಪ** – ಈ ಬಾಕಿಗಳ ವಸೂಲಿಗೆ ಸರ್ಕಾರ ಸಮಯವನ್ನೇನಾದರೂ ನಿಗದಿ ಮಾಡಿದೆಯೆ?

**ಶ್ರೀ ಮೊಹಮದ್ ಅಲಿ** – ಸಮಯವನ್ನು ನಿಗದಿ ಮಾಡುವುದು ಕಾರ್ಯಸಾಧ್ಯವಲ್ಲ.

**ಶ್ರೀ ಎ.ಬಿ.ಬದರಿ ನಾರಾಯಣ್** – ಈ ಹಣ ಎಷ್ಟು ವರ್ಷಗಳಿಂದ ಬಾಕಿ ಇದೆ.

**ಶ್ರೀ ಮೊಹಮದ್ ಅಲಿ** – ಸ್ವಾಮಿ, ನಾನೀಗಾಗಲೇ ಉತ್ತರ ಕೊಟ್ಟಿದ್ದೇನೆ.

**ಶ್ರೀ ಎ.ಬಿ.ಬದರಿ ನಾರಾಯಣ್** – ಇಷ್ಟು ದೀರ್ಘಕಾಲ ಅದು ಏಕೆ ಬಾಕಿ ಉಳಿದಿದೆ ಸ್ವಾಮಿ?

**ಶ್ರೀ ಮೊಹಮದ್ ಅಲಿ** – ನಾನೇನೂ ಹೇಳಲಾರೆ.

**ಶ್ರೀ ಅಣ್ಣಾರಾವ್ ಗಣಮುಖಿ** – ಬಾಕಿ ಕಟ್ಟದಿರುವವರಿಗೆ ಕಂತು ಸೌಲಭ್ಯ ಮಂಜೂರು ಮಾಡುವಾಗ, ಸರ್ಕಾರವು ತೂಗಿ ನೋಡಿರುವ ಪರಿಗಣನೆಗಳನ್ನು ನನಗೆ ತಿಳಿಸುವಿರಾ?

**ಶ್ರೀ ಮೊಹಮದ್ ಅಲಿ** – ಅದು ಆಯಾಯ ಪ್ರಕರಣಗಳನ್ನು ಅವಲಂಬಿಸಿರುತ್ತದೆ. ಮಾನ್ಯ ಸದಸ್ಯರು ನಿರ್ದಿಷ್ಟ ಪ್ರಕರಣದ ಬಗ್ಗೆ ಕೇಳಿದರೆ ವಿವರಗಳನ್ನು ನೀಡಲು ನನಗೆ ಸಾಧ್ಯವಾಗುತ್ತದೆ.

**ಶ್ರೀ ಸಿ. ಜೆ. ಮುಕ್ಕಣ್ಣಪ್ಪ** – ಈ ಬಾಕಿ ಕಟ್ಟದಿರುವವರು ಪೈಕಿ ಹೈದರಾಬಾದ್‌ನವರೆಷ್ಟು ? ಹಳೆ ಮೈಸೂರಿನವರೆಷ್ಟು ತಿಳಿಸುವಿರಾ?

**ಸನ್ಮಾನ್ಯ ಸಭಾಧ್ಯಕ್ಷರು** – ಸುಸ್ತಿದಾರರು ಹಳೆ ಮೈಸೂರಿನವರು.

**ಶ್ರೀ ಮೊಹಮದ್ ಅಲಿ** – ಅದು ಈ ಪ್ರಶ್ನೆಯಿಂದ ಉದ್ಭವಿಸುವುದಿಲ್ಲ.

**ಶ್ರೀ ವಿ.ಶ್ರೀನಿವಾಸಶೆಟ್ಟಿ** – ಕಾಂಗ್ರೆಸ್ ಪಕ್ಷದವರು ಎಷ್ಟು ಜನರಿದ್ದಾರೆ? (ನಗು) ಅಥವಾ ಕಾಂಗ್ರೆಸ್ ಪಕ್ಷಕ್ಕೆ ಸೇರಿದವರೆಷ್ಟು?

(ಉತ್ತರ ಇಲ್ಲ)

**ಸನ್ಮಾನ್ಯ ಸಭಾಧ್ಯಕ್ಷರು** – ಮಾಹಿತಿ ಲಭ್ಯವಿದ್ದರೆ ನೀಡಬಹುದು.

**ಶ್ರೀ ಮೊಹಮದ್ ಅಲಿ** – ನನಗೆ ದೊರೆತಿರುವ ಮಾಹಿತಿಯಂತೆ ಬಾಕಿ ಹಣದಲ್ಲಿ ಹೆಚ್ಚಿನ ಭಾಗವನ್ನು ವಿರೋಧ ಪಕ್ಷದವರೇ ಕಟ್ಟಬೇಕೆಂದೆನಿಸುತ್ತದೆ. (ಮತ್ತೆನಗು)

**ಒಬ್ಬ ಸದಸ್ಯ** – ಶ್ರೀ ಶ್ರೀನಿವಾಸ ಶೆಟ್ಟಿಯವರು ಪರೋಕ್ಷ ಸೂಚನೆ ನೀಡಿರುವುದರಿಂದಾಗಿ ಸಚಿವರು ಹಾಗೆ ಉತ್ತರಿಸಿದರು. ಅವರು ಪರೋಕ್ಷ ಸೂಚನೆ ನೀಡಿದರು, ಉತ್ತರ ಅವರನ್ನು ಮತ್ತು ವಿರೋಧ ಪಕ್ಷದ ಸದಸ್ಯರನ್ನು ಹಿಮ್ಮೆಟ್ಟುವಂತೆ ಮಾಡಿದೆ. ಯಾವುದೇ ಹೆಸರುಗಳನ್ನು ಹೇಳಲು ಅನುಮೋದಿಸಲಾಗುವುದಿಲ್ಲ.

**ಶ್ರೀ ವೈ. ವೀರಪ್ಪ** – ಪ್ರಸಕ್ತ ಸಾಲಿನಲ್ಲಿ ಕಂಟ್ರಾಕ್ಟರ ಪಟ್ಟಿಯಲ್ಲಿ ಎಷ್ಟು ಜನ ಡಿಫಾಲ್ಟರು ಇದ್ದಾರೆ?

**ಶ್ರೀ ಮೊಹಮದ್ ಅಲಿ** – ಆ ಮಾಹಿತಿ ಈ ಕ್ಷಣಕ್ಕೆ ಲಭ್ಯವಿಲ್ಲ.

**ಶ್ರೀ ಕೆ. ಕೆಂಚಪ್ಪ** – ವಿರೋಧ ಪಕ್ಷದ ಬಹಳ ಜನ ಇದ್ದಾರೆ ಎಂದು ಹೇಳಿದರು. ವಿರೋಧ ಪಕ್ಷಗಳ ಜನಗಳ ಪಟ್ಟಿ ಇದೆ ಎನು ಸ್ವಾಮಿ?

**ಶ್ರೀ ಮೊಹಮದ್ ಅಲಿ** – ನಾನು ಪಟ್ಟಿ ನೋಡಿಲ್ಲ ಸ್ವಾಮಿ. ಆದರೆ ಅದು ನಾನು ನೀಡಿದ ಮಾಹಿತಿ ಎಂದು ಮಾತ್ರ ಹೇಳಬಲ್ಲೆ.

**ಶ್ರೀ ಕೆ. ಕೆಂಚಪ್ಪ** – ವಿರೋಧ ಪಕ್ಷದ ಸದಸ್ಯರು ಡಿಫಾಲ್ಟರು ಆಗಿದ್ದಾರೆಂಬುದನ್ನು ಯಾವ ಆಧಾರದ ಮೇಲೆ ಹೇಳುತ್ತಿರಿ ಸ್ವಾಮಿ?

**ಅಧ್ಯಕ್ಷರು** – ವಿರೋಧ ಪಕ್ಷ ಎಂದರೆ ಪಿ.ಎಸ್.ಪಿ. ಪಾರ್ಟಿ ಆಗುವುದಿಲ್ಲ. ನೀವು ಹಾಗೆ ತಿಳಿದುಕೊಳ್ಳಬಾರದು. ಕಾಂಗ್ರೆಸ್ ಪಾರ್ಟಿಯವರು ಆಗಿಲ್ಲದವರು ವಿರೋಧಿ ಪಕ್ಷ ಎಂದು ಹೇಳಿದರು.

**ಶ್ರೀ ಕೆಂಚಪ್ಪ** – ಕಾಂಗ್ರೇಸ್ ಪಾರ್ಟಿಯವರು ಅಲ್ಲವಾದರೆ ವಿರೋಧ ಪಕ್ಷದವರು ಹೇಗೆ ಆಗುತ್ತಾರೆ?

**ಸನ್ಮಾನ್ಯ ಸಭಾಧ್ಯಕ್ಷರೆ** – "ವಿರೋಧ ಪಕ್ಷದವರು" ಎಂಬ ಶಬ್ದಗಳು ಕಾಂಗ್ರೇಸಿಗರಲ್ಲದ ಉಳಿದೆಲ್ಲರನ್ನೂ ಸೂಚಿಸುತ್ತೆ. ವಿಧಾನಮಂಡಲದ ವಿರೋಧ ಪಕ್ಷಗಳ ಬಗ್ಗೆ ಉಲ್ಲೇಖಿಸುವ ಅವಶ್ಯಕತೆ ಇಲ್ಲ. ವಿಧಾನ ಮಂಡಲದ ಪಕ್ಷಗಳೊದಿಗೆ ವಿರೋಧ ಪಕ್ಷಗಳನ್ನು ಬೆರಸಿ ಗೊಂದಲ ಉಂಟುಮಾಡುತ್ತಾ ಶ್ರೀ ಕೆಂಚಪ್ಪನವರು ಈ ತಪ್ಪನ್ನು ಮಾಡುತ್ತಿದ್ದಾರೆ.

**ಶ್ರೀ ಎ. ಬಿ.ನರಸಿಂಹೇಗೌಡ** – ಹೆಂಡ ಮತ್ತು ಸಾರಾಯಿ ಬಗ್ಗೆ ಬಾಕಿ ನಿಂತ ಪಟ್ಟಿಯನ್ನು ಈ ಸಭೆಯ ಮುಂದೆ ಇಡುತ್ತೀರಾ ಸ್ವಾಮಿ?

**ಅಧ್ಯಕ್ಷರು** – ಹೆಸರುಗಳನ್ನು ಕೊಡುವುದಿಲ್ಲ. ಸಂಖ್ಯೆಯನ್ನು ಕೊಡಬಹುದು. ಒಟ್ಟು ಹಣ ಎಷ್ಟು ಎಂಬುದನ್ನು ಕೊಟ್ಟಿದ್ದಾರೆ.

**ಶ್ರೀ ಎಂ. ರಾಮಪ್ಪ** – ಬೆಂಗಳೂರುನಗರದ ಬಗ್ಗೆ ಇರುವ ಬಾಕಿ (arrears) ಎಷ್ಟು ಸ್ವಾಮಿ?

**ಅಧ್ಯಕ್ಷರು** – ಬೆಂಗಳೂರು ಸಿಟಿ ಮತ್ತು ಜಿಲ್ಲೆಯ ಸಂಖ್ಯೆಯನ್ನು ಕೊಡಬಹುದು. ಒಟ್ಟು ಹಣ ಎಷ್ಟು ಎಂಬುದನ್ನು ಕೊಟ್ಟಿದ್ದಾರೆ.

**ಶ್ರೀ ಆರ್. ರಾಮಪ್ಪ:** ಬಾಕಿಗಳನ್ನು ವಸೂಲಿ ಮಾಡದಿರುವುದಕ್ಕೆ ಕೆಲವು ಪ್ರಭಾವಿ ಕಾಂಗ್ರೇಸ್ ನಾಯಕರು ಕಾರಣರಾಗಿದ್ದಾರೆಂಬುದು ವಾಸ್ತವ ಸಂಗತಿ

**ಶ್ರೀ ಮೊಹಮದ್ ಅಲಿ** – ಅದು ತಪ್ಪು ಹೇಳಿಕೆ ಸ್ವಾಮಿ

**ಶ್ರೀ ಟಿ. ತಾರೇಗೌಡ** – ಈ ಎಕ್ಸೈಜ್ ಕಂಟ್ರಾಕ್ಟರುಗಳು ಲಕ್ಷಾಧೀಶರು ಆಗಿಲ್ಲವೆ?

**ಅಧ್ಯಕ್ಷರು** – ಯಾರೇ ಇರಬಹುದು. ಈ ಪ್ರಶ್ನೆಯನ್ನು ಕೇಳಲಿಕ್ಕೆ ಬರುವುದಿಲ್ಲ. ಈ ಮಾಹಿತಿ ಯಾತಕ್ಕೆ ಬೇಕು?

**ಶ್ರೀ ಟಿ. ತಾರೇಗೌಡ** – ಯಾಕೆಂದರೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದನ್ನು ಮಧ್ಯಮ ವರ್ಗದವರು ಕೊಡುತ್ತಾರೆ; ಆದರೆ ಲಕ್ಷಾಧೀಶರಾದವರು ಕೊಡುವುದಿಲ್ಲ. ಆದುದರಿಂದ ಈ ಪ್ರಶ್ನೆಯನ್ನು ಕೇಳಿದೆ.

**ಅಧ್ಯಕ್ಷರು** – ಹಾಗೆ ಪ್ರಶ್ನೆ ಕೇಳುವುದರ ಬದಲು ಸರ್ಕಾರಕ್ಕೆ ಬಾಕಿ ಸಲ್ಲಿಸತಕ್ಕ ಎಕ್ಸೈಜ್ ಕಂಟ್ರಾಕ್ಟರುಗಳಲ್ಲಿ ಲಕ್ಷಾಧೀಶ್ವರರು ಇದ್ದಾರೇನು ಎಂದು ಕೇಳಬಹುದು.

**ಶ್ರೀ ಟಿ. ತಾರೇಗೌಡ** – ಅದೇ ಪ್ರಶ್ನೆಯನ್ನು ಕೇಳುತ್ತೇನೆ ಸ್ವಾಮಿ.

**ಅಧ್ಯಕ್ಷರು** – ನಾನು ನಿಮಗೆ ಸಹಾಯ ಮಾಡುತ್ತೇನೆ. ಭಾರಿ ಆಸ್ತಿಗಳನ್ನು ಹೊಂದಿರುವಂಥ ವ್ಯಕ್ತಿಗಳೇ ಬಾಕಿ ಉಳಿಸಿಕೊಂಡಿದ್ದಾರೆಯೇ ಎಂಬುದನ್ನು ಮಾನ್ಯ ಸದಸ್ಯರು ತಿಳಿಯಬಯಸುತ್ತಾರೆ.

**ಶ್ರೀ ಮೊಹಮದ್ ಅಲಿ** – ಕೆಲವರಿರಬಹುದು

**ಶ್ರೀ ಯು. ಎಂ. ಮಾದಪ್ಪ**– ಸೆಕ್ಯುರಿಟಿ ಅಮೌಂಟು ಇದ್ದ ಮೇಲೆ ಕಂಟ್ರಾಕ್ಟರಿಂದ ವಸೂಲು ಮಾಡತಕ್ಕ ದುಡ್ಡು ಸೆಕ್ಯೂರಿಟಿ ಮೀರಿದ ಮೇಲೆ ಕ್ರಮ ತೆಗೆದುಕೊಳ್ಳತಕ್ಕದ್ದು ಸರ್ಕಾರದ ಕರ್ತವ್ಯ ಅಲ್ಲವೇ?

**ಅಧ್ಯಕ್ಷರು** – ಭದ್ರತೆ ಕೊನೆಗೊಳ್ಳುವುದಕ್ಕೆ ಮೊದಲೇ ಹಣ ವಸೂಲಿ ಮಾಡುವುದು ಅಧಿಕಾರಿಗಳ ಕರ್ತವ್ಯವಲ್ಲವೇ ಎಂಬುದನ್ನು ಅವರು ತಿಳಿಯಬಯಸುತ್ತಾರೆ.

**ಶ್ರೀ ಮೊಹಮದ್ ಅಲಿ** – ಭದ್ರತೆ ಇಂದಿಗೂ ಅಖಂಡವಾಗಿದೆ ಭದ್ರತೆ ಕೊನೆಗೊಳ್ಳುವ ಪ್ರಶ್ನೆಯೇ ಎಲ್ಲ.

**ಶ್ರೀ ಯು. ಎಂ. ಮಾದಪ್ಪ:** ಬಾಕಿ ಹಣವು ಭದ್ರತೆಯ ಮಿತಿಯನ್ನು ಮೀರುತ್ತದೆಯೇ ಅಥವಾ ಇಲ್ಲವೇ?

**ಶ್ರೀ ಮೊಹಮದ್ ಅಲಿ** – ಅದು ಮೀರುವುದಿಲ್ಲ

**ಮಧ್ಯಾಹ್ನ 1.30 ಗಂಟೆ**

**ಶ್ರೀ ಜಿ.ಬಿ. ಶಂಕರ ರಾವ್** – ಈ ಬಾಕಿಗಳನ್ನು ವಸೂಲಿಮಾಡಲು ಸರ್ಕಾರ ಯಾವುದಾದರೂ ಕಠಿಣ ಕ್ರಮಗಳನ್ನು ಅಳವಡಿಸಿಕೊಳ್ಳಲು ಉದ್ದೇಶಿಸಿದೆಯೇ? ಹಾಗಿದ್ದರೆ ಆ ಕ್ರಮಗಳು ಯಾವುವು?

**ಶ್ರೀ ಮೊಹಮದ್ ಅಲಿ** – ಬಾಕಿಗಳನ್ನು ವಸೂಲಿ ಮಾಡಲು ಎಲ್ಲಾ ಪ್ರಾಮಾಣಿಕ ಪ್ರಯತ್ನಗಳನ್ನು ಮಾಡಲಾಗುತ್ತದೆ.

**ಶ್ರೀ ಎ. ಭೀಮಪ್ಪ ನಾಯಕ:** ಬಾಕಿಯಿರುವ ಹಣವು ಭದ್ರತೆಯನ್ನು ಮೀರುವುದಿಲ್ಲವೆಂದು ಮಾನ್ಯ ಸಚಿವರು ತಿಳಿಸಿದರು, ಹಾಗಿದ್ದ ಮೇಲೆ ವಸೂಲಿಯ ಪ್ರಶ್ನೆ ಎಲ್ಲಿದೆ? ಅವರ ಮಾತಿನ ಅರ್ಥ ಬಾಕಿ ಹಣ ಭದ್ರತೆಯನ್ನು ಮೀರುತ್ತದೆ ಎಂದಾಗುತ್ತದೆ ; ನಾವು ಹಾಗೆ ಭಾವಿಸಬೇಕು.

**ಸನ್ಮಾನ್ಯ ಸಭಾಧ್ಯಕ್ಷರು:** ಅಲ್ಲ ಅಲ್ಲ

**ಶ್ರೀ ಕೆ. ಎಲ್.ನರಸಿಂಹಯ್ಯ** – ಬಾಕಿಯನ್ನು ವಸೂಲು ಮಾಡುವುದರಲ್ಲಿ ಏನಾದರೂ ಲಿಮಿಟೇಷನ್ ಇರಬೇಕಲ್ಲವೇ

**ಶ್ರೀ ಮೊಹಮದ್ ಅಲಿ** – ಸರ್ಕಾರ 60 ವರ್ಷ ಅವಧಿಯೊಳಗೆ ಬಾಕಿಗಳನ್ನು ವಸೂಲಿ ಮಾಡಬಹುದು.

**ಶ್ರೀ ಜಿ.ಇ. ಹೂವರ್** : ಬಾಕಿ ಉಳಿಸಿಕೊಂಡಿರುವ ಯಾರೇ ಕಂಟ್ರಾಕ್ಟರುಗಳು 1957–58ನೇ ಸಾಲಿಗೆ ಗುತ್ತಿಗೆ ಪಡೆದಿದ್ದಾರೆಯೇ?

**ಶ್ರೀ ಮೊಹಮದ್ ಅಲಿ** – – ಆ ಪ್ರಶ್ನೆಗೆ ಉತ್ತರಿಸಲಾಗಿದೆ.

**ಶ್ರೀ ಎಚ್. ಕೆ. ಸಿದ್ದಯ್ಯ** – ಇಷ್ಟು ಭಾರೀ ಹಣವನ್ನು ಕಂಟ್ರಾಕ್ಟರುದಾರನ ಮೇಲೆಯೇ ಬಿಟ್ಟುಬಿಟ್ಟಿದ್ದೀರಿ ಅದಕ್ಕೆ ಏನಾದರೂ ಆಧಾರ ಮಾಡಿದಿಕೊಂಡಿದ್ದೀರೋ

**ಅಧ್ಯಕ್ಷರು** – ಅದು ಅಭಿಪ್ರಾಯದ ಮಾತು.

**ಶ್ರೀ ಮೊಹಮದ್ ಅಲಿ** – ಆ ಪ್ರಶ್ನೆಗೆ ಉತ್ತರಿಸಲಾಗಿದೆ.

**ಶ್ರೀ ಎಂ. ಲಿಂಗೇಗೌಡ** – ಬಾಕಿ ವಸೂಲಿಗಾಗಿ ಅಧಿಕಾರಿಗಳು ಬಹಳ ಸ್ಟ್ರಿಕ್ಟಾಗಿ ಕಾರ್ಯಕ್ರಮ ತೆಗೆದುಕೊಂಡಾಗ ಸರ್ಕಾರದವರು ಸ್ಟೇ ಆರ್ಡರದ ಕೊಟ್ಟಿರುವುದು ನಿಜವೇ?

**ಶ್ರೀ ಮೊಹಮದ್ ಅಲಿ** – ನೋಟೀಸ್

**ಶ್ರೀ ಎಂ. ಲಿಂಗೇಗೌಡ** – ಸರ್ಕಾರದವರು ಒಂದು ದಾಕ್ಷಿಣ್ಯಕ್ಕೋಸ್ಕರ ಸ್ಟೇ ಆರ್ಡರ್ ಇಷ್ಯೂ ಮಾಡಿರುವುದರಿಂದ ಇಷ್ಟು ಬಾಕಿ ವಸೂಲಾಗದೆ ನಿಂತಿದೆಯೆಂದು ಅರ್ಥವಾಗುತ್ತದೆ ಅಲ್ಲವೆ?

**ಶ್ರೀ ಮೊಹಮದ್ ಅಲಿ** – ಇಲ್ಲ

**ಶ್ರೀ. ವಿ. ಎಸ್. ಪಾಟೀಲ್:** ಸಮಯ ಮಿತಿ 60 ವರ್ಷ ಎಂದು ಮಾನ್ಯ ಸಚಿವರು ಈಗಷ್ಟೇ ಹೇಳಿದರು. ಬಾಕಿಗಳನ್ನು ವಸೂಲಿ ಮಾಡದೆ ಬಿಟ್ಟುಕೊಂಡು ಬರುತ್ತಿರುವುದಕ್ಕೆ ಅದು ಕಾರಣವೆ?

**ಶ್ರೀ ಮೊಹಮದ್ ಅಲಿ** – ಅದು ಕಾರಣವಲ್ಲ

**ಶ್ರೀ ತಾರೇಗೌಡ** – ಎಕ್ಸೈಜು ಕಂಟ್ರಾಕ್ಟರುದಾರರು ಹೊಸ ಸರ್ಕಾರದ ರಚನೆಗೂ ಮತ್ತು ಹಿಂದಿನ ಸರ್ಕಾರವನ್ನು ಮನೆಗೆ ಕಳುಹಿಸುವುದಕ್ಕೂ ಕಾರಣಕರ್ತರು ಅಲ್ಲವೆ?

**ಮಾನ್ಯ ಸಭಾಧ್ಯಕ್ಷರು** : ಆರ್ಡರ್, ಆರ್ಡರ್

**ಶ್ರೀ ಅಣ್ಣಾರಾವ್ ಗಣಮುಖಿ:** ಬಾಕಿ ಕಟ್ಟಬೇಕಾಗಿರುವ, ಆದರೆ ಕಟ್ಟುವದರಿಂದ ಈಗಲೂ ನುಣುಚಿಕೊಳ್ಳುತ್ತಿರುವ ಬಾಕಿ ಕಟ್ಟುವವರ ಪಟ್ಟಿಯನ್ನು ಸರ್ಕಾರ ಸಿದ್ಧಪಡಿಸುತ್ತದೆಯೇ ತಿಳಿಸಿ

**ಶ್ರೀ ಮೊಹಮದ್ ಅಲಿ** – ಬಾಕಿ ಕಟ್ಟದವರ ಪಟ್ಟಿ ಸರ್ಕಾರದ ಬಳಿ ಇದೆ.

**ಶ್ರೀ ಅಣ್ಣಾರಾವ್ ಗಣಮುಖಿ:** ಬಾಕಿ ಹಣ ಕಟ್ಟಲು ಹಣಕಾಸು ಅನುಕೂಲ ಹೊಂದಿರುವ ಆದರೆ ಕಟ್ಟದೆನುಣುಚಿಕೊಳ್ಳುತ್ತಿರುವ ಬಾಕಿ ಕಟ್ಟದವರ ಪಟ್ಟಿ ಇದೆಯೆ?

**ಶ್ರೀ ಮೊಹಮದ್ ಅಲಿ** – ಪ್ರತಿಯೊಬ್ಬರಿಗೂ ಸ್ವಲ್ಪ ಆಸ್ತಿ ಇದ್ದೇ ಇರುತ್ತೆ. ಬಾಕಿ ಕಟ್ಟದವರು ಸಹ ಆಸ್ತಿ ಹೊಂದಿರಬಹುದು. ಬಾಕಿ ವಸೂಲಿ ಮಾಡಲು ಸರ್ಕಾರ ಎಲ್ಲಾ ಕ್ರಮ ತಗೆದುಕೊಳ್ಳುತ್ತಿದೆ.

**ಶ್ರೀ ಅಣ್ಣಾರಾವ್ ಗಣಮುಖಿ:** ನಾನು ವಿಶೇಷವಾಗಿ ಈ ಪ್ರಶ್ನೆ ಕೇಳಿದೆ. ಬಾಕಿ ಕಟ್ಟಲು ಹಣಕಾಸು ಅನುಕೂಲ ಹೊಂದಿರುವ ಆದರೆ ಕಟ್ಟದೆ ನುಣುಚಿಕೊಳ್ಳುತ್ತಿರುವಂಥವರ ಪಟ್ಟಿಯನ್ನು ಸರ್ಕಾರ ಸಿದ್ಧಪಡಿಸಿದೆಯೇ?

**ಶ್ರೀ ಮೊಹಮದ್ ಅಲಿ** – ಬಾಕಿ ಕಟ್ಟದವರು ಬಾಕಿ ಕಟ್ಟುವ ಸ್ಥಿತಿಯಲ್ಲಿರಲಿ, ಇಲ್ಲದಿರಲಿ ಅವರ ಪಟ್ಟಿಯನ್ನು ಸಿದ್ಧಪಡಿಸುವ ವಿಷಯ ಪರಿಗಣನೆಯ ವಿಷಯವಲ್ಲ. ಅವರು ಸುಸ್ಥಿದಾರರಾದಾಗ ಅವರ ಪಟ್ಟಿಯನ್ನು ಸಿದ್ಧಪಡಿಸಲಾಗುತ್ತದೆ ಮತ್ತು ಅವರಿಂದ ಬಾಕಿಯನ್ನು ವಸೂಲಿ ಮಾಡಲಾಗುತ್ತದೆ.

**ಶ್ರೀ ಟಿ. ಎಸ್. ಮೂಡಲಗಿರಿಗೌಡ :** ಎಕ್ಸೈಜು ಬಾಬಿನಲ್ಲಿ ಈಗ ಉಳಿದಿರುವ ಭಾಗವನ್ನು ಚೆನ್ನಾಗಿ ವಸೂಲು ಮಾಡುವುದಕ್ಕೆ ಏನು ವ್ಯವಸ್ಥೆಯನ್ನು ಮಾಡಿದ್ದೀರಿ?

**ಅಧ್ಯಕ್ಷರು** – ಅದಕ್ಕೆ ಆಗಲೇ ಉತ್ತರ ಕೊಟ್ಟಿದ್ದಾರೆ

**ಶ್ರೀ ಟಿ. ಎಸ್. ಮೂಡಲಗಿರಿಗೌಡ** – ಇನ್ನೆಷ್ಟು ದಿವಸಗಳಲ್ಲಿ ಬಾಕಿಯನ್ನು ವಸೂಲು ಮಾಡುವುದಕ್ಕೆ ಏರ್ಪಾಡು ಮಾಡುತ್ತೀರಿ?

**ಅಧ್ಯಕ್ಷರು** – ಅದಕ್ಕೂ ಉತ್ತರ ಕೊಟ್ಟಿದ್ದಾರೆ

**ಶ್ರೀ ಜಿ. ಶಿವಪ್ಪ** – ಸರ್ವಾನುಮತದಿಂದ ಎಲ್ಲರ ಅಭಿಪ್ರಾಯವನ್ನು ತೆಗೆದುಕೊಂಡ ಮೇಲೆ ಆದಷ್ಟು ಬೇಗ ಬಾಕಿಯನ್ನು ವಸೂಲು ಮಾಡಲು ನಿರ್ದಿಷ್ಟವಾದ ಕಾರ್ಯಕ್ರಮವನ್ನೇನಾದರೂ ತೆಗೆದುಕೊಳ್ಳುತ್ತೀರಾ?

**ಶ್ರೀ ಮೊಹಮದ್ ಅಲಿ** – ಕಾನೂನಿನಲ್ಲಿ ಅವಕಾಶ ಕಲ್ಪಿಸಿರುವ ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳಲಾಗುವುದು.

# ರಾಜ್ಯದಲ್ಲಿನ ಕೈಮಗ್ಗಗಳು

**ಶ್ರೀ ಎಂ. ಎಸ್. ಪಠಾಣ್ (ರಾಮದುರ್ಗ)** – ಸರ್ಕಾರದವರು ದಯವಿಟ್ಟು ಇದನ್ನು ತಿಳಿಸುವರೆ?

ಎ. ವಿಶಾಲ ಮೈಸೂರು ರಾಜ್ಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕೈಮಗ್ಗಗಳ ಸಂಖ್ಯೆ

ಬಿ. ಅವು ಹೇರಳವಾಗಿ ಇರುವಂಥ ಸ್ಥಳಗಳಲ್ಲಿ ಅವುಗಳಿಗೆ ಉತ್ತೇಜನ ನೀಡಲು ಮತ್ತು ಅವುಗಳನ್ನು ಅಭಿವೃದ್ಧಿಪಡಿಸಲು ಕೈಗೊಂಡಿರುವ ಕ್ರಮಗಳು

**ಶ್ರೀ ಮೊಹಮದ್ ಅಲಿ – (ಅಬಕಾರಿ ಮತ್ತು ಗ್ರಾಮೀಣ ಕೈಗಾರಿಕಾ ಸಚಿವರು)**

ಎ) ಒಟ್ಟು 1,66,534 ಮಗ್ಗಗಳ ಪೈಕಿ 1,49,877 ಕ್ರಿಯಾಶೀಲವಾಗಿವೆ.

ಬಿ) ಸರ್ಕಾರ ಕೈಗೊಂಡಿರುವ ಕ್ರಮಗಳು ಇಂತಿವೆ

1) ಸಹಕಾರ ಸಂಘಗಳ ಸದಸ್ಯರಾಗಿರದ ನೇಕಾರರಿಗೆ ಸಹಕಾರ ಸಂಘಗಳ ಸದಸ್ಯರಾಗಲು ಷೇರು ಬಂಡವಾಳಕ್ಕಾಗಿ ಸಾಲ ಸೌಲಭ್ಯವನ್ನು ಒದಗಿಸಲಾಗಿದೆ.

2) ಉತ್ಪಾದನೆಯನ್ನು ಹೆಚ್ಚಿಸಲು ನೇಕಾರ ಸಹಕಾರ ಸಂಘಗಳಿಗೆ ಸಾಲಗಳನ್ನು ನೀಡಲಾಗಿದೆ

(3) ಕೈಮಗ್ಗ ಬಟ್ಟೆಗಳ ಮಾರಾಟಕ್ಕೆ ಮಾರಾಟ ಮಳಿಗೆಗಳನ್ನು ಮತ್ತು ಸಂಚಾರಿ ವಾಹನಗಳನ್ನು ವ್ಯವಸ್ಥೆ ಮಾಡಲಾಗಿದೆ.

(4) ಮಾರಾಟಕ್ಕೆ ಉತ್ತೇಜನ ನೀಡಲು ಮಾರಾಟದ ಮೇಲೆ ಸೋಡಿ ನೀಡಲಾಗಿದೆ.

(5) ನೇಯ್ದ ಬಟ್ಟೆಗಳ ಗುಣಮಟ್ಟ ಉತ್ತಮಪಡಿಸಲು ಸುಧಾರಿತ ಉಪಕರಣಗಳನ್ನು ಪೂರೈಸಲಾಗಿದೆ.

# ರಾಜ್ಯದಲ್ಲಿ ಪೂರ್ಣಪಾನ ನಿಷೇಧ ಜಾರಿ

**ಶ್ರೀ ಕೆ. ಕೆಂಚಪ್ಪ ಹಿರಿಯೂರು)** ಸರ್ಕಾರದವರು ದಯವಿಟ್ಟು ಇದನ್ನು ತಿಳಿಸುವರೆ?

ಎ) ಇಡೀ ಮೈಸೂರು ರಾಜ್ಯದಲ್ಲಿ ಎಲ್ಲಾ ಮಾದಕವಸ್ತುಗಳ ಬಳಕೆ ಕುರಿತಂತೆ ನಿರೋಧ ಜಾರಿಗೊಳಿಸಲು ಸರ್ಕಾರ ಉದ್ದೇಶಿಸಿದೆಯೆ?

ಬಿ) ಪಾನ ನಿರೋಧವನ್ನು ಜಾರಿಗೊಳಿಸಿದ ದಿನಾಂಕದಿಂದ ಐದು ವರ್ಷಗಳ ಅವಧಿಯ ಒಳಗೆ ಇಡೀ ಮೈಸೂರು ರಾಜ್ಯದಲ್ಲಿ ಜಾರಿಗೊಳಿಸುವ ಭರವಸೆಯನ್ನು ಮೈಸೂರು ರಾಜ್ಯದ ಜನತೆಗೆ ನೀಡಿದ್ದುದು ನಿಜವೆ?

ಸಿ) ಹಾಗಿದ್ದರೆ, ಆ ಭರವಸೆಯನ್ನು ಈತನಕ ಈಡೇರಿಸದಿರುವುದಕ್ಕೆ ಕಾರಣವೇನು?

**ಉತ್ತರ: ಶ್ರೀ ಮೊಹಮದ್ ಅಲಿ (ಅಬಕಾರಿ ಮತ್ತು ಗ್ರಾಮೀಣ ಕೈಗಾರಿಕಾ ಸಚಿವರು) –**

ಎ) ಈ ವಿಷಯ ಪರ್ಯಾಲೋಚನೆಯಲ್ಲಿದೆ.

ಬಿ) ಅಂಥ ಯಾವುದೇ ಸ್ಪಷ್ಟ ಭರವಸೆಯನ್ನು ನೀಡಿಲ್ಲ. ಪ್ರತಿವರ್ಷ ಶೇ.20ರಷ್ಟು ಸೇಂದಿ, ಸಾರಾಯಿ ಅಂಗಡಿಗಳನ್ನು ಕಡಿಮೆ ಮಾಡುತ್ತಾ ಹೋಗುವ ಮೂಲಕ ಐದು ವರ್ಷಗಳ ಅವಧಿಯಲ್ಲಿ ಪೂರ್ಣಪಾನ ನಿರೋಧವನ್ನು ಸಾಧಿಸುವ ಒಂದು ನೀತಿಯನ್ನು ರಾಜ್ಯದಲ್ಲಿ ಅಳವಡಿಸಿಕೊಳ್ಳುವುದಕ್ಕಾಗಿ ಪಾನ ನಿರೋಧ ವಿಚಾರಣಾ ಸಮಿತಿಯು ಮಾಡಿದ ಶಿಫಾರಸುಗಳನ್ನು ಸರ್ಕಾರ 1947ರ ಜೂನ್‌ನಲ್ಲಿ ಅಂಗೀಕರಿಸಿದೆ. 1948ರ ಜುಲೈ 1ರಿಂದ ಜಾರಿಗೆ ಬರುವಂತೆ ಚಿತ್ರದುರ್ಗ, ತುಮಕೂರು ಮತ್ತು ಕೋಲಾರ ಜಿಲ್ಲೆಗಳಲ್ಲಿ ಎಲ್ಲಾ ಸೇಂದಿ, ಸಾರಾಯಿ ಅಂಗಡಿಗಳನ್ನು ಮುಚ್ಚುವಂತೆ 1948ರಲ್ಲಿ ಸರ್ಕಾರ ನಿರ್ದೇಶಿಸಿದಾಗ ಈ ನೀತಿಯನ್ನು ಪರಿಷ್ಕರಿಸಬೇಕಾಯಿತು. 1949ರ ಜುಲೈ 1ರಿಂದ ಜಾರಿಗೆ ಬರುವಂತೆ ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಗಳಿಗೂ ಪೂರ್ಣ ಪಾನ ನಿರೋಧವನ್ನು ವಿಸ್ತರಿಸಲಾಯಿತು. 1951 ರ ತನಕ ಪಾನ ನಿರೋಧದ ಪ್ರದೇಶವನ್ನು ಮತ್ತಷ್ಟು ವಿಸ್ತರಿಸಲಿಲ್ಲ. 1951 ರ ಜುಲೈ 1 ರಿಂದ ಹಾಸನ ಜಿಲ್ಲೆಯ ಬೇಲೂರು ಮತ್ತು ಸಕಲೇಶಪುರ ತಾಲೂಕುಗಳನ್ನು ಪೂರ್ಣ ಪಾನನಿರೋಧದ ಪ್ರದೇಶಗಳನ್ನಾಗಿಸಲಾಯಿತು. 1954ರ ತನಕ ಇದೇ ಸ್ಥಿತಿ ಇತ್ತು. ಆಗ ಹಾಸನ ಜಿಲ್ಲೆಯ ಅರಕಲಗೂಡು ಮತ್ತು ಆಲೂರು ತಾಲ್ಲೂಕುಗಳನ್ನು ಪೂರ್ಣ ಪಾನ ನಿರೋದಿತ ಪ್ರದೇಶಗಳನ್ನಾಗಿಸಲಾಯಿತು. ರಾಜ್ಯವ್ಯಾಪಿ ಪಾನನಿರೋಧ ಮಾಡುವುದರಿಂದ ಎರಡನೇ ಪಂಚವಾರ್ಷಿಕ ಯೋಜನೆಗಾಗಿ ಪಡೆಯಲುದ್ದೇಶಿಸಿದ ಸಂಪನ್ಮೂಲಗಳು ಗಂಭೀರ ಪ್ರಮಾಣದಲ್ಲಿ ಕುಗ್ಗುವುದರಿಂದ ಸರ್ಕಾರ ಈ ಬಗ್ಗೆ ನಿಧಾನವಾಗಿ ಮುಂದುವರೆಯುವುದು ಮತ್ತು ಪಾನ ನಿರೋಧವನ್ನು ಹಂತಹಂತವಾಗಿ ಜಾರಿಗೊಳಿಸುವುದು ಅನಿವಾರ್ಯವಾಗಿದೆ.

(ಸಿ) ಮೇಲಿನ (ಬಿ) ಬಾಬಿಗೆ ಉತ್ತರ ನೀಡಿರುವುದರಿಂದ ಇದು ಉದ್ಭವಿಸುವುದಿಲ್ಲ.

**ಶ್ರೀ ಕೆ. ಕೆಂಚಪ್ಪ** – 1947ನೆಯ ಇಸವಿಯಲ್ಲಿ ಪ್ರೋಹಿಬಿಷನ್ ಎನ್ಕ್ವೈರಿ ಕಮಿಟಿಯವರು ಮಾಡಿರುವ ಸಲಹೆಯನ್ನು ಒಪ್ಪಿಕೊಂಡು ಐದು ವರ್ಷಗಳಲ್ಲಿ ಕುಡಿತವನ್ನು ನಿಲ್ಲಿಸುತ್ತೇವೆಂದು ಹೇಳಿತ್ತು ಎಂದು ಒಂದು ಪ್ರಶ್ನೆಗೆ ಉತ್ತರಕೊಟ್ಟು, ಇನ್ನೊಂದು ಪ್ರಶ್ನೆಗೆ ಉತ್ತರ ಕೊಡುತ್ತಾ ಅಂಥ categorical assurance ಯಾವುದೂ ಕೊಟ್ಟಿಲ್ಲವೆಂದು ಹೇಳಿದ್ದೀರಿ. ಅಂದರೆ ಒಪ್ಪಿಕೊಂಡಿದ್ದೇವೆ ಎನ್ನುವುದೇ ಬೇರೆ ಅಭಿಪ್ರಾಯವೇ ಅಷ್ಯೂರನ್ಸ್ ಕೊಟ್ಟಿಲ್ಲವೆನ್ನುವುದೇ ಬೇರೆ ಅಭಿಪ್ರಾಯವೇ?

**ಶ್ರೀ ಮೊಹಮದ್ ಅಲಿ** – ರಾಜ್ಯದಲ್ಲಿ ಪೂರ್ಣ ನಿರೋಧ ಜಾರಿಗೊಳಿಸಲು ಸರ್ಕಾರ ಬದ್ಧವಾಗಿದೆ. ಆದರೆ ರಾಜ್ಯದ ಪುನರ್ವಿಂಗಡಣೆಯ ಪರಿಣಾಮವಾಗಿ ಹೊಸ ರಾಜ್ಯಕ್ಕೆ ವೆಬ್ ಪ್ರದೇಶಗಳು ಸೇರ್ಪಡೆಯಾದವು. ಆದ್ದರಿಂದ ರಾಜ್ಯದಲ್ಲಿ ಪೂರ್ಣ ಪಾನನಿರೋಧ ಜಾರಿಗೊಳಿಸುವ ವಿಷಯವನ್ನು ಪರಿಗಣಿಸಲಾಗುತ್ತಿದ್ದು, ಸರ್ಕಾರ ಈ ನಿಟ್ಟಿನಲ್ಲಿ ಯೋಚಿಸುತ್ತದೆ.

ಮಧ್ಯಾಹ್ನ **1.30** ಗಂಟೆ

**ಸನ್ಮಾನ್ಯ ಸಭಾಧ್ಯಕ್ಷರು**–ನನಗೊಂದು ಸಂಶಯ ಇದೆ. ಪ್ರಶ್ನೆ ಇಡೀ ಮೈಸೂರು ರಾಜ್ಯಕ್ಕೆ ಸಂಬಂಧಪಟ್ಟರೆ ಉತ್ತರ ಹಳೇ ಮೈಸೂರು ರಾಜ್ಯಕ್ಕೆ ಸಂಬಂಧಪಡುತ್ತದೆ. ಹೈದರಾಬಾದ್ – ಕರ್ನಾಟಕ ಪ್ರದೇಶದಲ್ಲಿ ಪಾನ ನಿರೋಧ ಜಾರಿಗೊಳಿಸುವ ಉದ್ದೇಶ ಸರ್ಕಾರಕ್ಕಿದೆಯೇ ಎಂಬುದು ನನಗೆ ಅರ್ಥ ವಾಗಿದೆಯೇ?

**ಶ್ರೀ ಮೊಹಮದ್ ಅಲಿ** – ಈ ರಾಜ್ಯದಾದ್ಯಂತ ಪಾನ ನಿರೋಧ ಜಾರಿಗೊಳಿಸುವ ನೀತಿಗೆ ಸರ್ಕಾರ ಬದ್ಧವಾಗಿದೆ. ಇದು ಸಂವಿಧಾನದ ನಿರ್ದೇಶಕ ತತ್ವವೂ ಹೌದು.

**ಸನ್ಮಾನ್ಯ ಸಭಾಧ್ಯಕ್ಷರು:** ಉತ್ತರದಲ್ಲಿ ಅದನ್ನು ಹೇಳಿಲ್ಲ. ನೀವು ಉತ್ತರದಲ್ಲಿ ಹಳೆಯ ಮೈಸೂರು ರಾಜ್ಯವನ್ನಷ್ಟೇ ಉಲ್ಲೇಖಿಸಿದ್ದೀರಿ. ಹೈದರಾಬಾದ್ – ಕರ್ನಾಟಕ ಪ್ರದೇಶವನ್ನು ಉಲ್ಲೇಖಿಸಿಲ್ಲ. ನಾನು ಇದನ್ನು ಒತ್ತಿಹೇಳುತ್ತಿದ್ದೇನೆ. ಹಾಗಾಗಿ ಅಗತ್ಯ ತಿದ್ದುಪಾಟನ್ನು ಮಾಡಿಕೊಳ್ಳಬಹುದು.

**ಶ್ರೀ ಕೆ. ಕೆಂಚಪ್ಪ:** ಐದು ವರ್ಷಗಳ ಅವಧಿಯೊಳಗೆ ಪಾನ ನಿರೋಧ ಜಾರಿಗೊಳಿಸುವುದಾಗಿ ಸರ್ಕಾರ ಸ್ಪಷ್ಟ ಭರವಸೆಯನ್ನು ನೀಡಿದೆಯೆ ತಿಳಿಸುತ್ತೀರಾ?

**ಶ್ರೀ ಮೊಹಮದ್ ಅಲಿ** – ಐದು ವರ್ಷಗಳೊಳಗಲ್ಲ. ಇದು ಹೊಸ ಮೈಸೂರು ರಾಜ್ಯ ಆ ಅಶ್ವಾಸನೆ ಹಳೆಯ ಮೈಸೂರು ರಾಜ್ಯಕ್ಕೆ ಸಂಬಂಧಪಡುತ್ತದೆಂದೆನಿಸುತ್ತದೆ. ಆದರೂ ರಾಜ್ಯದಲ್ಲಿ ಪೂರ್ಣ ಪಾನ ನಿರೋಧವನ್ನು ಜಾರಿಗೊಳಿಸುವುದಕ್ಕೆ ಸಮಯ ಮಿತಿಯನ್ನು ನಿಗದಿಪಡಿಸಿಲ್ಲ.

**ಶ್ರೀ ಕೆಂಚಪ್ಪ:** ಐದು ವರ್ಷದ ಅವಧಿಯಲ್ಲಿ ಪೂರ್ಣ ಪಾನ ನಿರೋಧ ಸಾಧಿಸುವ ಬಗ್ಗೆ ಭರವಸೆಯ ಭಾಗವನ್ನು ನೀವೇಕೆ ಅನುಷ್ಠಾನಗೊಳಿಸಿಲ್ಲ. ?

**ಸನ್ಮಾನ್ಯ ಸಭಾಧ್ಯಕ್ಷರು** : ಉತ್ತರ ಕೊಟ್ಟಿದೆ. 1948 ರಲ್ಲಿ ಈ ನೀತಿಯನ್ನು ಪರಿಷ್ಕರಿಸಬೇಕಾಯಿತು ಎಂದು ಉತ್ತರದಲ್ಲಿ ಹೇಳಿದ್ದಾರೆ.

**ಶ್ರೀ ಕೆ ಕೆಂಚಪ್ಪ** – 1948ನೆಯ ಇಸವಿಯಲ್ಲಿ ಅದು ರಿವೈಸ್ ಆಗಿದೆ?

**ಶ್ರೀ ಮೊಹಮದ್ ಅಲಿ** : ಅದು ಉತ್ತರದಲ್ಲಿದೆ.

**ಶ್ರೀ ಕೆ. ಕೆಂಚಪ್ಪ**: 1947 ಇಸವಿಯಲ್ಲಿ ಕೊಟ್ಟಂಥ ಅಶ್ವಾಸನೆಯನ್ನು Operate ಮಾಡುವುದಿಲ್ಲ ಎಂದು ತೀರ್ಮಾನ ಮಾಡಿದ್ದೀರಾ?

**ಅಧ್ಯಕ್ಷರು** : ಪ್ರಶ್ನೆ ಕೇಳಿ, ಅವರು ಏನು ಹೇಳುತ್ತಾರೆಯೋ ನೋಡೋಣ

**ಶ್ರೀ ಎ. ಭೀಮಪ್ಪನಾಯಕ್**: ಕ್ರಿಯಾಲೋಪದ ಬಗ್ಗೆ ಸ್ವಾಮಿ, ಪಾನ ನಿರೋಧ ನೀತಿಯನ್ನು 1948ನೇ ಸಾಲಿನಲ್ಲಿ ಪರಿಷ್ಕರಿಸಲಾಯಿತು ಎಂದು ಹೇಳಿರುವಾಗ, ಅದನ್ನು ಪರಿಷ್ಕರಿಸಲಾಗಿದೆ ಎಂದೇ ಅರ್ಥ. ಮಾನ್ಯ ಸದಸ್ಯರು ತಮ್ಮದೇ ಆದ ರೀತಿಯಲ್ಲಿ ಅದನ್ನು ಆರ್ಥೈಸುತ್ತಾ ಹೋಗಬಹುದೆ? ಅದನ್ನು ಹೇಗೆ ಪರಿಷ್ಕರಿಸಲಾಯಿತು? ಮುಂತಾದ ಪ್ರಶ್ನೆಗಳನ್ನು ಅವರು ಕೇಳುತ್ತಾ ಹೋಗಬಹುದೆ?

**ಸನ್ಮಾನ್ಯ ಸಭಾಧ್ಯಕ್ಷರು** : ಮಾನ್ಯ ಸದಸ್ಯರಾದ ಭೀಮಪ್ಪ ನಾಯಕರು ನಾನು ಹೇಳಿದ್ದನ್ನೇ ಮತ್ತೆ ಹೇಳುತ್ತಿದ್ದಾರೆ.

**ಶ್ರೀ ಬಿ.ಕೆ. ಪುಟ್ಟರಾಮಯ್ಯ**: ಇದು ಕ್ರಿಯಾ ಲೋಪವಾಗುತ್ತದೆಯೇ ಎಂದು ನಾನು ತಿಳಿಯಬುಸುತ್ತೇನೆ.

**ಸನ್ಮಾನ್ಯ ಸಭಾಧ್ಯಕ್ಷರು**: ಮಾನ್ಯ ಸದಸ್ಯರಾದ ಭೀಮಪ್ಪನಾಯಕರು ನಾನು ಹೇಳಿದ್ದನ್ನೆ ಮತ್ತೆ ಹೇಳುತ್ತಿದ್ದಾರೆ ಎಂದು ನಾನು ಹೇಳಿದೆ. ಅದರರ್ಥ ನಾನು ಕ್ರಿಯಾ ಲೋಪವನ್ನು ಎತ್ತಿ ಹಿಡಿಯುತ್ತಿಲ್ಲ ಎಂದು.

**ಶ್ರೀ ಕೆ.ಎಸ್. ಸೂರ್ಯನಾರಾಯಣರಾವ್**: 1931ನೇ ವರ್ಷದಲ್ಲಿ ಹಾಸನ ಜಿಲ್ಲೆಯ ಕೆಲವು ತಾಲ್ಲೂಕುಗಳಲ್ಲಿ ಪೂರ್ಣಪಾನ ನಿರೋಧವನ್ನು ಜಾರಿಗೆ ತರಲಾಯಿತು. ಮುಂದಿನ ಹಂತವಾಗಿ 1954 ರಲ್ಲಿ ಹಾಸನ ಜಿಲ್ಲೆಯ ಅರಕಲಗೂಡು ಮತ್ತು ಆಲೂರು ತಾಲ್ಲೂಕುಗಳನ್ನು ಪೂರ್ಣ ಪಾನ ನಿರೋಧ ಪ್ರದೇಶಗಳೆಂದು ಘೋಷಿಲಾಯಿತು. ಆ ಸಮಯದಲ್ಲಿ ಅಥವಾ ಆ ತರುವಾಯ ಪಾನ ನಿರೋಧ ನೀತಿಯನ್ನು ಸರ್ಕಾರ ಪುನ: ಪರಿಶೀಲಿಸಿದೆಯೇ? ಹಾಗಿದ್ದರೆ, ಸದನದಲ್ಲಿ ವರದಿಯ ಒಂದು ಪ್ರತಿಯನ್ನು ನೀವು ಮಂಡಿಸಿದ್ದೀರಾ?

**ಶ್ರೀ ಮೊಹಮದ್ ಅಲಿ** – ಎರಡು ತಾಲ್ಲೂಕುಗಳಿಗೆ ಸಂಬಂಧಿಸಿದಂತೆ ಅದು ಹೆಚ್ಚು ನಿರ್ದಿಷ್ಟವಾದ ಪ್ರಶ್ನೆ. ಆದ್ದರಿಂದ ನಾನು ನೋಟೀಸ್ ಬಯಸುತ್ತೇನೆ.

**ಶ್ರೀ ವಿ. ಎಸ್. ಪಾಟೀಲ್**:ನಮ್ಮ ಐದನೇ ಪಂಚವಾರ್ಷಿಕ ಯೋಜನೆಯನ್ನು ಕಾರ್ಯಗತಗೊಳಿಸಲು ನಿಮಗೆ ಹಣದ ಅಗತ್ಯವಿರುವುದರಿಂದ ಈ ನೀತಿಯಿಂದ ದೂರಸರಿಯಲು ಸರ್ಕಾರದವರು ಯೋಚಿಸುತ್ತಿದ್ದಾರೆ ಎಂಬುದನ್ನು ತಿಳಿಸುತ್ತೀರಾ?

**ಶ್ರೀ ಮೊಹಮದ್ ಅಲಿ** – ಈ ನೀತಿಯಿಂದ ದೂರ ಸರಿಯುವ ಪ್ರಶ್ನೆಯೇ ಇಲ್ಲ. ರಾಜ್ಯದಲ್ಲಿ ಪೂರ್ಣ ಪಾನ ನಿರೋಧವನ್ನು ಜಾರಿಗೊಳಿಸುವುದರಿಂದ ಆದಾಯದಲ್ಲಾಗುವನಷ್ಟವನ್ನು ತುಂಬಿಕೊಳ್ಳುವ ಮಾರ್ಗೋಪಾಯಗಳನ್ನು ಕಂಡುಕೊಳ್ಳಲು ಸರ್ಕಾರವು ಚಿಂತನೆನಡೆಸಿದೆ?

**ಶ್ರೀ ಕೆ. ಹನುಮಂತಯ್ಯ**: ರಾಜ್ಯದಲ್ಲಿ ಪೂರ್ಣ ಪಾನನಿರೋಧ ಜಾರಿಗೆ ತರುವಲ್ಲಿ ಹಣಕಾಸು ಪರಿಗಣನೆಗಳು ಅಡ್ಡಿ ಬರುತ್ತಿವೆಯೇ?

**ಶ್ರೀ ಮೊಹಮದ್ ಅಲಿ** – ಹೌದು, ಕೆಲಮಟ್ಟಿಗೆ ಏಕೆಂದರೆ 1947 ರಲ್ಲಿ ರಾಜ್ಯದಲ್ಲಿ ಪಾನ ನಿರೋಧ ಕೈಗೊಂಡಾಗ ಮೊದಲನೇ ಪಂಚಾವಾರ್ಷಿಕ ಯೋಜನೆಯಾಗಲೀ, ಎರಡನೇ ಪಂಚವ್ವಾರ್ಷಿಕ ಯೋಜನೆಯಾಗಲಿ ಇರಲಿಲ್ಲ. ಯಾವುದೇ ಅಭಿವೃದ್ಧಿ ಕಾಮಗಾರಿಗಳ ಬಗ್ಗೆ ಪರ್ಯಾಲೋಚಿಸಿರಲಿಲ್ಲ. ಈಗ ನಮ್ಮ ಅಭಿವೃದ್ಧಿ ಕಾಮಗಾರಿಗಳಿಗೆ ಸಂಪನ್ಮೂಲಗಳನ್ನು ರೂಢಿಸಿಕೊಳ್ಳುವ ಸಲುವಾಗಿ ಆದಾಯದಲ್ಲಿನನಷ್ಟವನ್ನು ನಾವು ತುಂಬಿಸಿಕೊಳ್ಳಲೇಬೇಕಾಗಿದೆ. ಇಲ್ಲವೆ, ರಾಜ್ಯದಲ್ಲಿ ಪೂರ್ಣ ಪಾನ ನಿರೋಧವನ್ನು ಜಾರಿಗೆ ತರಲುನಮಗೆ ಸಾಧ್ಯವಾಗಿಸುವ ಸಲುವಾಗಿ ಕೇಂದ್ರ ಸರ್ಕಾರ ಸಹಾಯ ಧನ ನೀಡಬೇಕಾಗುತ್ತದೆ.

**ಶ್ರೀ ಕೆ. ಹನುಮಂತಯ್ಯ**: ರಾಜ್ಯದಲ್ಲಿ ಪೂರ್ಣಪಾನ ನಿರೋಧ ಜಾರಿಗೊಳಿಸುವುದಕ್ಕೆ ಎರಡನೇ ಮತ್ತು ತರುವಾಯದ ಪಂಚವಾರ್ಷಿಕ ಯೋಜನೆಗಳು ಅಡ್ಡಿಯಾಗಿವೆ ಎಂದು ಸಚಿವರು ಈಗಷ್ಟೇನೀಡಿದ ಉತ್ತರದಿಂದ ನಾನು ತಿಳಿಯಬಹುದೆ?

**ಶ್ರೀ ಮೊಹಮದ್ ಅಲಿ** –ನಿಖರವಾಗಿ ಹಾಗಲ್ಲ, ಪೂರ್ಣ ಪಾನ ನಿರೋಧ ಕಾರ್ಯಕ್ರಮವನ್ನು ತರಾತುರಿಯಲ್ಲಿ ಜಾರಿಗೆ ತರುವುದಕ್ಕೆ ಮೊದಲು ನಾವು ಇತರ ಸಂಪನ್ಮೂಲಗಳನ್ನು ಹುಡುಕಿಕೊಳ್ಳಬೇಕಾಗಿದೆ.

**ಶ್ರೀ ಹನುಮಂತಯ್ಯ**: ಅದಕ್ಕೆ ಬೇಕಾದ ಸಂಪನ್ಮೂಲಗಳನ್ನು ಸರ್ಕಾರ ರೂಢಿಸಿಕೊಳ್ಳುವುದು ಯಾವಾಗ ಮತ್ತು ಆ ಸಂಪನ್ಮೂಲಗಳು ಯಾವುವು?

**ಶ್ರೀ ಮೊಹಮದ್ ಅಲಿ** –ಆ ಬಗ್ಗೆ ಪರಿಶೀಲಿಸಲಾಗುತ್ತಿದೆ

**ಶ್ರೀ ಎಸ್. ಶರಣಗೌಡ**: ಹೈದರಾಬಾದ್ – ಕರ್ನಾಟಕ ಪ್ರದೇಶದಲ್ಲಿ ಪಾನ ನಿರೋಧವನ್ನು ಜಾರಿಗೊಳಿಸುವ ಸಂಬಂಪವಿದೆಯೇ ತಿಳಿಸುತ್ತೀರಾ?

**ಶ್ರೀ ಮೊಹಮದ್ ಅಲಿ** –ರಾಜ್ಯದೊಳಗೆ ಪೂರ್ಣಪಾನ ನಿರೋದವನ್ನು ಜಾರಿಗೆ ತರುವುದು ಸರ್ಕಾರದ ನೀತಿ..

**ಶ್ರೀ ಎಸ್. ಶರಣಗೌಡ:**ನಮ್ಮ ಪ್ರದೇಶದಲ್ಲಿ ಅದನ್ನು ಯಾವಾಗ ಜಾರಿಗೊಳಿಸುತ್ತೀರಾ

**ಶ್ರೀ ಮೊಹಮದ್ ಅಲಿ** –ಆದಷ್ಟು ಬೇಗ

**ಶ್ರೀ ಎಸ್. ಶರಣಗೌಡ:** ಅಧಷ್ಟು ಬೇಗ ಎನ್ನುವುದು ದಿನಾಂಕವಲ್ಲ.

**ಶ್ರೀ ಮೊಹಮದ್ ಅಲಿ** –ಅದಕ್ಕೆ ನಿರ್ದಿಷ್ಟ ದಿನಾಂಕವನ್ನು ಗೊತ್ತುಪಡಿಸಲಾಗುವುದಿಲ್ಲ.

**ಶ್ರಿ ಹೆಚ್. ಎಂ. ಚನ್ನಬಸಪ್ಪ :** (ಬಿ)ಗೆ ಪೂರಕ ಪ್ರಶ್ನೆ ಈಗ ಯೋಜಿಸಿರುವಂತೆ ಪಾನ ನಿರೋಧವನ್ನು ಜಾರಿಗೊಳಿಸಲು ಸರ್ಕಾರ ಉದ್ದೇಶಿಸಿರುವ ಹಂತಗಳಾವುವು?

**ಶ್ರೀ ಮೊಹಮದ್ ಅಲಿ** –ಕೆಲವು ಪ್ರದೇಶಗಳಲ್ಲಿ ಸ್ವಲ್ಪ ಸ್ವಲ್ಪವಾಗಿ ಪಾನ ನಿರೋಧವನ್ನು ಜಾರಿಗೆ ತರುವ ಮೂಲಕ, ಮಧ್ಯದ ಅಂಗಡಿಗಳನ್ನು ಕಡಿಮೆ ಮಾಡುವ ಮೂಲಕ, ಮಧ್ಯದ ತಯಾರಿಕೆಯನ್ನು ಕಡಿಮೆ ಮಡುವ ಮೂಲಕ ಮತ್ತು ಇತರೆ ವಿಧಾನಗಳಿಂದ.

**ಶ್ರೀ ಕೆ. ಪುಟ್ಟಸ್ವಾಮಿ:** ಎರಡನೇ ಪಂಚವಾರ್ಷಿಕ ಯೋಜನೆಯ ಕರಡನ್ನು ಸಿದ್ಧಪಡಿಸುವಾಗ, ಪಾನ ನಿರೋಧದಲ್ಲಿ ಯಾವುದೇ ಪ್ರಗತಿಯಾಗಿಲ್ಲವೆಂಬುದನ್ನು ಸರ್ಕಾರ ಗ್ರಹಿಸಿತ್ತೆ ಎಂಬುದನ್ನು ತಿಳಿಸುತ್ತೀರಾ? .

**ಶ್ರೀ ಮೊಹಮದ್ ಅಲಿ** –ಬೇರೆ ಬೇರೆ ಸರ್ಕಾರಗಳು. ಅಂದರೆ ಆಂಧ್ರ. ಬಾಂಬೆ, ಮದ್ರಾಸ್ ಮತ್ತು ಹಳೆಯ ಮೈಸೂರು ಸರ್ಕಾರವು ಎರಡನೆಯ ಪಂಚವಾರ್ಷಿಕ ಯೋಜನೆಯ ಕರಡನ್ನು ಸಿದ್ಧಪಡಿಸಿದವು ಮತ್ತು ಆ ಸರ್ಕಾರಗಳ ಮನಸ್ಸಿನಲ್ಲಿದ್ದ ಪರಿಗಣನೆಗಳನ್ನು ತಿಳಿದುಕೊಳ್ಳುವ ಸ್ಥಿತಿಯಲ್ಲಿ ಈ ಸರ್ಕಾರ ಇಲ್ಲ.

**ಶ್ರೀ ಕೆ. ಪುಟ್ಟಸ್ವಾಮಿ:** ಹೆಚ್ಚಿನ ಪ್ರದೇಶಗಳಲ್ಲಿ ಪಾನ ನಿರೋಧ ಜಾರಿಗೊಳಿಸಿದರೆ, ಸಂಪನ್ಮೂಲಗಳಲ್ಲಿ ಗಂಭೀರ ಕುಸಿತ ಉಂಟಾಗುತ್ತದೆ ಎಂದು ಸರ್ಕಾರ ಹೇಳಿದೆ. ಎರಡನೆ ಪಂಚವಾರ್ಷಿಕ ಯೋಜನೆ ಮುಕ್ತಾಯವಾಗುವವರೆಗೆ ಮಧ್ಯಪಾನ ಜಾರಿಯಲ್ಲಿರುವ ಉಳಿದ ಪ್ರದೇಶಗಳಲ್ಲಿ ಪಾನ ನಿರೋಧ ಜಾರಿಗೊಳಿಸದಿರುವುದು ಸರ್ಕಾರದ ಉದ್ದೇಶವೇ?

**ಶ್ರೀ ಮೊಹಮದ್ ಅಲಿ** –ಆ ಪ್ರಶ್ನೆಗೆ ಈಗಾಗಲೇ ನಾನು ಉತ್ತರ ಕೊಟ್ಟಿದೇನೆ. ಪೂರ್ಣ ಪಾನ ನಿರೋಧಗೊಳಿಸುವ ಈ ಪ್ರಶ್ನೆ ಆರ್ಥಿಕ ವಿಷಯದೊಂದಿಗೆ ಸಂಬಂಧ ಹೊಂದಿದೆ. ಹಾಗಾಗಿ, ಸರ್ಕಾರವು ರಾಜ್ಯದ ಆರ್ಥಿಕ ಸ್ಥಿತಿ ಹಾಗೂ ಈ ಸುಧಾರಣಾ ಕ್ರಮವನ್ನು ಜಾರಿಗೊಳಿಸುವ ಅವಶ್ಯಕತೆ ಇವೆರಡನ್ನು ಪರಿಶೀಲಿಸಬೇಕಾಗಿದೆ.

**ಶ್ರೀ ಯು.ಎಂ. ಮಾದಪ್ಪ** – ಪಾನ ನಿರೋಧವನ್ನು ಸಂಸ್ಥಾನದ ಎಲ್ಲ ಪ್ರದೇಶಗಳಿಗೂ ತಡವಾಗಿ ಜಾರಿಗೆ ಕೊಡಬೇಕೆಂದು ಮನಸ್ಸು ಮಾಡಿದ್ದೇವೆಂದು ಹೇಳುತ್ತಾರೆ. ಅದೇ ಸಂದರ್ಭದಲ್ಲಿ 1951 ರಿಂದ 1954ರವರೆಗೂ ಯಾವ ವಿಧವಾದ ನೀತಿಯನ್ನೂ ನಿರ್ದಿಷ್ಟವಾಗಿ ಅನುಸರಿಸದೆ ಪಾನ

ನಿರೋಧವನ್ನು ಯಾವ ಪ್ರಾಂತಕ್ಕೂ ಮುಂದುವರಿಸಿಲ್ಲ; ಮತ್ತು ಎರಡನೆ ಪಂಚವಾರ್ಷಿಕ ಯೋಜನೆಗೆ ಹಣದ ಮುಗ್ಗಟ್ಟಿರುವುದರಿಂದ ನಿಧಾನವಾಗಿ ಪಾನನಿರೋಧವನ್ನು ಜಾರಿಗೆ ತರುವ ಏರ್ಪಾಡನ್ನು ಮಾಡಿದ್ದೇವೆಂದು ಹೇಳಿದ್ದಾರೆ. ನಿಧಾನವಾಗಿ ಜಾರಿಗೆ ತರುತ್ತಾರೆಂದು ನಾವುನಂಬಬಹುದೇ ಅಥವಾ ಪೂರ್ಣವಾಗಿ ಇದನ್ನು ಕೈ ಬಿಟ್ಟಿದ್ದಾರೆ ಎಂದು ತಿಳಿದುಕೊಳ್ಳೋಣವೇ?

**ಶ್ರೀ ಮೊಹಮದ್ ಅಲಿ** –ಇದು ರಾಷ್ಟ್ರೀಯ ಕಾರ್ಯಕ್ರಮ ತನ್ನ ಆರ್ಥಿಕ ಸಂಮನ್ಮೂಲಗಳಿಗೆ ಅನುಸಾರವಾಗಿ ಪೂರ್ಣ ಪಾನ ನಿರೋಧ ಕಾರ್ಯಕ್ರಮವನ್ನು ಹಂಹಂತವಾಗಿ ಜಾರಿಗೊಳಿಸುವಂತೆ ಯೋಜನಾ ಆಯೋಗವು ಪ್ರತಿಯೊಂದು ರಾಜ್ಯಕ್ಕೂ ಸಲಹೆ ಮಾಡಿದೆ.

**ಶ್ರೀ ಟಿ. ತಾರೇಗೌಡ:** ಪಾನ ನಿರೋಧವನ್ನು ಜಾರಿಗೊಳಿಸುವ ಮೂಲಕ ಬೆಂಗಳೂರುನಗರ ಮತ್ತು ಬೆಂಗಳೂರುನಗರ ಜಿಲ್ಲೆಗೆ ಸರ್ಕಾರ ಯುಕ್ತ ಗಮನ ನೀಡುತ್ತದೆಯೇ?

**ಶ್ರೀ ಮೊಹಮದ್ ಅಲಿ** –ಅದನ್ನು ಪರಿಶೀಲಿಸಲಾಗುವುದು.

**ಶ್ರೀ ಎಂ. ಲಿಂಗೇಗೌಡ** – ಪಾನನಿರೋಧ ನೀತಿಯನ್ನು ಸಂಪೂರ್ಣವಾಗಿ ಬಿಟ್ಟು ಎರಡನೆ ಪಂಚವಾರ್ಷಿಕ ಯೋಜನೆಗೆ ಹೆಚ್ಚು ಹಣವನ್ನು ಏಕೆ ತೆಗೆದುಕೊಳ್ಳಬಾರದು?

**ಸನ್ಮಾನ್ಯ ಸಭಾಧ್ಯಕ್ಷರು** –ಅದು ಕ್ರಮಕ್ಕಾಗಿ ಮಾಡಿದ ಸಲಹೆ

**ಶ್ರೀ ವೈ. ವೀರಪ್ಪ:** ಅಗರವಾಲ್ ಸಮಿತಿಯು ಶಿಫಾರಸು ಮಾಡಿರುವಂತೆ 1958ರ ವೇಳೆಗೆ ಪಾನ ನಿರೋಧವನ್ನು ಜಾರಿಗೊಳಿಸುವ ಕ್ರಮವನ್ನು ಪೂರ್ಣಗೊಳಿಸಲು ಸರ್ಕಾರಕ್ಕೆ ಸಾಧ್ಯವಾಗುತ್ತದೆಯೇ?

**ಶ್ರೀ ಮೊಹಮದ್ ಅಲಿ** –ಅಗರವಾಲ್ ಸಮಿತಿಯ ವರದಿಯ ಬಗ್ಗೆ ಯೋಜನಾ ಆಯೋಗವು, ಪ್ರತಿಯೊಂದು ರಾಜ್ಯದ ಆರ್ಥಿಕ ಸಂಪನ್ಮೂಲಗಳಿಗೆ ಅನುಸಾರವಾಗಿ ಪಾನ ನಿರೋಧವನ್ನು ಹಂತಹಂತವಾಗಿ ಜಾರಿಗೊಳಿಸುವ ಕಾರ್ಯಕ್ರಮವನ್ನು ಕೈಗೊಳ್ಳುವಂತೆ ರಾಜ್ಯ ಸರ್ಕಾರಗಳಿಗೆ ಸಲಹೆ ಮಾಡಿದೆ.

**ಶ್ರೀ ವೈ. ಮಂಜಯ್ಯಶೆಟ್ಟಿ:** ಸರ್ಕಾರಕ್ಕಾದ ಅನುಭವದ ಹಿನ್ನಲೆಯಲ್ಲಿ, ರಾಜ್ಯದ ಇತರ ಪ್ರದೇಶಗಳಲ್ಲಿ ಪಾನ ನಿರೋಧವನ್ನು ಜಾರಿಗೊಳಿಸುವಲ್ಲಿ ನಿಧಾನಗತಿ ನೀತಿಯುನ್ನು ಅಳವಡಿಸಿಕೊಳ್ಳಲಾಗಿದೆ.

**ಶ್ರೀ ಮೊಹಮದ್ ಅಲಿ** –ಪಾನ ನಿರೋಧದ ಪ್ರಗತಿ ನಿಧಾನವಾಗಿದ್ದರೂ, ಪಾನ ನಿರೋಧದ ಯಶಸ್ಸು ಸರ್ಕಾರಕ್ಕೆ ತೃಪ್ತಿ ತಂದಿದೆ. ರಾಜ್ಯದಲ್ಲಿ ಆದಷ್ಟು ಬೇಗ ಪೂರ್ಣ ಪಾನನಿರೋದವನ್ನು ಜಾರಿಗೆ ತರಲು ಸರ್ಕಾರ ನಿರ್ಧರಿಸಿದೆ.

**ಶ್ರೀ ಜಿ.ವಿ. ಪುಟ್ಟಣ್ಣ** – prohibited areaನಲ್ಲಿರತಕ್ಕ ಜಿಲ್ಲಾ ಬೋರ್ಡ್‌ಗಳಿಗೆ ಎಕ್ಸೈಸ್‌ನಿಂದ ಬರತಕ್ಕ ಕೋಟಾ ನಿಂತುಹೋಗಿದೆ. ಇದಕ್ಕೆ ಕಾರಣವೇನೆಂದು ತಿಳಿಸುತ್ತೀರಾ?

**ಶ್ರೀ ಮೊಹಮದ್ ಅಲಿ** – ಅಬಕಾರಿಯಿಂದ ಯಾವುದೇ ಆದಾಯ ಇಲ್ಲದಿರುವಾಗ ಅಬಕಾರಿ ಆದಾಯದಿಂದ ಯಾವುದೇ ಪಾಲು ಪಡೆಯುವ ಪ್ರಶ್ನೆಯೇ ಉದ್ಭವಿಸುವುದಿಲ್ಲ.

**ಶ್ರೀ ಜಿ. ಎಸ್. ಪುಟ್ಟಣ್ಣ** – ಒಟ್ಟು ಮೈಸೂರು ಸಂಸ್ಥಾನಕ್ಕೆ ಬರತಕ್ಕ ಎಕ್ಸೈಜ್ ರೆವಿನ್ಯೂ ತೆಗೆದುಕೊಂಡು ಒಟ್ಟುಗೂಡಿಸಿ ಎಲ್ಲ ಡಿಸ್ಟ್ರಿಕ್ಟ್ ಬೋರ್ಡ್‌ಗಳಿಗೂ ಹಂಚುವುದಕ್ಕೆ ಸಾಧ್ಯವೇ?

**ಶ್ರೀ ಮೊಹಮದ್ ಅಲಿ** –ಅದು ಸಾಧ್ಯವಿಲ್ಲ. ಏಕೆಂದರೆ ಅಬಕಾರಿ ಸುಂಕ ಪಾವತಿ ಮಾಡುತ್ತಿರುವವರು ಇದಕ್ಕೆ ಒಪ್ಪುವುದಿಲ್ಲ.

**ಶ್ರೀ ಹೆಚ್. ಎಂ. ಚನ್ನಬಸಪ್ಪ:** (ಬಿ)ಗೆ ನೀಡಿದ ಉತ್ತರದಲ್ಲಿರುವ ಪ್ರಕಾರ ಸರ್ಕಾರ ರಾಜ್ಯದಲ್ಲಿ ಹಂತಹಂತವಾಗಿ ಪಾನನಿರೋಧವನ್ನು ಜಾರಿಗೊಳಿಸಲು ಯಾವುದಾದರೂ ನಿರ್ದಿಷ್ಟ ಕಾರ್ಯಕ್ರಮವನ್ನು ಹಾಕಿಕೊಂಡಿದೆಯೆ?

**ಶ್ರೀ ಮೊಹಮದ್ ಅಲಿ** –ಹೌದು ಸ್ವಾಮಿ, ಇಡೀ ಪ್ರಶ್ನೆ ಪರಿಶೀಲನೆಯಲ್ಲಿದೆ. ಸವಿವರವಾದ ಕಾರ್ಯಕ್ರಮವೊಂದನ್ನು ರೂಪಿಸಲಾಗುತ್ತಿದೆ.

## ಅಬಕಾರಿ ಗುತ್ತಿಗೆದಾರರಿಂದ ಸ್ವೀಕರಿಸಿದ ಮತ್ತು ಗುತ್ತಿಗೆದಾರರ ಬಾಕಿಗಳು

**ಶ್ರೀ ಬಿ. ಎನ್. ಬೋರಣ್ಣಗೌಡ (ಬೇಲೂರು)**_ ಸರ್ಕಾರದವರು ದಯವಿಟ್ಟು ಇದನ್ನು ತಿಳಿಸುವರೇ?

ಎ. ಕಳೆದ ಮೂರು ವರ್ಷಗಳಲ್ಲಿ ಸುಸ್ಥಿದಾರರಾಗಿರುವ ಅಬಕಾರಿ ಗುತ್ತಿಗೆದಾರರೆಷ್ಟು?

ಬಿ. ಈ ಮೂರು ವರ್ಷಗಳಲ್ಲಿ ವಸೂಲಿ ಮಾಡಿದ ಹಣ

ಸಿ. ಅವರಿಂದ ವಸೂಲಿ ಮಾಡಬೇಕಾಗಿರುವ ಬಾಕಿ ಮೊತ್ತ.

**ಶ್ರೀ ಮೊಹಮದ್ ಅಲಿ –(ಅಬಕಾರಿ ಮತ್ತು ಗ್ರಾಮೀಣ ಕೈಗಾರಿಕಾ ಸಚಿವರು)**

ಎ. 103

ಬಿ. ರೂ 1,40,388–13–11

ಸಿ. ರೂ 5,11,875 –1–9

**ಶ್ರೀ ಬಿ. ಎಸ್. ಬೋರಣ್ಣಗೌಡ** – ಎಕ್ಸೈಜು ಕಂಟ್ರಾಕ್ಟರುದಾರರೆಲ್ಲಾ ಸಾಹುಕಾರರೇ?

**ಶ್ರೀ ಮೊಹಮದ್ ಅಲಿ** –ಹಾಗೆ ಹೇಳುವುದು ಕಷ್ಟ

**ಶ್ರೀ ಬಿ. ಎಸ್. ಬೋರಣ್ಣಗೌಡ**– ಅಷ್ಟು ಬಾಕಿ ವಸೂಲು ಮಾಡದೇ ಇರಲು ಕಾರಣವೇನು?

**ಶ್ರೀ ಮೊಹಮದ್ ಅಲಿ** –ಸ್ವಾಮಿ ಬಾಕಿಗಳನ್ನು ವಸೂಲಿ ಮಾಡಲಾಗುತ್ತಿದೆ. ನಾನು ಒಂದು ಬಾರಿ ಹೇಳಿದಂತೆ ಬಾಕಿಗಳನ್ನು ಕಟ್ಟದಿರುವುದರಿಂದ ಅವು ಬಕಿ ಉಳಿದಿವೆ.

**ಶ್ರೀ ಬಿ. ಎಸ್. ಬೋರಣ್ಣಗೌಡ** – ಎಕ್ಸೈಜು ಕಂಟ್ರಾಕ್ಟರುಗಳನ್ನು ಕೊಡುವಾಗ ಸ್ವಂತ ಜಾಮೀನುಗಳನ್ನು ತೆಗೆದುಕೊಳ್ಳುತ್ತಾರೆಯೇ?

**ಶ್ರೀ ಮೊಹಮದ್ ಅಲಿ** –ಸ್ವಾಮಿ ಅಬಕಾರಿ ಗುತ್ತಿಗೆದಾರರು ಎರಡು ತಿಂಗಳ ಗುತ್ತಿಗೆ ಹಣವನ್ನು ಮುಂಚಿತವಾಗಿ ಠೇವಣಿ ಇಡಬೇಕಾಗುತ್ತದೆ. ಹತ್ತು ತಿಂಗಳ ಗುತ್ತಿಗೆ ಹಣಕ್ಕೆ ಸಂಬಂಧಪಟ್ಟಂತೆ ಅವರ ಆಸ್ತಿಯಿಂದ ಅಥವಾ ಭದ್ರತೆಯಿಂದ ಆ ಹಣವನ್ನು ಸಂಗ್ರಹಿಸಬೇಕಾಗಿದೆ.

**ಶ್ರೀ ಬಿ. ಎಸ್. ಬೋರಣ್ಣಗೌಡ**: ಕಂಟ್ರಾಕ್ಟರುಗಳ ಮೇಲೆ ಸೆಕ್ಯೂರಿಟಿ ಹಾಕಿದ್ದರೂ ಬಾಕಿ ಹಣವನ್ನು ಅವರಿಂದ ವಸೂಲಿ ಮಾಡುವುದಕ್ಕೆ ಏನು ತೊಂದರೆ ಇದೆ?

**ಶ್ರೀ ಮೊಹಮದ್ ಅಲಿ** –ರಾಜ್ಯದಲ್ಲಿ ಕೆಲವು ವಿಭಿನ್ನ ವಲಯಗಳಿವೆ. ಹಳೆಯ ಮೈಸೂರಿನಲ್ಲಿ ಸುಸ್ಥಿದಾರರಿಂದ ಸಾಲ್ವೆನ್ಸಿ ಸರ್ಟಿಫಿಕೇಟ್ ಅನ್ನು ಪಡೆಯಲಾಗುತ್ತಿದೆ. ಹಣ ಕಟ್ಟದಿದ್ದ ಸಂದರ್ಭದಲ್ಲಿ ಭೂ ಕಂದಾಯ ನಿಯಮಗಳ ಅಡಿಯಲ್ಲಿ ವಸೂಲಿ ಮಾಡಲಾಗುತ್ತದೆ.

**ಶ್ರೀ ವೈ. ವೀರಪ್ಪ:** ಎಷ್ಟು ವರ್ಷಗಳಿಂದ ಈ ಬಾಕಿ ಹಾಗೆ ಉಳಿದಿದೆ.

**ಶ್ರೀ ಮೊಹಮದ್ ಅಲಿ** –ಪ್ರಶ್ನೆ ಮೂರು ವರ್ಷಗಳ ಬಾಕಿಗೆ ಸಂಬಂಧಿಸಿದೆ

**ಶ್ರೀ ವೈ ವೀರಪ್ಪ:** ಈ ಬಾಕಿ ಹಣವನ್ನು ವಸೂಲಿ ಮಾಡಲು ಸರ್ಕಾರ ತೆಗೆದುಕೊಂಡಿರುವ ಕ್ರಮ ಏನು?

**ಶ್ರೀ ಮೊಹಮದ್ ಅಲಿ** –ಭೂ ಕಂದಾಯ ನಿಯಮಗಳಡಿಯಲ್ಲಿ ಕ್ರಮ ತೆಗೆದುಕೊಳ್ಳಲಾಗಿದೆ ಮತ್ತು ಸುಸ್ಥಿದಾರರ ಸ್ವತ್ತನ್ನು ಮಾರಾಟ ಮಾಡಲು ವ್ಯವಹರಣೆಗಳನ್ನು ಪ್ರಾರಂಭಿಸಲಾಗಿದೆ.

**ಶ್ರೀ ವೆಂಕಟಯ್ಯ ಗೌಡ:** ಯಾರೇ ಒಬ್ಬ ವ್ಯಕ್ತಿಯಿಂದ ಬಾಕಿ ಉಳಿಸಿಕೊಂಡಿರುವ ಗರಿಷ್ಠ ಮೊತ್ತ ಎಷ್ಟು ಸ್ವಾಮಿ?

**ಶ್ರೀ ಮೊಹಮದ್ ಅಲಿ** –ಯಾವುದೇ ಖಚಿತ ಪ್ರಕರಣದ ಬಗ್ಗೆ ತಿಳಿಯಲು ಮಾನ್ಯ ಸದಸ್ಯರು ತಿಳಿಯಬಯಸಿದರೆ, ಅವರು ಯಾವುದೇ ನಿರ್ದಿಷ್ಟ ಪ್ರಶ್ನೆ ಕೇಳಿದರೆ ನಾನು ಉತ್ತರ ನೀಡುತ್ತೇನೆ.

**ಶ್ರೀ ಜಿ. ವೆಂಕಟಯ್ಯಗೌಡ** : ಗರಿಷ್ಟ ಹಣವನ್ನು ಪಾವತಿಸಬೇಕಾದ ವ್ಯಕ್ತಿ ಬಗ್ಗೆ ನಾನು ತಿಳಿಯಬಯಸುತ್ತೇನೆ.

**ಶ್ರೀ ಮೊಹಮದ್ ಅಲಿ** –– ಆ ಮಾಹಿತಿ  ನನ್ನಲ್ಲಿಲ್ಲ.

(**ಶ್ರೀ ಎಸ್. ಶರಣಗೌಡರು** – ಹಿಂದಿಯಲ್ಲಿ ಪೂರಕ ಪ್ರಶ್ನೆಯನ್ನು ಕೇಳಿದರು)

**ಶ್ರೀ ಮೊಹಮದ್ ಅಲಿ** –– ಬಾಕಿಗಳನ್ನು ಮನ್ನಾ ಮಾಡುವಂಥ ಕೆಲವು ಪ್ರಕರಣಗಳಿರಬಹುದು.

## ಗ್ರಾಮೀಣ ಪ್ರದೇಶಗಳಲ್ಲಿ ಕೈಗಾರಿಕಾ ಶಾಖೆಗಳು ಪ್ರಾರಂಭಿಸುವುದು.

**ಶ್ರೀ ಸಿ.ಎಂ ಆರ್ಮುಗಂ (ಕೆಜಿಎಫ್)** ಸರ್ಕಾರದವರು ದಯವಿಟ್ಟು ಇದನ್ನು ತಿಳಿಸುವರೇ–

ಎ. ತಮ್ಮ ಕೃಷಿ ಕ್ಷೇತ್ರಗಳಿಗೆ ಉಪಯುಕ್ತವಾಗುವಂಥ ಬಡಗಿ ಮತ್ತು ಇತರ ವೃತ್ತಿಗಳನ್ನು ಕಲಿಯಲು ಗ್ರಾಮದ ಯುವಕರಿಗೆ ಸಾಧ್ಯವಾಗಿಸುವ ಸಲುವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಕೈಗಾರಿಕಾ ಶಾಲೆಗಳನ್ನು ಪ್ರಾರಂಭಿಸುವ ಯಾವುದಾದರೂ ಪ್ರಸ್ತಾವ ಸರ್ಕಾರದ ಬಳಿ ಇದೆಯೆ?

**ಶ್ರೀ ಮೊಹಮದ್ ಅಲಿ –(ಅಬಕಾರಿ ಮತ್ತು ಗಾಮೀಣ ಕೈಗಾರಿಕಾ ಸಚಿವರು) –**

ಹೌದು ಸಮುದಾಯ ಅಭಿವೃದ್ಧಿ ವಿಭಾಗ ಯೋಜನೆಯ ಭಾಗವಾಗಿ ಪ್ರಾರಂಭಿಸಲಾಗುವುದು.

**ಶ್ರೀ ಸಿ. ಎಂ. ಆರ್ಮುಗಂ** : ಸಮುದಾಯ ಅಭಿವೃದ್ಧಿ ವಿಭಾಗ ಯೋಜನೆಗಳಿಗೆ ಒಳಪಟ್ಟ ಪ್ರದೇಶಗಳಲ್ಲಿ ಸರ್ಕಾರದವರು ಯಾವುದೇ ಕೈಗಾರಿಕಾ ಶಾಲೆಗಳನ್ನು ಪ್ರಾರಂಭಿಸಿದ್ದಾರೆಯೇ?

**ಶ್ರೀ ಮೊಹಮದ್ ಅಲಿ** –ಸಿ.ಡಿ. ವಿಭಾಗಗಳಲ್ಲಿ 12 ಶಾಲೆಗಳಿವೆ.

**ಶ್ರೀ ವೈ. ವೀರಪ್ಪ:** ಹಾಸನ ಪ್ರದೇಶದಲ್ಲಿ ಅಂಥ ಯಾವುದೇ ಶಾಲೆಗಳನ್ನು ಪ್ರಾರಂಭಿಸಿದ್ದೀರಾ?

**ಶ್ರೀ ಮೊಹಮದ್ ಅಲಿ** – ಸಿಡಿ. ವಿಭಾಗಗಳಲ್ಲಿ 12 ಶಾಲೆಗಳನ್ನು ಪ್ರಾರಂಭಿಸಿರುವುದಾಗಿ ನಾನು ಈಗಷ್ಟೇ ಹೇಳಿದೆ.

**ಶ್ರೀ ಸಿ.ಎಂ. ಆರ್ಮುಗಂ:** ಗ್ರಾಮೀಣ ಪ್ರದೇಶಗಳಲ್ಲಿ ಕಸಬುದಾರಿಕೆ ತರಬೇತಿ ಪ್ರಾರಂಭಿಸಲು ಭಾರತ ಸರ್ಕಾರ ವಿಶೇಷ ಅನುದಾನ ನೀಡಿರುವುದು ನಿಜವೇ?

**ಶ್ರೀ ಮೊಹಮದ್ ಅಲಿ** – ನನಗೆ ನೋಟೀಸ್ ಬೇಕಾಗಿದೆ

**ಶ್ರೀ ಶರಣಗೌಡ:** ಗುಲ್ಬರ್ಗ ಜಿಲ್ಲೆಯಲ್ಲಿ ಎಷ್ಟು ಕೇಂದ್ರಗಳನ್ನು ತೆರೆಯುತ್ತೀದ್ದೀರಿ?

**ಶ್ರೀ ಮೊಹಮದ್ ಅಲಿ** –ಎಷ್ಟು ಸಿಡಿ ವಿಭಾಗಗಳಿದ್ದಾವ್ರೋ ಅಷ್ಟು.

**ಶ್ರೀ ಎಸ್.ಜಿ.ನರಸಿಂಹೇಗೌಡ** –ಈ ತರಹದ ಶಾಲೆಗಳನ್ನುನಮ್ಮ ಶ್ರವಣಬೆಳಗೊಳದಲ್ಲಿ ತೆರೆಯಲಾಗುತ್ತದೆಯೇ?

**ಮಾನ್ಯ ಸಭಾಧ್ಯಕ್ಷರು** – ಇದು ಸಿ.ಡಿ. ಬ್ಲಾಕಿಗೆ ಸಂಬಂಧಪಟ್ಟದ್ದು. ಆದ್ದರಿಂದ ತಮ್ಮ ಪ್ರಶ್ನೆ ಇದಕ್ಕೆ ಸಂಬಂಧಪಟ್ಟಿಲ್ಲ.

**ಸನ್ಮಾನ್ಯ ಸಭಾಧ್ಯಕ್ಷರು**– ಮಾನ್ಯ ಸದಸ್ಯರು ನಿಯಮಗಳನ್ನು ತಿಳಿಯಲು ಬಯಸಿಲ್ಲ. ಅವರಿಗೆ ಏನು ಬೇಕಾಗಿದೆ ಎಂದರೆ ಎಷ್ಟು ಅವಧಿಯಿಂದ ಪ್ರಸ್ತಾವ ಪರಿಗಣನೆಯಲ್ಲಿದೆ ಎಂಬುದು.

**ಶ್ರೀ ಮೊಹಮದ್ ಅಲಿ** –ಪಾನ ನಿರೋಧವನ್ನು ಜಾರಿಗೊಳಿಸಿದನಂತರ ಈಚಲು, ತೆಂಗು, ತಾಳೆ ಮರಗಳಿರುವಂಥ ಜಮೀನುಗಳನ್ನು ಬಿಡುಗಡೆ ಮಾಡುವುದಕ್ಕೆ ಸರ್ಕಾರ ತುಂಬ ಸೌಮ್ಯವಾದ ನೀತಿಯನ್ನು ಅಳವಡಿಸಿಕೊಂಡಿದೆ.

**ಶ್ರೀ ಹೆಚ್. ಕೆ. ಸಿದ್ದಯ್ಯ** – ಈಚಲು ಮರಗಳು ಇಲ್ಲದೆ ರೈತರಿಗೆ ಜಮೀನನ್ನು ಹಾಗೆಯೇ ಕೊಡುವುದಕ್ಕೆ ಅಭ್ಯಂತರವೇನು?

**ಸನ್ಮಾನ್ಯ ಸಭಾಧ್ಯಕ್ಷರು:** ಪ್ರಶ್ನೆಯನ್ನು ಮಾರ್ಪಾಡು ಮಾಡಿದ ರೂಪದಲ್ಲಿ ಕೇಳಬಹುದು. ಚಿಕ್ಕ ನಾಯಕನ ಹಳ್ಳಿಯಲ್ಲಿ ಇಂಥ ಜಮೀನುಗಳನ್ನು ಬಿಡುಗಡೆ ಮಾಡುವುದರಲ್ಲಿ ಸರ್ಕಾರ ಎದುರಿಸುತ್ತಿರುವ ತೊಂದರೆಯನ್ನು ಅವರು ತಿಳಿಯಬಯಸಿದ್ದಾರೆ.

**ಶ್ರೀ ಮೊಹಮದ್ ಅಲಿ** –ಅದು ವ್ಯಕ್ತಿಗತ ಪ್ರಕರಣವನ್ನು ಅವಲಂಬಿಸಿದೆ.

**ಶ್ರೀ ಜಿ.ನರಸಿಂಹೇಗೌಡ**– ಈ ರಿಸರ್ವ್ ಆಗಿರತಕ್ಕ ಜಮೀನಿನ ಬಗ್ಗೆ ರಿಲೀಸ್ ಮಾಡಲು ಏನಾದರೂ ಪಾಲಿಸಿ ಇಟ್ಟುಕೊಂಡಿದ್ದಾರೆಯೇ?

**ಅಧ್ಯಕ್ಷರು** – ಅದಕ್ಕೆ ಎಕ್ಸೈಸು ರೂಲ್ಸಿನಲ್ಲಿದೆ ಎಂದು ಆಗಲೇ ಉತ್ತರ ಹೇಳಿದರು.

**ಶ್ರೀ ಬಿ.ಎನ್. ಬೋರಣ್ಣಗೌಡ** – ಅಬಕಾರಿ ಅಧಿಕಾರಿಗಳು ಹೊಸ ಜಮೀನುಗಳನ್ನು ದುರುಪಯೋಗಪಡಿಸಿಕೊಳ್ಳುತ್ತಿರುವ ವಿಷಯ ಸರ್ಕಾರಕ್ಕೆ ತಿಳಿದಿದೆಯೇ?.

**ಶ್ರೀ ಮೊಹಮದ್ ಅಲಿ** – ಸರ್ಕಾರಕ್ಕೆ ಆ ಬಗ್ಗೆ ತಿಳಿದಿಲ್ಲ.

**ಶ್ರೀ ಎಚ್.ಎಂ.ಚನ್ನಬಸಪ್ಪ** – ಪಾನ ನಿರೋಧ ಯೋಜನೆಯನ್ನು ಸರ್ಕಾರ ಜಾರಿಗೆ ತಂದಾಗಿನಿಂದ ಜಮೀನುಗಳನ್ನು ವಿಲೇ ಮಾಡುವ ಪ್ರಸ್ತಾವ ಇದೆ ಎಂದು ಸಚಿವರು ಹೇಳಿದರು. ಈ ಜಮೀನುಗಳನ್ನು ವಿಲೇ ಮಾಡುವ ಪ್ರಸ್ತಾವದ ಬಗ್ಗೆ ಅಧಿಕಾರಿಗಳು ಕ್ರಮ ಪ್ರಾರಂಭಿಸಿದ್ದಾರೆಂದು ತಿಳಿಯಬಹುದೆ?

**ಮಾನ್ಯ ಸಭಾಧ್ಯಕ್ಷರು** – ಅಧಿಕಾರಿಗಳನ್ನೆ? ಅಥವಾ ಸರ್ಕಾರವನ್ನೆ? ಮಾನ್ಯ ಸದಸ್ಯರು ಯಾರ ಬಗ್ಗೆ ಕೇಳುತ್ತಿದ್ದಾರೆ?

**ಶ್ರೀ ಎಚ್.ಎಂ.ಚನ್ನಬಸಪ್ಪ** – ಅಧಿಕಾರಗಳನ್ನೇ? ಅಥವಾ ಸರ್ಕಾರವನ್ನೇ? ಇದನ್ನು ಕಾರ್ಯಗತಗೊಳಿಸಬೇಕು ಸ್ವಾಮಿ. ಬೇರೆ ಯಾರು ಮಾಡುತ್ತಾರೆ?

**ಮಾನ್ಯ ಸಭಾಧ್ಯಕ್ಷರು** – ಅಧಿಕಾರಿಗಳು ಮತ್ತು ಸರ್ಕಾರದನಡುವೆ ವ್ಯತ್ಯಾಸವಿದೆ ಎಂಬುದನ್ನು ನಾನು ತಿಳಿದುಕೊಳ್ಳಬೇಕಾಗಿದೆ.(ನಗು)

**ಶ್ರೀ ಮೊಹಮದ್ ಅಲಿ** – ಸರ್ಕಾರ ಈ ಬಗ್ಗೆ ಕ್ರಮ ತೆಗೆದುಕೊಂಡಿದೆ.

**ಶ್ರೀ ಎಚ್.ಎಂ.ಚನ್ನಬಸಪ್ಪ** – ಆ ಪ್ರಸ್ತಾವದಲ್ಲಿ ಬಿಡುಗಡೆ ಮಾಡಲು ಉದ್ದೇಶಿಸಿರುವ ಜಮೀನಿನ ವಿಸ್ತೀರ್ಣ ಎಷ್ಟು?

**ಶ್ರೀ ಮೊಹಮದ್ ಅಲಿ**–ಬಿಡುಗಡೆ ಮಾಡಬೇಕಾಗಿರುವ ಜಮೀನಿನ ವಿಸ್ತೀರ್ಣವನ್ನು ಸೂಚಿಸುವುದು ಕಂದಾಯ ಇಲಾಖೆಯ ಕೆಲಸ.

**ಶ್ರೀ ಯು.ಎಂ. ಮಾದಪ್ಪ** – ಕ್ರಿಯಾಲೋಪದ ಮೇಲೆ ಸ್ವಾಮಿ. ಪೂರಕ ಪ್ರಶ್ನೆಗಳು ಈ ನಿರ್ದಿಷ್ಟ ತಾಲೂಕಿಗೆ ಸಂಬಂಧಪಡುತ್ತವೆಯೇ? ಅಥವಾ ಇಡೀ ರಾಜ್ಯಕ್ಕೆ ಸಂಬಂಧಪಡುತ್ತವೆಯೇ, ಸ್ವಾಮಿ?

**ಮಾನ್ಯ ಸಭಾಧ್ಯಕ್ಷರು** – ಅವು ಚಿಕ್ಕನಾಯಕನಹಳ್ಳಿ ತಾಲೂಕಿಗೆ ಮಾತ್ರ ಸಂಬಂಧಪಡುತ್ತವೆ. ಇದು ಮೂಲ ಪ್ರಶ್ನೆಯ ಮುಖ್ಯ ವಿಷಯವಾಗಿದೆ.

**ಶ್ರೀ ಎಚ್.ಎಂ.ಚನ್ನಬಸಪ್ಪ** – ಅಬಕಾರಿ ಇಲಾಖೆ ನಿರ್ವಹಿಸುತ್ತಿರುವಂಥ ಪ್ರದೇಶಗಳಲ್ಲಿ ಈಚಲು, ತೆಂಗು ಮತ್ತು ತಾಳೆ ಮರಗಳಿರುವ ಪ್ರದೇಶಗಳನ್ನು ಬಿಡುಗಡೆ ಮಾಡುವುದಕ್ಕೆ ಸಂಬಂಧಿಸಿದಂತೆ ಪ್ರಸ್ತಾವಗಳನ್ನು ಕಳಿಸಬೇಕಾದದ್ದು ಅಬಕಾರಿ ಇಲಾಖೆಯೇ? ಅಥವಾ ಕಂದಾಯ ಇಲಾಖೆಯೇ?

**ಮಾನ್ಯ ಸಭಾಧ್ಯಕ್ಷರು** – ಕ್ರಿಯಾಲೋಪವನ್ನು ಈಗಷ್ಟೇ ಎತ್ತಲಾಗಿದೆ. ಪ್ರಶ್ನೆಯು ಚರ್ಚೆನಡೆಯುತ್ತಿರುವ ತಾಲ್ಲೂಕಿಗೆ ಸಂಬಂಧಪಡುತ್ತದೆ ಎಂದು ನಾನು ಭಾವಿಸುತ್ತೇನೆ.

**ಶ್ರೀ ಎಚ್.ಎಂ.ಚನ್ನಬಸಪ್ಪ** – ನನ್ನ ಪ್ರಶ್ನೆ ಈ ತಾಲ್ಲೂಕಿಗೆ ಸಂಬಂಧಪಡುತ್ತದೆ, ಸ್ವಾಮಿ. ಪ್ರಶ್ನೆಗೆ ನನ್ನನ್ನು ಸೀಮಿತಗೊಳಿಸಿಕೊಳ್ಳತ್ತೇನೆ ಎಂದು ಮಾನ್ಯ ಸಭಾಧ್ಯಕ್ಷರಿಗೆ ಭರವಸೆ ನೀಡುತ್ತೇನೆ.

**ಮಾನ್ಯ ಸಭಾಧ್ಯಕ್ಷರು** – ಪ್ರಶ್ನೆ ಅಂಥ ಅರ್ಥವನ್ನು ಕೊಡುವುದಿಲ್ಲ. ಉತ್ತರ ಕೊಡಬಹುದು.

**ಶ್ರೀ ಮೊಹಮದ್ ಅಲಿ** – ಮಾನ್ಯ ಸದಸ್ಯರು ದಯವಿಟ್ಟು ನಿಯಮಗಳನ್ನು ಉದ್ಧರಿಸಲಿ.

## ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿರುವ ಅಬಕಾರಿ ಕಾದಿಟ್ಟ ಜಮೀನುಗಳು

**ಶ್ರೀ ಸಿ.ಕೆ.ರಾಜಯ್ಯಶೆಟ್ಟಿ (ಚಿಕ್ಕನಾಯಕನಹಳ್ಳಿ)**– ಸರ್ಕಾರದವರು ದಯವಿಟ್ಟು ಇದನ್ನು ತಿಳಿಸುವರೇ –

(ಎ) ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿರುವ ಅಬಕಾರಿ ಕಾದಿಟ್ಟ ಜಮೀನುಗಳ ವಿಸ್ತೀರ್ಣ.

(ಬಿ) ಈಚಲು, ತೆಂಗು, ತಾಳೆ ಮರಗಳಿಲ್ಲದಂಥ ಕಾದಿಟ್ಟ ಜಮೀನುಗಳಾಗಿ ವರ್ಗೀಕರಿಸಿರುವಂಥ ಜಮೀನಿನ ವಿಸ್ತೀರ್ಣ.

(ಸಿ) ಅಂಥ ಜಮೀನುಗಳನ್ನು ಮೀಸಲು ಪಟ್ಟಿಯಿಂದ ಬಿಡುವಂಥ ಪ್ರಸ್ತಾವವೇನಾದರೂ ಇದೆಯೆ?

**ಶ್ರೀ ಮೊಹಮದ್ ಅಲಿ – (ಅಬಕಾರಿ ಮತ್ತು ಗ್ರಾಮೀಣ ಕೈಗಾರಿಕಾ ಸಚಿವರು)**

(ಎ) 34,371 ಎಕರೆ ಮತ್ತು 31 ಗುಂಟೆಗಳು.

(ಬಿ) ಮಾಹಿತಿ ಈ ಕ್ಷಣಕ್ಕೆ ಲಭ್ಯವಿಲ್ಲ.

(ಸಿ) ಹೌದು.

**ಶ್ರೀ ಸಿ.ಕೆ.ರಾಜಯ್ಯಶೆಟ್ಟಿ** – ಪ್ರಶ್ನೆ (ಸಿ)ಗೆ 'ಹೌದು' ಅಂತ ಹೇಳಿದ್ದೀರಿ. ಎಷ್ಟು ಎಕರೆ ತಿಳಿಸುತ್ತೀರಾ ಸ್ವಾಮಿ?

**ಶ್ರೀ ಮೊಹಮದ್ ಅಲಿ** – ವಿಸ್ತೀರ್ಣವನ್ನು ನಿಗದಿಪಡಿಸಿಲ್ಲ.

**ಶ್ರೀ ಸಿ.ಕೆ.ರಾಜಯ್ಯಶೆಟ್ಟಿ** – ಹಾಗಿದ್ದ ಮೇಲೆ ನೀವು ಬಿಡುಗಡೆ ಮಾಡಲು ಪರಿಗಣಿಸುತ್ತಿರುವ ಜಮೀನಿನ ವಿಸ್ತೀರ್ಣ ಎಷ್ಟು?

**ಶ್ರೀ ಮೊಹಮದ್ ಅಲಿ** – ಮೀಸಲು ಜಮೀನುಗಳನ್ನು ಬಿಡುಗಡೆ ಮಾಡುವುದಕ್ಕೆ ಸಂಬಂಧಿಸಿದ ನಿಯಮಗಳನ್ನು ಮೈಸೂರು ಅಬಕಾರಿ ಕೈಪಿಡಿ ಸಂಪುಟ 1, ನಿಯಮ ಸಂಖ್ಯೆ 70ರಲ್ಲಿ ಸೇರಿಸಲಾಗಿದೆ.

**ಶ್ರೀ ಸಿ.ಕೆ.ರಾಜಯ್ಯಶೆಟ್ಟಿ** – ಚಿಕ್ಕನಾಯಕನಹಳ್ಳಿ ಜನರಿಗೆ ಜಮೀನುಗಳನ್ನು ಬಿಡುಗಡೆ ಬಗ್ಗೆ ತಿಳಿಯುವಂತೆ ಮಾಡಲು ಸರ್ಕಾರವು ಬಿಡುಗಡೆ ಮಾಡಲಿರುವಂಥ ಜಮೀನುಗಳನ್ನು ಪ್ರಕಟಿಸುವುದು ಅವಶ್ಯವಲ್ಲವೆ?

**ಶ್ರೀ ಮೊಹಮದ್ ಅಲಿ** – ಅದು ಒಂದು ಸಲಹೆ. ಅದನ್ನು ಪರಿಗಣಿಸಲಾಗುವುದು.

**ಶ್ರೀ ಸಿ.ಕೆ.ರಾಜಯ್ಯಶೆಟ್ಟಿ** – ಪ್ರತಿಯೊಂದು ತಾಲ್ಲೂಕಿನ ತಾಲ್ಲೂಕು ಕಚೇರಿಯಲ್ಲಿ ಅಂಥ ಖಾಲಿ ಜಮೀನುಗಳನ್ನು ಪ್ರಕಟಿಸಬೇಕೆಂಬ ಬಗ್ಗೆ ಒಂದು ಸುತ್ತೋಲೆಯಿದೆಯಲ್ಲವೆ?

**ಶ್ರೀ ಮೊಹಮದ್ ಅಲಿ** – **ನನಗೆ ನೋಟೀಸು ಬೇಕಾಗಿದೆ.**

**ಶ್ರೀ ಜಿ.ಎನ್. ಪುಟ್ಟಣ್ಣ** – ಪ್ರಶ್ನೆ (ಸಿ) ಕಾದಿಟ್ಟ ಭೂಮಿಗಳ ಪಟ್ಟಿಯಿಂದ ಅಂಥ ಭೂಮಿಗಳನ್ನು ಬಿಡುಗಡೆ ಮಾಡಲು ಯಾವುದೊಂದು ಸೂಚನೆ ಇದೆಯೆ ಎಂಬುದಕ್ಕೆ ಉತ್ತರದಲ್ಲಿ ಹೌದು ಎಂದು ಇದೆ. ಹಾಗೆ ತಿಳಿಸಿದಲ್ಲಿ ರಿಲೀಜ್ ಮಾಡುತ್ತೀರಾ?

**ಶ್ರೀ ಮೊಹಮದ್ ಅಲಿ** – ಅದನ್ನು ಮೈಸೂರು ಅಬಕಾರಿ ಕೈಪಿಡಿ ನಿಯಮಗಳಲ್ಲಿ ಸೇರಿಸಲಾಗಿದೆ.

**ಶ್ರೀ ಜಿ.ಎನ್. ಪುಟ್ಟಣ್ಣ** – (ಸಿ) ಉತ್ತರದಲ್ಲಿ ಕಾದಿಟ್ಟ ಭೂಮಿಗಳ ಪಟ್ಟಿಯಿಂದ ಅಂಥ ಭೂಮಿಗಳನ್ನು ಬಿಡುಗಡೆ ಮಾಡಲು ಯಾವುದೊಂದು ಸೂಚನೆ ಇದೆ ಎಂದು ತಿಳಿಸಿದ್ದೀರೋ ಅದರಂತೆ ಯಾವಾಗ ಅಪ್ಪಣೆ ಕೊಡುತ್ತೀರಿ.

**ಶ್ರೀ ಮೊಹಮದ್ ಅಲಿ** – ಅಂಥ ಜಮೀನುಗಳನ್ನು ಬಿಡುಗಡೆ ಮಾಡಲು ನಿಯಮಗಳಿವೆ.

**ಶ್ರೀ ಜಿ.ಎನ್. ಪುಟ್ಟಣ್ಣ** – ಮರಗಳು ಇಲ್ಲದಿದ್ದರೆ ಜಮೀನುಗಳು ಹಾಳಾಗುತ್ತವೆ ಎನ್ನುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಮೊಹಮದ್ ಅಲಿ** – ಹೌದು, ಅಂಥ ಜಮೀನುಗಳನ್ನು ಬಿಡುಗಡೆ ಮಾಡಬಹುದಾಗಿದೆ.

**ಶ್ರೀ ಬಿ.ಎನ್. ಬೋರಣ್ಣಗೌಡ** – ಈಚಲು ಮರ ಬೆಳೆದಿರತಕ್ಕ ಪ್ರದೇಶದಲ್ಲಿ ತೆಂಗು ಉತ್ಕೃಷ್ಟವಾಗಿ ಬೆಳೆಯುವ ಜಮೀನು ಇರುವುದು ತಮ್ಮ ಅವಗಾಹನೆಗೆ ಬಂದಿದೆಯೇ?

**ಶ್ರೀ ಮೊಹಮದ್ ಅಲಿ** – ತೆಂಗಿನ ಮರಗಳನ್ನು ಬೆಳೆಯಲು ಆ ಜಮೀನುಗಳು ತುಂಬಾ ಉತ್ಕೃಷ್ಟವಾಗಿವೆ ಎಂಬುದು ಸಂಭವನೀಯ ಸಂಗತಿಯೆ?

**ಶ್ರೀ ಬಿ.ಎಂ. ಬೋರಣ್ಣಗೌಡ** – ಅಂಥ ಜಮೀನುಗಳನ್ನು ಬಿಡುಗಡೆ ಮಾಡಲು ಇರುವ ತೊಂದರೆಯೇನು?

**ಶ್ರೀ ಮೊಹಮದ್ ಅಲಿ** – ತೊಂದರೆಯೇನಿಲ್ಲ, ನಿರ್ದಿಷ್ಟಪಡಿಸಿದ ನಿಯಮಗಳ ಪ್ರಕಾರ ಭೂಮಿಗಳನ್ನು ಬಿಡುಗಡೆ ಮಾಡಲಾಗುತ್ತಿದೆ.

**ಶ್ರೀ ಬಿ.ಎಂ. ಬೋರಣ್ಣಗೌಡ** –ಇವುಗಳಲ್ಲಿ ಕೆಲವು ಭೂಮಿಗಳನ್ನು ಸರ್ಕಾರ ಯಾವಾಗ ಬಿಡುಗಡೆ ಮಾಡುತ್ತದೆ.

**ಶ್ರೀ ಮೊಹಮದ್ ಅಲಿ** – ಸಾರ್ವಜನಿಕರ ಪರವಾಗಿ ಅರ್ಜಿಗಳು ಬಂದಾಗ.

**ಶ್ರೀ ಸಿ.ಕೆ. ರಾಜಯ್ಯಶೆಟ್ಟಿ** – ಹಲವಾರು ಮನವಿಗಳು ಬಂದಿರುವುದು ಮತ್ತು ಅವುಗಳ ಬಗ್ಗೆ ವ್ಯವಹರಿಸುತ್ತಿರುವುದು ಸರ್ಕಾರಕ್ಕೆ ತಿಳಿದಿದೆಯೇ?

**ಶ್ರೀ ಸಿ.ಕೆ. ರಾಜಯ್ಯಶೆಟ್ಟಿ** – ಚಿಕ್ಕನಾಯಕನಹಳ್ಳಿ ಗುಡ್ಡಬೆಟ್ಟಗಳಿಂದ ಕೂಡಿದೆ. ಆದ್ದರಿಂದ ಈ ಹಳ್ಳಿಗಳ ಪೈಕಿ ಹಲವು ಹಳ್ಳಿಗಳಲ್ಲಿ ತುಂಬಾ ಕಡಿಮೆ ಜಮೀನುಗಳಿರುವುದು ಸರ್ಕಾರಕ್ಕೆ ತಿಳಿದಿದೆಯೆ?

**ಮಾನ್ಯ ಸಭಾಧ್ಯಕ್ಷರು** – ಅದು ಬೇರೆಯದೇ ಆದ ವಿಷಯ. ಅಬಕಾರಿ ಸಚಿವರಿಗೆ ಅದು ಹೇಗೆ ಗೊತ್ತಾಗಬೇಕು?

**ಶ್ರೀ ಎಚ್.ಎಂ. ಚನ್ನಬಸಪ್ಪ** – ಈ ಪ್ರಸ್ತಾವ ಎಷ್ಟು ಅವಧಿಯಿಂದ ಸರ್ಕಾರದ ಪರಿಗಣನೆಯಲ್ಲಿದೆ?

**ಶ್ರೀ ಮೊಹಮದ್ ಅಲಿ** – ನಾನು ಈ ಪ್ರಶ್ನೆಗೆ ಈಗಾಗಲೇ ಉತ್ತರ ನೀಡಿದ್ದೇನೆ. ಈ ಪ್ರಸ್ತಾವಗಳನ್ನು ಅಬಕಾರಿ ನಿಯಮಗಳಲ್ಲಿ ಸೇರಿಸಲಾಗಿದೆ.

**ಶ್ರೀ ಎಚ್.ಎಂ. ಚನ್ನಬಸಪ್ಪ** – ಈಚಲು, ತೆಂಗು ಮತ್ತು ತಾಳೆ ಮರಗಳಿಲ್ಲದಂಥ ಭೂಮಿಗಳನ್ನು ಬಿಡುಗಡೆ ಮಾಡುವಂಥ ಪ್ರಸ್ತಾವ ಪರಿಗಣನೆಯಲ್ಲಿದೆ ಎಂದು ತಿಳಿಸಲಾಗಿದೆ. ನಿಯಮಗಳಲ್ಲಿ ಅವುಗಳನ್ನು ಸೇರಿಸಲಾಗಿದೆ ಎಂದು ಮಾನ್ಯ ಸಚಿವರು ಹೇಳುತ್ತಾರೆ, ಆದರೆ ನಿಯಮಗಳಲ್ಲಿ ಅವು ಇಲ್ಲ. ಆದ್ದರಿಂದ ಆ ಪ್ರಸ್ತಾವ ಸರ್ಕಾರದ ಪರಿಗಣನೆಯಲ್ಲಿರುವುದು ಯಾವಾಗಿನಿಂದ ಎಂದು ಕೇಳಬಹುದೆ?

## ಕೆ.ಜಿ.ಎಫ್: ಪಾನ ನಿರೋಧ ನೀತಿ ಪುನರ್ ಪರಿಶೀಲನೆ

**ಶ್ರೀ ಎಂ.ಸಿ.ನರಸಿಂಹನ್ (ಕೆ.ಜಿ.ಎಫ್.)** – ಸರ್ಕಾರದವರು ದಯವಿಟ್ಟು ಇದನ್ನು ತಿಳಿಸುವರೇ?

ಎ. ಕೋಲಾರ ಚಿನ್ನದ ಗಣಿ ಪ್ರದೇಶದಲ್ಲಿ ವಿಚಿತ್ರ ಸ್ಥಿತಿ ಇರುವುದರಿಂದ ಪಾನನಿರೋಧ ನೀತಿಯನ್ನು ಪುನರ್ ಪರಿಶೀಲಿಸಲು ಸರ್ಕಾರ ಉದ್ದೇಶಿಸಿದೆಯೇ?

ಬಿ. ಕೆ.ಜಿ.ಎಫ್.ನಲ್ಲಿ ' ನೀರಾ' ವನ್ನು ಪರಿಚಯಿಸಲು ಪರ್ಮಿಟ್ ನೀಡುವುದಕ್ಕೆ ನೀವು ಉದ್ದೇಶಿದ್ದೀರಾ?

ಸಿ. ಪಾನನಿರೋಧವನ್ನು ಅಮಲ್ಜಾರಿಗೊಳಿಸುವುದೆಂದರೆ, ಸ್ವಾಭಾವಿಕ ಗುಣರಹಿತ ಸ್ಪಿರಿಟ್‌ಗಳ ಮತ್ತು ಆ ಪ್ರದೇಶದಲ್ಲಿ ಆರೋಗ್ಯ ತೀವ್ರವಾಗಿ ಕ್ಷೀಣಿಸುವುದಕ್ಕೆ ಅವಕಾಶ ಮಾಡಿಕೊಡುವಂಥ ಅನಾರೋಗ್ಯಕರ ಮದ್ಯಗಳ ಅಕ್ರಮ ಬಳಕೆ ಎಂಬುದು ನಿಮಗೆ ತಿಳಿದಿದೆಯೆ?

**ಶ್ರೀ ಮೊಹಮದ್ ಅಲಿ – (ಅಬಕಾರಿ ಮತ್ತು ಗ್ರಾಮೀಣ ಕೈಗಾರಿಕಾ ಸಚಿವರು)**

ಎ. ಇಲ್ಲ

ಬಿ. ಈ ವಿಷಯ ಸರ್ಕಾರದ ಪರಿಶೀಲನೆಯಲ್ಲಿದೆ.

ಸಿ. ಇಲ್ಲ.

## ಕೋಲಾರದಲ್ಲಿ ಪಾನನಿರೋಧ ಪ್ರಕರಣಗಳು

**ಶ್ರೀ ಡಿ. ಅಬ್ದುಲ್ ರಷೀದ್ (ಕೋಲಾರ)**: ಸರ್ಕಾರದವರು ದಯವಿಟ್ಟು ಇದನ್ನು ತಿಳಿಸುವರೇ?

ಎ. ಕೋಲಾರ ಜಿಲ್ಲೆಯ ಪಾನನಿರೋಧ ಸಿಬ್ಬಂದಿ 1956–57ರಲ್ಲಿ ಪತ್ತೆ ಹಚ್ಚಿದ ಪಾನ ನಿರೋಧ ಅಪರಾಧಗಳ ಸಂಖ್ಯೆ.

ಬಿ. ಕೋಲಾರ ಜಿಲ್ಲೆಯ ವಿವಿಧ ತಾಲ್ಲೂಕುಗಳಿಗೆ ಹಂಚಿಕೆ ಮಾಡಿರುವ ಪಾನನಿರೋಧ ಸಿಬ್ಬಂದಿಯ ಸಂಖ್ಯೆ.

ಸಿ. ಕೋಲಾರ ಜಿಲ್ಲೆಯಲ್ಲಿ ಪಾನನಿರೋಧ ಕಾರ್ಯ ತುಂಬಾ ನಿಧಾನವಾಗಿದೆ ಮತ್ತು ಅಕ್ರಮವಾಗಿ ಮದ್ಯ ಭಟ್ಟಿ ಇಳಿಸುವ ಕೆಲಸ ಜಿಲ್ಲೆಯಲ್ಲಿ ಹೆಚ್ಚುತ್ತಿದೆ ಎಂಬುದು ತಮ್ಮ ಗಮನಕ್ಕೆ ಬಂದಿದೆಯೆ?

**ಶ್ರೀ ಮೊಹಮದ್ ಅಲಿ – (ಅಬಕಾರಿ ಮತ್ತು ಗ್ರಾಮೀಣ ಕೈಗಾರಿಕಾ ಸಚಿವರು)**

ಎ. **1,787**

ಬಿ. –

ಸಿ. ಇಲ್ಲ.

**ಡಾ. ಆರ್. ನಾಗನಗೌಡ** – ಈ ಗ್ರಾಮಗಳಲ್ಲಿರುವ ಈ ಕೆಲಸಗಾರರನ್ನು ಸಹಕಾರ ಸಂಘಗಳಾಗಿ ಸಂಘಟಿಸಲು ಸಹಕಾರ ಇಲಾಖೆಯಿಂದ ಒಬ್ಬ ಅಧಿಕಾರಿಯನ್ನು ಸರ್ಕಾರ ಪ್ರತಿನಿಯೋಜಿಸುತ್ತಿದೆಯೆ?

**ಶ್ರೀ ಮೊಹಮದ್ ಅಲಿ** – ಕೈಗಾರಿಕಾ ಇಲಾಖೆಯು ಚರ್ಮ ಹದ ಮಾಡುವ ಕಾರ್ಯ ಕೈಗೊಳ್ಳಲು ಸಹಕಾರ ಸಂಘಗಳನ್ನು ಸಂಘಟಿಸುತ್ತಿದೆ.

**ಡಾ. ಆರ್. ನಾಗನಗೌಡ** – ನಾನು ಚರ್ಮ ಹದ ಮಾಡುವ ವಿಷಯ ಮಾತನಾಡುತ್ತಿಲ್ಲ. ಚಕ್ಕೆಯನ್ನು ಸಂಗ್ರಹಿಸಿ, ಅದನ್ನು ಒಣಗಿಸುವ ಬಗ್ಗೆ ಮಾತನಾಡುತ್ತಿದ್ದೇನೆ. ಚಿತ್ರದುರ್ಗ ಜಿಲ್ಲೆಯಲ್ಲಿ ಅದು ಸ್ವತ: ಅತ್ಯಂತ ದೊಡ್ಡ ಕೈಗಾರಿಕೆಗಳಲ್ಲೊಂದಾದ ಕೈಗಾರಿಕೆ.

**ಸನ್ಮಾನ್ಯ ಸಭಾಧ್ಯಕ್ಷರು** – ಸರ್ಕಾರದವರು ಅದನ್ನು ಒಪ್ಪುವುದಿಲ್ಲ. ಅದು ಕೈಗಾರಿಕೆಯಲ್ಲ ಅಂತ ಅವರು ಹೇಳುತ್ತಾರೆ. ಅದೊಂದು ವೃತ್ತಿ ಇರಬಹುದು.

**ಶ್ರೀ ಸಿ.ಕೆ. ರಾಜಯ್ಯ ಶೆಟ್ಟಿ** – ಅದೊಂದು ವೃತ್ತಿಯೇ ಆಗಿದ್ದರೆ, ಆ ಕೈಗಾರಿಕೆಯಲ್ಲಿ ಅದೊಂದು ವೃತ್ತಿಯಾಗುವುದಿಲ್ಲವೆ?

**ಸನ್ಮಾನ್ಯ ಸಭಾಧ್ಯಕ್ಷರು** – ಅದು ಅಭಿಪ್ರಾಯದ ವಿಷಯ.

**ಶ್ರೀ ವೈ. ವೀರಪ್ಪ** – ತಂಗಡಿ ಚಕ್ಕೆಯನ್ನು ಯಾವ ಉದ್ದೇಶಕ್ಕೆ ಬಳಸುತ್ತಾರೆ?

**ಸನ್ಮಾನ್ಯ ಸಭಾಧ್ಯಕ್ಷರು** – ಅದು ಸಂಬಂಧಪಡದ ಭಿನ್ನವಾದ ಪ್ರಶ್ನೆ.

**ಶ್ರೀ ವೈ. ವೀರಪ್ಪ** – ಯಾವ ಮರದಿಂದ ಈ ಚಕ್ಕೆಯನ್ನು ತೆಗೆಯುತ್ತಾರೆ ಸ್ವಾಮಿ?

**ಸನ್ಮಾನ್ಯ ಸಭಾಧ್ಯಕ್ಷರು** – ತಂಗಡಿ ಮರಗಳಿಂದಲೇ.

**ಶ್ರೀ ವೈ. ವೀರಪ್ಪ** –ನಮ್ಮ ರಾಜ್ಯದಲ್ಲಿ ಈ ಮರಗಳು ಹೇರಳವಾಗಿವೆಯೇ? ಇದ್ದರೆ, ಯಾವ ಪ್ರದೇಶದಲ್ಲಿವೆ?

**ಶ್ರೀ ಮೊಹಮದ್ ಅಲಿ** – ಹೊಸ ರಾಜ್ಯದ ಬಹುತೇಕ ಪ್ರದೇಶಗಳಲ್ಲಿ ಅವು ಇವೆ. ಈ ಮರಗಳನ್ನು ಅರಣ್ಯ ಇಲಾಖೆಯ ನಿಯಮಗಳ ಅಡಿಯಲ್ಲಿ ಕ್ರಮಬದ್ಧಗೊಳಿಸಲಾಗಿದ್ದು, ಪ್ರತಿ ವರ್ಷ ಅವುಗಳನ್ನು ಹರಾಜು ಮಾಡಲಾಗುತ್ತದೆ.

**ಶ್ರೀ ಎಂ. ಲಿಂಗೇಗೌಡ** – ತಂಗಡಿ ಚಕ್ಕೆಯನ್ನು ಸರ್ಕಾರದವರು ರೂಢಿಸಿರುವುದರಲ್ಲಿ ಅವರು ಕಂಟ್ರಾಕ್ಟರುಗಳಿಗೆ ಗುತ್ತಿಗೆ ಕೊಟ್ಟಿರುವುದರಿಂದ ಇದನ್ನು ರೂಢಿಸುವುದಕ್ಕೆ ಸಾಧ್ಯವಿಲ್ಲ ಎನ್ನುವುದು ತಮಗೆ ಗೊತ್ತಿದೆಯೇ?

**ಶ್ರೀ ಮೊಹಮದ್ ಅಲಿ** – ಇದು ಅಭಿಪ್ರಾಯದ ವಿಷಯ.

**ಶ್ರೀ ಜಿ. ಶಿವಪ್ಪ** – ಈ ಚಕ್ಕೆಯ ವ್ಯವಸ್ಥೆಯಲ್ಲಿ ಕೆಲಸ ಮಾಡುವವರಿಗೆ ಮಧ್ಯಸ್ಥಗಾರರಿಂದ ಹಣ ನೇರವಾಗಿ ಹೋಗುತ್ತಿರುವುದನ್ನು ತಪ್ಪಿಸಲು ಯಾವುದಾದರೂ ಕ್ರಮಗಳನ್ನು ಇಟ್ಟುಕೊಂಡಿದ್ದಾರೆಯೇ?

**ಶ್ರೀ ಮೊಹಮದ್ ಅಲಿ** – ಈ ಹರಿಜನರಿಗೆ ಕೆಲವು ರಿಯಾಯಿತಿಗಳನ್ನು ನೀಡಲು, ಅರಣ್ಯ ಇಲಾಖೆಗೆ ಮನವಿ ಮಾಡುವ ಬಗ್ಗೆ ಕೈಗಾರಿಕಾ ಇಲಾಖೆಯು ಪರಿಶೀಲಿಸುತ್ತಿದೆ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ** – ಈ ಚಕ್ಕೆ ಕಂಟ್ರಾಕ್ಟನ್ನು ಜಮೀನು ಕಾಣಿ ಇಲ್ಲದ ಹರಿಜನರಿಗೆ ಕೆಲಸವನ್ನು ಒದಗಿಸುವುದಕ್ಕಾಗಿ ಚಿತ್ರದುರ್ಗದಲ್ಲಿ ಸಹಕಾರ ಪದ್ಧತಿಯ ಮೇಲೆ ಅವರಿಗೆ ಕಂಟ್ರಾಕ್ಟನ್ನು ಗುತ್ತಿಗೆಗೆ ಕೊಡಲಾಗಿದೆಯೇ?

**ಶ್ರೀ ಮೊಹಮದ್ ಅಲಿ** – ನನಗೆ ನೋಟೀಸ್ ಬೇಕು. ನನಗೆ ಗೊತ್ತಿಲ್ಲ.

**ಶ್ರೀ ಟಿ. ಹನುಮಯ್ಯ** – ಈ ಚಕ್ಕೆಯನ್ನು ತೆಗೆಯುವುದು ಕೈಗಾರಿಕೆಯಲ್ಲ ಎಂದು ಇಂಡಸ್ಟ್ರಿಯಲ್ ಎಕ್ಸ್‌ಪರ್ಟ್‌ಗಳೇನಾದರೂ ಹೇಳಿದ್ದಾರೇನು?

**ಶ್ರೀ ಮೊಹಮದ್ ಅಲಿ** – ಆ ಮಾಹಿತಿ ಸದ್ಯಕ್ಕೆ ನನ್ನ ಬಳಿ ಇಲ್ಲ.

**ಶ್ರೀ ಟಿ. ಹನುಮಯ್ಯ** – ಸಾಧಾರಣವಾಗಿ ಈ ಜನಗಳು ಈ ಚಕ್ಕೆಯ ಕೆಲಸವನ್ನು ಕೈಯಲ್ಲಿಯೇ ಮಾಡುವುದರಿಂದ ಇದನ್ನು ಹೋಂ ಇಂಡಸ್ಟ್ರಿ ಎಂದು ಸರಕಾರ ಗಮನಕ್ಕೆ ತೆಗೆದುಕೊಳ್ಳುತ್ತದೆಯೇ?

**ಶ್ರೀ ಮೊಹಮದ್ ಅಲಿ** – ಗುಡಿಕೈಗಾರಿಕೆ ಸಂವರ್ಧನೆಗೆ ಇದು ಬಹುಮುಖ್ಯವಾದ ಕಚ್ಚಾ ಸಾಮಗ್ರಿ.

**ಶ್ರೀ ಟಿ. ಹನುಮಯ್ಯ** – ಮಧ್ಯಸ್ಥಗಾರರ ತೊಂದರೆಗಳಿಂದ ಈ ಹರಿಜನರಿಗೆ ಒಂದು ಕಾಸೂ ಸಿಕ್ಕುವುದಿಲ್ಲ. ಆದುದರಿಂದ ಇದನ್ನು ಕೊಡಿಸಲು ಸರಿಯಾದ ವ್ಯವಸ್ಥೆಯನ್ನು ಸರಕಾರದವರು ಮಾಡಲು ಏನಾದರೂ ಯೋಚನೆ ಮಾಡಿದ್ದಾರೆಯೇ?

**ಶ್ರೀ ಮೊಹಮದ್ ಅಲಿ** – ಹರಿಜನರಿಗೆ ಕೆಲವು ರಿಯಾಯಿತಿಗಳನ್ನು ತೋರಿಸುವಂತೆ ಅರಣ್ಯ ಇಲಾಖೆಯನ್ನು ಕೋರಲು, ಕೈಗಾರಿಕಾ ಇಲಾಖೆ ಚಿಂತನೆನಡೆಸುತ್ತಿದೆ ಎಂದು ನಾನು ಈಗಷ್ಟೇ ಉತ್ತರಿಸಿದೆ.

**ಶ್ರೀ ಟಿ. ಹನುಮಯ್ಯ** – ನಾನು ರಿಯಾಯಿತಿಗಳ ಬಗ್ಗೆ ಕೇಳಲಿಲ್ಲ. ನಾವು ರಿಯಾಯಿತಿಗಳನ್ನು ಪಡೆಯುತ್ತಿಲ್ಲ. ಇಲ್ಲಿ ಈ ಕೆಲಸವನ್ನು ಈ ಜನಗಳು ಕೈಯಲ್ಲಿಯೇ ಮಾಡುತ್ತಿರುವುದರಿಂದ ಮಧ್ಯಸ್ತಿಕೆಆರರಿಂದ ಇವರಿಗೆ ದುಡ್ಡು ಸಿಕ್ಕುವುದರಲ್ಲಿ ತೊಂದರೆಯಾಗಿದೆ ಎನ್ನುವುದನ್ನು ಸರ್ಕಾರದವರು ಯೋಚನೆ ಮಾಡಿದ್ದಾರೆಯೇ?

**ಶ್ರೀ ಮೊಹಮದ್ ಅಲಿ** – ಈ ವಿಷಯ ಅರಣ್ಯ ಇಲಾಖೆಗೆ ಸಂಬಂಧಿಸಿದ್ದು.

**ಶ್ರೀ ಟಿ. ಹನುಮಯ್ಯ** – ಈ ವಿಷಯ ಅರಣ್ಯ ಇಲಾಖೆಗೆ ಸಂಬಂಧಿಸಿದ್ದು ಎನ್ನುವುದುನಮಗೂ ಗೊತ್ತಿದೆ. ಇದು ಉತ್ತರವಲ್ಲ. ಬಹಳ ದಿನಗಳಿಂದಲೇ ಈ ಮಧ್ಯಸ್ತಿಕೆದಾರರಿಂದ ಬಹಳ ಅನ್ಯಾಯವಾಗುತ್ತಿದೆ. ಆದುದರಿಂದ ಇದನ್ನು ತಪ್ಪಿಸುವುದಕ್ಕೆ ಸರ್ಕಾರದವರು ಯೋಚನೆ ಮಾಡುತ್ತಾರೆಯೇ?

**ಅಧ್ಯಕ್ಷರು** – ಅರಣ್ಯ ಇಲಾಖೆಗೆ ಸೇರಿದೆ, ಅವರು ವಿಚ್ಛಾರ ಮಾಡುತ್ತಾರೆಂದು ಹೇಳಿದ್ದಾರೆ.

**ಶ್ರೀ ಸಿ.ಕೆ. ರಾಜಯ್ಯ ಶೆಟ್ಟಿ** – ಸರ್ಕಾರವು ಮಧ್ಯವರ್ತಿಗಳಾಗಿರುವ ಗುತ್ತಿಗೆದಾರರನ್ನು ನಿವಾರಿಸಿ, ಈ ಕೈಗಾರಿಕೆಯನ್ನು ಸಹಕಾರ ತತ್ವದ ಆಧಾರದ ಮೇಲೆ ಸಂಘಟಿಸಲು, ಚಿಂತಿಸುತ್ತಿದೆಯೇ?

**ಶ್ರೀ ಮೊಹಮದ್ ಅಲಿ** – ನಾನು ಈ ಪ್ರಶ್ನೆಗೆ ಈಗಾಗಲೇ ಉತ್ತರ ಕೊಟ್ಟಿದ್ದೇನೆ.

**ಶ್ರೀ ಸಿ. ಮುಕ್ಕಣ್ಣಪ್ಪ** – ಈ ಕಚ್ಚಾ ಸಾಮಗ್ರಿಯನ್ನು ಉತ್ಪಾದಿಸುವ ಕಾರ್ಯದಲ್ಲಿ ಎಷ್ಟು ಹರಿಜನ ಪುರುಷರು ಮತ್ತು ಮಹಿಳೆಯರು ತೊಡಗಿದ್ದಾರೆ?

**ಶ್ರೀ ಮೊಹಮದ್ ಅಲಿ** – ಸಂಖ್ಯೆ ನೀಡುವುದು ಕಷ್ಟ.

# ಅಧ್ಯಾಯ – 2

## ಗುಲ್ಬರ್ಗ ಡಿಪೋದಿಂದ ಬಸ್ಸುಗಳ ಓಡಾಟ

**ಮಂಗಳವಾರ 11ನೇ ಮಾರ್ಚ್, 1969**

**ಶ್ರೀ ಡಿ.ಬಿ.ಕಲ್ಮಣ್ ಕರ್ (ಅಳಂದ)**ಸಾರಿಗೆ ಮಂತ್ರಿಯವರು ದಯವಿಟ್ಟು ಇದನ್ನು ತಿಳಿಸುವರೇ:

ಎ) ಗುಲ್ಬರ್ಗ ಡಿಪೋದಿಂದ ಪ್ರತಿನಿತ್ಯ ಓಡಾಡುತ್ತಿರುವ ಬಸ್ಸುಗಳ ಸಂಖ್ಯೆ; ಆ ಪೈಕಿ ಕಳೆದ ಒಂದು ತಿಂಗಳಲ್ಲಿ ಸರಾಸರಿ ತಡವಾಗಿ ಓಡಿದ ಬಸ್ಸುಗಳ ಸಂಖ್ಯೆ;

ಬಿ) ಅದಕ್ಕೆ ಕಾರಣಗಳು;

ಸಿ) ಬಿಡಿ ಭಾಗಗಳನ್ನು ಮತ್ತು ಉಪಕರಣಗಳನ್ನು ಪೂರೈಸದಿರುವುದರಿಂದ ಹಾಗೂ ಉಸ್ತುವಾರಿಯ ತೀವ್ರ ಕೊರತೆಯಿಂದಾಗಿ ಬಹುತೇಕ ಬಸ್ಸುಗಳು ಯಾಂತ್ರಿಕವಾಗಿ ದುಸ್ಥಿತಿಯಲ್ಲಿರುವ ವಿಷಯ ನಿಮಗೆ ತಿಳಿದಿದೆಯೆ;

ಡಿ) ಷೆಡ್ಯೂಲ್‌ಗಳ ಸಂಖ್ಯೆಗೆ ಅಗತ್ಯವಾಗಿರುವುದಕ್ಕಿಂತಲೂ ತುಂಬಾ ಕಡಿಮೆ ಬಸ್ಸುಗಳನ್ನು ಪೂರೈಸಲಾಗುತ್ತಿದೆಯೆ? ಹಾಗಿದ್ದರೆ, ಅಂತರವನ್ನು ತುಂಬಲು ಎಷ್ಟು ಬಸ್ಸುಗಳು ಬೇಕಾಗುತ್ತವೆ;

ಇ) ಈ ಗುಲ್ಬರ್ಗ ಡಿಪೋದಲ್ಲಿ ಸಾಕಷ್ಟು ಮೆಕ್ಯಾನಿಕ್‌ಗಳು ಮತ್ತು ಹೆಲ್ಪರ್‌ಗಳು ಇಲ್ಲದಿರುವುದರಿಂದಾಗಿ ಬಸ್ಸುಗಳು ರಸ್ತೆಗಳಲ್ಲಿ ಕೆಟ್ಟುನಿಲ್ಲುತ್ತವೆ ಹಾಗೂ ಅಪಘಾತಗಳಿಗೆ ಒಳಗಾಗುತ್ತವೆ. ಇದರಿಂದ ಪ್ರಯಾಣಿಕರಿಗೆ ಅನಾನುಕೂಲ ಮತ್ತು ವಿಳಂಬವುಂಟಾಗುತ್ತಿದೆಯೇ;

ಎಫ್) ಪ್ರಯಾಣಿಸುವ ಸಾರ್ವಜನಿಕರ ಹಿತದೃಷ್ಟಿಯಿಂದ ಗುಲ್ಬರ್ಗ ಬಸ್ ಡಿಪೋನಲ್ಲಿನ ಅವ್ಯವಸ್ಥೆಗಳನ್ನು ಸರಿಪಡಿಸಲು ಎಂಎಸ್‌ಆರ್‌ಟಿಸಿ ಕೈಗೊಳ್ಳಲು ಉದ್ದೇಶಿಸಿರುವ ಕ್ರಮಗಳು;

ಜಿ. ಗುಲ್ಬರ್ಗ ಡಿಪೋಗೆ ಯಾವುದೇ ಹೊಸ ಬಸ್ಸುಗಳನ್ನು ಒದಗಿಸಿಲ್ಲ ಎಂಬುದು ವಾಸ್ತವ ಸಂಗತಿಯಲ್ಲವೆ; ಹಾಗಿದ್ದರೆ, ಈಗಿರುವ ಹಳೆ ಬಸ್ಸುಗಳನ್ನು ಬದಲಾಯಿಸಲು ಎಂಎಸ್ ಆರ್ ಟಿ ಸಿ ಕೈಗೊಳ್ಳಲು ಉದ್ದೇಶಿಸಿರುವ ಕ್ರಮ ಯಾವುದು?

ಒಬ್ಬ ಅಧಿಕಾರಿ ಬೀದರ್‌ನಿಂದ ರಾಯಚೂರಿಗೆ ಬಂದ. ಈಗ ಆತನನ್ನು ಸಾರಿಗೆ ಆಯುಕ್ತರ ಕಛೇರಿಗೆ ಕರೆಸಿಕೊಂಡಿರುವಂತೆ ಮತ್ತು ಆತ ಮತ್ತೊಂದು ಬಡ್ತಿಯನ್ನು ನಿರೀಕ್ಷಿಸುತ್ತಿರುವಂತೆ

ತೋರುತ್ತದೆ. ಇದು ಸಾರಿಗೆ ಇಲಾಖೆಯ ವ್ಯವಹಾರಗಳ ದಯನೀಯ ಸ್ಥಿತಿ. ಅಸಮರ್ಥರು, ಕೆಲಸಕ್ಕೆ ಬಾರದ ಅಧಿಕಾರಿಗಳು ಬಡ್ತಿ ಹೊಂದುತ್ತಿದ್ದಾರೆ. ನಾವು ಎತ್ತ ಸಾಗಿದ್ದೇವೆ ಎಂಬುದು ನನಗೆ ತಿಳಿಯುತ್ತಿಲ್ಲ.

ತರುವಾಯ, ಲೆವಿ ಸಂಗ್ರಹಿಸುವ ಸಂಬಂಧ ಬೀದರ್‌ನ ಬಡ ರೈತರ ಮೇಲೆ ಆಹಾರ ಇಲಾಖೆ ಸಿಬ್ಬಂದಿ ಎಸಗುತ್ತಿರುವ ದೌರ್ಜನ್ಯಗಳನ್ನು ನಿಲ್ಲಿಸುವಂತೆ ಆಹಾರ ಸಚಿವರನ್ನು ನಾನು ಕೋರುತ್ತೇನೆ. ಒಂದು ಉದಾಹರಣೆ ಕೊಡುವುದಾದರೆ ಶಂಕರ್‌ರಾವ್ ಎಂಬ ಒಬ್ಬ ಮುಖ್ಯ ಪೇದೆ ಬಡ ಮತ್ತು ಅನಕ್ಷರಸ್ಥ ರೈತರಿಗೆ ಕಿರುಕುಳ ನೀಡುತ್ತಿದ್ದಾನೆ. ಆತನ ಅತಿ ದುಷ್ಟ ಚಟುವಟಿಕೆಗಳನ್ನು ಆಹಾರ ಸಚಿವರ ಗಮನಕ್ಕೆ ನಾವು ತಂದಿದ್ದೇವೆ. ಪ್ರಾಯಶಃ ಆತ ಒಬ್ಬ ಪೋಲೀಸ್ ಪೇದೆಯಾಗಿರುವುದರಿಂದ ಮತ್ತು ಬೇರೊಂದು ಇಲಾಖೆಗೆ ಸೇರಿದವನಾಗಿರುವುದರಿಂದ ಸಚಿವರು ಆತನ ವಿರುದ್ಧ ಕ್ರಮ ಕೈಗೊಂಡಿಲ್ಲ. ನಾವು ಗೃಹ ಖಾತೆಯ ಮಾನ್ಯ ಉಪ ಮಂತ್ರಿಯವರಿಗೂ ತಿಳಿಸಿದ್ದೇವೆ.ನಮ್ಮ ದೂರಿನ ಮೇಲೆ ಅವರು ಯಾವ ಕ್ರಮ ಕೈಗೊಂಡಿರುವರೆಂಬುದುನಮಗೆ ಗೊತ್ತಿಲ್ಲ. ಈ ಮುಖ್ಯಪೇದೆ ಒಬ್ಬ ಜೂಜುಕೋರ ಅವನಿಗೆ ಹಣ ಬೇಕೆನಿಸಿದಾಗಲೆಲ್ಲಾ ಹಳ್ಳಿಗಳಿಗೆ ಹೋಗಿ ಲೆವಿಯನ್ನು ನೀಡಿದ್ದು, ಘೋಷಣೆಯನ್ನು ಸಲ್ಲಿಸದಿರುವ ಕೆಲವು ಗ್ರಾಮಸ್ಥರನ್ನು ಹಿಡಿಯುತ್ತಾನೆ.ನಮ್ಮ ರೈತರು ವಿದ್ಯಾವಂತರಲ್ಲ ಎಂಬುದು ನಿಮಗೆ ತಿಳಿದಿದೆ. ಅವರು ಅನಕ್ಷರಸ್ಥರು. ದಾಸ್ತಾನು ಮುಂತಾದವುಗಳ ಘೋಷಣೆಯನ್ನು ಸಲ್ಲಿಸುವುದಿಲ್ಲ. ಈ ಮುಖ್ಯಪೇದೆ ಗ್ರಾಮಸ್ಥರ ಈ ಅಜ್ಞಾನದ ಪ್ರಯೋಜನವನ್ನು ಪಡೆದು, ಘೋಷಣೆಯನ್ನು ಸಲ್ಲಿಸದಿರುವುದಕ್ಕಾಗಿ, ಬಡರೈತರ ವಿರುದ್ಧ ಮೊಕದ್ದಮೆಗಳನ್ನು ದಾಖಲಿಸುವುದಾಗಿ ಹೆದರಿಸುತ್ತಾನೆ. ಹೀಗೆ ಅವನು ತನ್ನ ಸ್ಥಾನವನ್ನು ದುರುಪಯೋಗಪಡಿಸಿಕೊಂಡು, ಗ್ರಾಮಸ್ಥರಿಗೆ ಕಿರುಕುಳ ನೀಡಿ, ಅವರಿಂದ ಹಣ ಸುಲಿಗೆ ಮಾಡುತ್ತಿದ್ದಾನೆ. ಈ ವಿಷಯದಲ್ಲಿ ತುರ್ತಾಗಿ ಕ್ರಮ ಕೈಗೊಳ್ಳುವಂತೆ ಮತ್ತು ಈ ಮುಖ್ಯಪೇದೆ ನೀಡುತ್ತಿರುವ ಕಿರುಕುಳದಿಂದ ಬಡರೈತರಿಗೆ ಮುಕ್ತಿ ದೊರೆಯುವಂತೆ ನೋಡಿಕೊಳ್ಳಬೇಕೆಂದು ಸಂಬಂಧಪಟ್ಟ ಸಚಿವರ ಗಮನವನ್ನು ಶ್ರದ್ಧಾಪೂರ್ವಕವಾಗಿ ಸೆಳೆಯುತ್ತೇನೆ. ಕೊನೆಯದಾಗಿ, ಮಾತನಾಡಲು ನನಗೆ ಈ ಅವಕಾಶ ನೀಡಿದ ಅಧ್ಯಕ್ಷರಿಗೆ ನಾನು ಕೃತಜ್ಞತೆ ಸಲ್ಲಿಸುತ್ತೇನೆ.

**ಶ್ರೀ ಮೊಹಮದ್ ಅಲಿ** – (ಸಾರಿಗೆ ಸಚಿವರು) – ಸ್ವಾಮಿ, ನಾನು ಮೋಟಾರು ವಾಹನ ಇಲಾಖೆಗೆ ಸಂಬಂಧಿಸಿದ ಬೇಡಿಕೆ ಸಂಖ್ಯೆ 4ನ್ನು ಮಂಡಿಸಿದ್ದೇನೆ. ಅಮೂಲ್ಯವಾದ ಸಲಹೆಗಳನ್ನು ನೀಡಿದ್ದಕ್ಕಾಗಿ ಮಾನ್ಯ ಸದಸ್ಯರಿಗೆ ನಾನು ನಿಜವಾಗಿ ಆಭಾರಿಯಾಗಿದ್ದೇನೆ.

ಮುಖ್ಯವಾಗಿ, ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಬಸ್ಸುಗಳಲ್ಲಿ ಸಂಚರಿಸುವ ಪ್ರಯಾಣಿಕರು ಎದುರಿಸುತ್ತಿರುವ ಕೆಲವು ತೊಂದರೆಗಳನ್ನು ಮಾನ್ಯ ಸದಸ್ಯರು ತಮ್ಮ ಚರ್ಚೆಗಳಲ್ಲಿ ಸರ್ಕಾರದ ಗಮನಕ್ಕೆ ತಂದಿದ್ದಾರೆ. ಅದೇ ಸಂದರ್ಭದಲ್ಲಿ ಮಾನ್ಯ ಸದಸ್ಯರೊಬ್ಬರು ನೀಡಿದ ಪರೋಕ್ಷ ಸೂಚನೆಯ ಬಗ್ಗೆ ನನಗೆ ನೋವಾಗಿದೆ. ಪ್ರಾಯಶ: ಸರಿಯಾದ ಮಾಹಿತಿ ಅವರಿಗೆ ಪೂರ್ಣವಾಗಿ ದೊರೆತಂತಿಲ್ಲ.

ಮೋಟಾರು ವಾಹನ ಇಲಾಖೆಗೆ ಸಂಬಂಧಪಟ್ಟಂತೆ ಹೇಳುವುದಾದರೆ ಇದು ರಾಜ್ಯದಲ್ಲಿನ ಆದಾಯಗಳಿಸುವ ಪ್ರಮುಖ ಇಲಾಖೆಗಳಲ್ಲೊಂದು, 1958 – 59ನೇ ಸಾಲಿನಲ್ಲಿ ಮೋಟಾರು ವಾಹನಗಳ ಮೇಲೆ ತೆರಿಗೆ ವಿಧಿಸಿದ್ದರಿಂದ ಸರ್ಕಾರದ ಬೊಕ್ಕಸಕ್ಕೆ ಪ್ರಾಪ್ತವಾದ ಆದಾಯ 2,58,00,000 ರೂಪಾಯಿಗಳಷ್ಟು. 1966 ಮತ್ತು 1967ರಲ್ಲಿ ಈ ಆದಾಯ 7 ಕೋಟಿ ರೂಪಾಯಿಗಳಿಗೆ ಹೆಚ್ಚಿತು ಮತ್ತು ಈ ಎರಡು ವರ್ಷಗಳಲ್ಲಿ ಮೋಟಾರು ವಾಹನಗಳ ತೆರಿಗೆಯಿಂದ ಬರುವ ಆದಾಯ □□□ ಕೋಟಿ ರೂಪಾಯಿಗಳಿಗೆ ಹೆಚ್ಚಿತು. ಮುಂದಿನ ವರ್ಷ ಈ ಆದಾಯ 10 ಕೋಟಿ ರೂಪಾಯಿಗಳಿಗೆ ಹೆಚ್ಚಬಹುದೆಂದುನಮ್ಮ ಅಂದಾಜುಗಳಿಂದ  ನನಗೆ ತಿಳಿದು ಬಂದಿದೆ. ಮೋಟಾರು ವಾಹನಗಳ ಮೇಲೆ ತೆರಿಗೆ ವಿಧಿಸುವುದರಿಂದ ಬರುವ ಆದಾಯದಲ್ಲಿ ಆಗಿರುವ ಈ ಹೆಚ್ಚಳ ತುಂಬಾ ಪ್ರತಿಕೂಲ ಪರಿಸ್ಥಿತಿಗಳಲ್ಲಿ ಆಗಿರುವಂಥದ್ದು ಏಕೆಂದರೆ ಮೈಸೂರು ರಾಜ್ಯದಲ್ಲಿ ರಸ್ತೆ ನಿರ್ಮಾಣ ಚಟುವಟಿಕೆಗಳ ಮೇಲೆ ತುಂಬಾ ನಿರ್ಬಂಧವಿದೆ. ರಸ್ತೆಗಳನ್ನು ಹೆಚ್ಚು ಹೆಚ್ಚು ನಿರ್ಮಾಣ ಮಾಡಿದರೆ ಸಹಜವಾಗಿ ವಾಹನ ಸಂಚಾರವು ಹೆಚ್ಚಾಗುತ್ತದೆ ಮತ್ತು ಹೆಚ್ಚು ವಾಹನಗಳನ್ನು ರಸ್ತೆಯ ಮೇಲೆ ಬಿಡಲಾಗುತ್ತದೆ.

**ಶ್ರೀ ಬಿ. ಭಾಸ್ಕರಶೆಟ್ಟಿ** – ಆದರೆ ತೆರಿಗೆಗಳಲ್ಲೂ ಹೆಚ್ಚಳ ಆಗಿದೆಯಲ್ಲ?

**ಶ್ರೀ ಮೊಹಮದ್ ಅಲಿ** – ಕಳೆದ ಎರಡು ವರ್ಷಗಳಲ್ಲಿ ತೆರಿಗೆಗಳಲ್ಲಿ ಯಾವುದೇ ಹೆಚ್ಚಳ ಆಗಿಲ್ಲ. ತೆರಿಗೆ ವಿಧಿಸುವುದಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಕೆಸ್ಕು ಸಮಿತಿಯು ಮತ್ತಷ್ಟು ತೆರಿಗೆಯನ್ನು ಹೆಚ್ಚಿಸಬಾರದೆಂದು ರಾಜ್ಯ ಸರ್ಕಾರಕ್ಕೆ ಸಲಹೆ ಮಾಡಿರುವ ವಿಷಯ ನಿಮಗೆ ತಿಳಿದಿದೆ. ಹಲವಾರು ತೂತುಗಳನ್ನು ಮುಚ್ಚಲಾಗಿದೆ. ಈಗ ಹಣ ಪ್ರಾಮಾಣಿಕವಾಗಿ ವಸೂಲಾಗುತ್ತಿದೆ ಎಂದು ತಿಳಿಸಲು  ನನಗೆ ಸಂತೋಷವಾಗುತ್ತದೆ. ಪ್ರಾದೇಶಿಕ ಸಾರಿಗೆ ಕಛೇರಿಯ ಕಾರ್ಯ ನಿರ್ವಹಣೆಯ ಬಗ್ಗೆ ಹೇಳುವುದೆಲ್ಲಾ ತೆರಿಗೆಗಳನ್ನು ಸಂದಾಯ ಮಾಡಲು ಯಾರಾದರೂ ಹೋದಾಗ ಅಥವಾ ತಪಾಸಣೆಗಾಗಿ ಅಥವಾ ಅರ್ಹತಾ ಪ್ರಮಾಣ ಪತ್ರಕ್ಕಾಗಿ ವಾಹನವನ್ನು ತೆಗೆದುಕೊಂಡು ಹೋದಾಗ, ಒಬ್ಬ ವ್ಯಕ್ತಿ ಅನುಭವಿಸುವಂತಹ ತೊಂದರೆಯ ಬಗ್ಗೆಯೇ ಸಾಮಾನ್ಯ ಸ್ವರೂಪದ ಇಂಥ ದೂರುಗಳನ್ನು ಸದಾ ಮಾಡಲಾಗುತ್ತದೆ. ಶ್ರೀ ಸಿದ್ಧವೀರಪ್ಪನವರು ಹಾಗೂ ಶ್ರೀ ಚನ್ನಬಸಪ್ಪನವರು ಮಂತ್ರಿಗಳಾಗಿದ್ದಾಗ ಇಂಥ ದೂರುಗಳು ಅವರಿಗೆ ಬಂದಿರಬಹುದು. ಇಡೀ ತೊಂದರೆ ಏನೆಂದರೆ, ನಿರ್ದಿಷ್ಟ ಆರೋಪಗಳನ್ನು ಮಾಡಿಲ್ಲ ಮತ್ತು ವಿಶೇಷವಾಗಿ ಸಾರಿಗೆ ಕ್ಷೇತ್ರದಲ್ಲಿರುವವರು ನಿರ್ದಿಷ್ಟ ಆರೋಪಗಳನ್ನು ಮಾಡಲು ಹೆದರುತ್ತಾರೆ ಮತ್ತು ಇಷ್ಟುಪಡುವುದಿಲ್ಲ. ಇದರಿಂದಾಗಿ ಕಿರುಕುಳ ಅಥವಾ ಭ್ರಷ್ಟಾಚಾರಕ್ಕೆ ಹೊಣೆಗಾರರಾದ ವ್ಯಕ್ತಿಗಳ ಮೇಲೆ ತುರ್ತು ಕ್ರಮ ತೆಗೆದುಕೊಳ್ಳಲು ಸರ್ಕಾರಕ್ಕೆ ಸಾಧ್ಯವಾಗುವುದಿಲ್ಲ. ಮೋಟಾರು ವಾಹನ ಇಲಾಖೆಯಲ್ಲಿರುವ ಪ್ರತಿಯೊಬ್ಬರೂ ಭ್ರಷ್ಟರು ಅಥವಾ ದುಷ್ಟರು ಎಂದು ನಾನುನಂಬುವುದಿಲ್ಲ.

**ಸಂಜೆ 7.30 ಗಂಟೆ.**

**ಶ್ರೀ ಜಿ. ಚಂದ್ರಕಾಂತ** – ಕೊನೇಪಕ್ಷ ಅವರಲ್ಲಿ ಹೆಚ್ಚಿನವರು ಇರಬಹುದು.

**ಶ್ರೀ ಮೊಹಮದ್ ಅಲಿ** – ಪ್ರಾಮಾಣಿಕರಾದವರ ಮನಸ್ಸಿನ ಮೇಲೆ ಎಂಥ ಪರಿಣಾಮಗಳಾಗುತ್ತವೆ ಎಂಬುದನ್ನು ಮಾನ್ಯ ಸದಸ್ಯರು ನೆನಪಿಸಿಕೊಳ್ಳಬೇಕೆಂದು ಬಯಸುತ್ತೇನೆ. ಇಂಥ ಸಾರಾಸಗಟಾದ ಟೀಕೆ ಮಾಡುವ ಮೂಲಕ ಭಾರತದಲ್ಲಿ ಇಡೀ ಆಡಳಿತ, ಇಡೀ ಸಮಾಜ ಮತ್ತು ಎಲ್ಲವೂ ಹಾಳಾಗಿದೆ ಮತ್ತು ಹದಗೆಟ್ಟಿದೆ ಎಂಬ ಅಭಿಪ್ರಾಯವನ್ನು ಮೂಡಿಸಲು ನೀವು ಇಚ್ಛಿಸಿದಂತಿದೆ. ಆರೋಪಗಳನ್ನು ಮಾಡುವಾಗ ಮಾನ್ಯ ಸದಸ್ಯರು ಯುಕ್ತಾಯುಕ್ತ ಪರಿಜ್ಞಾನವುಳ್ಳವರಾಗಿರಬೇಕು ಎಂದು ಮಾತ್ರ ನಾನು ವಿನಂತಿಸುತ್ತೇನೆ. ಏನೇ ಆಗಲಿ, ನನಗೆ ಸಂಬಂಧಿಸಿದಂತೆ ಹೇಳುವುದಾದರೆ, ದೂರು ನನಗೆ ಬಂದ ಕ್ಷಣವೇ ನೌಕರರನ್ನು ಅಮಾನತ್ತಿನಲ್ಲಿಟ್ಟು ಅವರ ವಿರುದ್ಧ ಕ್ರಮ ಕೈಗೊಳ್ಳುವಂತೆ ಮಾಡುತ್ತೇನೆ ಎಂಬುದಾಗಿ ಈ ಸದನದಲ್ಲಿ ನಾನು ಮತ್ತೆ ಮತ್ತೆ ತಿಳಿಸಿದ್ದೇನೆ. ನನಗೆ ಬಂದ ಅರ್ಧಡಜನ್ ಅರ್ಜಿಗಳೆಲ್ಲವೂ ಅನಾಮದೇಯ ಅರ್ಜಿಗಳಾಗಿದ್ದವು ಅಪರಿಚಿತ ವ್ಯಕ್ತಿಗಳು ತಮ್ಮ ಹೆಸರನ್ನು ಧೈರ್ಯವಾಗಿ ಹೇಳಿಕೊಳ್ಳಲು ಮುಂದಾಗುವುದಿಲ್ಲ ಮತ್ತು ದೂರುಗಳನ್ನು ಕೊಡಲು ಮುಂದೆ ಬರುವುದಿಲ್ಲ. ಇದು ತುಂಬಾ ದುರದೃಷ್ಟಕರ. ಆಪರೇಟರ್‌ಗಳ ಸಹಕಾರ ಇಲ್ಲದಿದ್ದರೆ, ಜನ ಮುಂದೆ ಬಂದು ದೂರು ಕೊಡದಿದ್ದರೆ, ಇಲಾಖೆಯಿಂದ ಭ್ರಷ್ಟಾಚಾರವನ್ನು ಒಟ್ಟಾರೆ ನಿರ್ಮೂಲನೆಗೊಳಿಸಲು ಮತ್ತು ಹತ್ತಿಕ್ಕಲು ಕಷ್ಟವಾಗುತ್ತದೆ. ಆದರೆ, ನಾನು ಒಂದು ವಿಷಯವನ್ನು ಸದನದ ಗಮನಕ್ಕೆ ತರಬಯಸುತ್ತೇನೆ. ಅದೇನೆಂದರೆ, ಈ ಕಾರ್ಯವಿಧಾನವನ್ನು ಸಾಧ್ಯವಾದಷ್ಟು ಸರಳಗೊಳಿಸಲು, ಕಳೆದ ಎರಡು ವರ್ಷಗಳಲ್ಲಿ ನಾವು ಪ್ರಯತ್ನಗಳನ್ನು ಮಾಡಿದ್ದೇವೆ. ಅದರಿಂದ ಭ್ರಷ್ಟಾಚಾರಕ್ಕೆ ಎಡೆ ಮಾಡಿಕೊಡುವಂಥ ಕ್ಲಿಷ್ಟ ಹಾಗೂ ತುಂಬಾ ನಿಧಾನಗತಿಯ ಕಾರ್ಯವಿಧಾನವನ್ನು ತಪ್ಪಿಸಿದಂತಾಗಿದೆ. ಯಾರು ಬೇಕಾದರೂ, ಆರ್‌ಟಿಒಗೆ ಚೆಕ್ ಮೂಲಕ ತೆರಿಗೆಯನ್ನು ಕಳುಹಿಸಬಹುದು.

**ಶ್ರೀ ಎಂ.ನಾಗಪ್ಪ (ರಾಯಚೂರು)** – ಚೆಕ್ಕುಗಳು ಅಂಗೀಕೃತವಾಗುತ್ತಿವೆಯೆ ತಿಳಿಸಿ.

**ಶ್ರೀ ಮೊಹಮದ್ ಅಲಿ** – ಪರಿಶೀಲಿಸುತ್ತೇನೆ.

**ಶ್ರೀ ಎಚ್. ಸಿದ್ಧವೀರಪ್ಪ** – ತೊಂದರೆ ಏನೆಂದರೆ, ನಿಮ್ಮ ಲೆಕ್ಕಗಳನ್ನು ಅಪ್ ಡೇಟ್ ಮಾಡಿಲ್ಲ. ಕೆಲವೊಮ್ಮೆ ಹಣವನ್ನು ಜಮೆ ಮಾಡಿದರೂ ಅದು ನಿಮ್ಮ ಲೆಕ್ಕಕ್ಕೆ ಬರುವುದಿಲ್ಲ. ಲೆಕ್ಕಗಳನ್ನು ಅಪ್ ಡೇಟ್ ಮಾಡುವುದು ಒಳ್ಳೆಯದು.

**ಶ್ರೀ ಸಿ.ಕೆ. ರಾಜಯ್ಯ ಶೆಟ್ಟಿ** – ಆರ್.ಸಿ. ಪುಸ್ತಕದಲ್ಲಿ ಒಂದುನಮೂದನ್ನು ಹೇಗೆ ಮಾಡಲಾಗುತ್ತದೆ?

**ಶ್ರೀ ಮೊಹಮದ್ ಅಲಿ** – ಈ ವಿಷಯದಲ್ಲಿ ಅಂತಿಮ ಆದೇಶವನ್ನು ಹೊರಡಿಸಲಾಗಿದೆಯೆ? ಎಂಬುದನ್ನು ನಾನು ಪರಿಶೀಲಿಸಬೇಕಾಗಿದೆ. ಏನೇ ಆಗಲಿ, ಸಾರ್ವಜನಿಕ ಮತ್ತು ಖಾಸಗೀ ಕ್ಯಾರಿಯರ್ ಗಳಿಗೆ ಸಂಬಂಧಿಸಿದಂತೆ ಹೇಳುವುದಾದರೆ, ನೆರೆಹೊರೆಯ ರಾಜ್ಯಗಳೊಂದಿಗೆ ನಾವು ಒಪ್ಪಂದ ಮಾಡಿಕೊಂಡಿದ್ದೇವೆ. ಕೋಟಾವನ್ನು ಆಪರೇಟರ್‌ಗಳಿಗೆ

ಬೇಕಾದುದಕ್ಕಿಂತಲೂ ಹೆಚ್ಚಿನ ಪ್ರಮಾಣಕ್ಕೆ ನಾವು ಹೆಚ್ಚಿಸಿದ್ದೇವೆ. ಇದರಿಂದಾಗಿ ಪರ್ಮಿಟ್‌ಗಳು ಸಾರ್ವಜನಿಕ ಮತ್ತು ಖಾಸಗೀ ಆಪರೇಟರ್‌ಗಳಿಗೆ ಬೇಕಾದುದಕ್ಕಿಂತ ಹೆಚ್ಚಾಗಿವೆ. ಅವರಿಗೆ 5 ಪರ್ಮಿಟ್‌ಗಳು ಬೇಕಾಗಿದ್ದರೆ ನಾವು 10 ಕೊಡ್ತೆವೆ. ಭ್ರಷ್ಟಾಚಾರವನ್ನು ಸ್ವಲ್ಪಮಟ್ಟಿಗಾದರೂ ನಿರ್ಮೂಲನೆ ಮಾಡುವ ಮತ್ತು ಹತ್ತಿಕ್ಕುವ ಸಲುವಾಗಿ ನಾವು ಈ ಕ್ರಮವನ್ನು ಅಳವಡಿಸಿಕೊಂಡಿದ್ದೇವೆ. ಆರ್‌ಟಿಓ ಕಚೇರಿಯಲ್ಲಿ ತೆರಿಗೆ ಪಾವತಿಸುವವರಿಗೆ ಆಗುತ್ತಿರುವ ಕಿರುಕುಳದ ಬಗ್ಗೆ ಸದಸ್ಯರಿಗಿರುವ ಕಳವಳವನ್ನು ನಾನು ಶ್ಲಾಘಿಸುತ್ತೇನೆ. ಚೆಕ್ಕುಗಳು ಅಂಗೀಕೃತವಾಗಿವೆ. ಆದರೆ ಆರ್.ಸಿ ಹಿಂಬರಹ ಮತ್ತು ತೆರಿಗೆ ಟೋಕನ್ ಗಳನ್ನು ಚೆಕ್ಕುಗಳು ನಗದೀಕರಣಗೊಂಡನಂತರ ನೀಡಲಾಗುವುದು.

**ಶ್ರೀ ಎಚ್. ಸಿದ್ಧವೀರಪ್ಪ** – ಇದನ್ನೆಲ್ಲಾ ತಪ್ಪಿಸುವ ಸಲುವಾಗಿಯೇ ಬೇರೆ ಯಾವುದಾದರೂ ಕಾರ್ಯ ವಿಧಾನವನ್ನು ವಿಚಾರ ಮಾಡಬಹುದು. ಕೆಲವು ಇಲಾಖೆಗಳಲ್ಲಿ ಚೆಕ್ಕುಗಳು ನಗದೀಕರಣವಾಗುವುದಿಲ್ಲ. ಇದು ಕೆಲವೊಮ್ಮೆ ಲೆಕ್ಕ ನಿರ್ವಹಣೆಯಲ್ಲಿ ಎಲ್ಲ ಬಗೆಯ ಗೊಂದಲಗಳಿಗೆ ಎಡೆ ಮಾಡಿಕೊಡುತ್ತದೆ. ನೀವು ಮತ್ತೊಂದು ಕಾರ್ಯವಿಧಾನದ ಬಗ್ಗೆ ಚಿಂತನೆ ಮಾಡಬಹುದು. ಅವರು ಬಯಸಿದ್ದೇ ಆದರೆ ಮನಿಯಾರ್ಡರ್ ಕಮೀಷನ್ನನ್ನು ಹೊರತುಪಡಿಸಿ, ಮನಿಯಾರ್ಡರ್ ಮೂಲಕ ಕಳುಹಿಸಬಹುದು. ನಿಮಗೆ ಇದರಿಂದ ಸ್ವಲ್ಪ ಹಣನಷ್ಟವಾದರೂ ಇದರಿಂದ ನಿಮಗೆ ಸಹಾಯವೂ ಇದೆ. ನನಗೆ ತಿಳಿದ ಮಟ್ಟಿಗೆ ಮದ್ರಾಸ್‌ನಲ್ಲಿ ಇದು ಚಾಲ್ತಿಯಲ್ಲಿದೆ. ಚೆಕ್ಕುಗಳಿಂದ ನಿಮಗೇನೂ ಸಹಾಯವಾಗುವುದಿಲ್ಲ.

**ಶ್ರೀ ಮೊಹಮದ್ ಅಲಿ** – ಇದೊಂದು ಸಲಹೆ. ಇದನ್ನು ಯಥೋಚಿತವಾಗಿ ಪರಿಗಣಿಸಲಾಗುವುದು. ಮಾನ್ಯ ಸದಸ್ಯರಾದ ಶ್ರೀ ಚಂದ್ರಕಾಂತ್ ಅವರು ಒಂದು ನಿರ್ದಿಷ್ಟ ಪ್ರಶ್ನೆಯನ್ನು ಕೇಳಿದರು. ಅವರು ಅಬ್ದುಲ್ ಮಜೀದ್ ಎನ್ನುವವರ ಹೆಸರನ್ನು ಪ್ರಸ್ತಾಪಿಸಿದರು. ಆತನಿಗೆ ಹೇಗೆ ಬಡ್ತಿ ನೀಡಲಾಗುತ್ತದೆ ಎನ್ನುವುದು ನನಗೆ ಗೊತ್ತಿಲ್ಲ. ಈ ನೌಕರ ಇನ್ನೂ ಪ್ರೊಬೇಷನ್‌ನಲ್ಲಿಯೇ ಇದ್ದಾನೆ ಮತ್ತು ಆತನನ್ನು ಪ್ರಸಕ್ತ ಹುದ್ದೆಯಲ್ಲಿ ಸ್ಥಿರೀಕರಿಸಿಲ್ಲ. ಅಂದ ಮೇಲೆ ಆತನಿಗೆ ಬಡ್ತಿ ನೀಡುವ ಪ್ರಶ್ನೆ ಉದ್ಭಸುವುದಾದರೂ ಹೇಗೆ?

**ಶ್ರೀ ಜಿ. ಚಂದ್ರಕಾಂತ** – ಆತ ಒಬ್ಬ ಅಸಮರ್ಥ ಅಧಿಕಾರಿ ಎಂಬ ಸಾರಿಗೆ ಆಯುಕ್ತರ ಟೀಕೆಯ ಬಗ್ಗೆ ಏನು ಹೇಳ್ತಿರಿ?

**ಶ್ರೀ ಮೊಹಮದ್ ಅಲಿ** – ಇದು ನನ್ನ ಗಮನಕ್ಕೆ ಬಂದಿಲ್ಲ. ಆತನ ಪ್ರೊಬೆಷನ್ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಲಾಗಿದೆ. ಸಾರಿಗೆ ಆಯುಕ್ತರು ಆ ಅಧಿಕಾರಿಯನ್ನು ಸೇವೆಯಿಂದ ವಜಾ ಮಾಡುವ ಅಥವಾ ನಿವೃತ್ತಿಗೊಳಿಸುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವ ಕಳುಹಿಸಿದ್ದಾರೆ ಎಂದುನನಗನಿಸುವುದಿಲ್ಲ. ಸ್ವಲ್ಪ ಸಮಯದ ಹಿಂದೆ ಪ್ರೊಬೆಷನ್ ಅವಧಿಯನ್ನು ವಿಸ್ತರಿಸುವ ಬಗ್ಗೆ ಪ್ರಸ್ತಾವ ಬಂದಿತ್ತು. ಪ್ರೊಬೇಷನ್ ಅವಧಿಯನ್ನು ವಿಸ್ತರಿಸಲಾಗಿದೆ.

**ಶ್ರೀ ಜಿ. ಚಂದ್ರಕಾಂತ** – ಹೇಗಿದ್ದರೂ, ಆತ ಅಸಮರ್ಥ ಎಂದು ಕಂಡು ಬಂದಿದೆ.

**ಶ್ರೀ ಮೊಹಮದ್ ಅಲಿ** – ಆತನ ಪ್ರೊಬೇಷನ್ ಅವಧಿಯನ್ನು ತೃಪ್ತಿಕರವಾಗಿ ಮುಗಿಸಲು ಮತ್ತೊಂದು ಅವಕಾಶ ನೀಡುವ ಸಲುವಾಗಿ, ಆತನ ಪ್ರೊಬೆಷನ್ ಅವಧಿಯನ್ನು ಒಂದು ವರ್ಷದಷ್ಟು ವಿಸ್ತರಿಸಲು ಪ್ರಸ್ತಾವ ಕಳುಹಿಸಲಾಗಿತ್ತು.

**ಶ್ರೀ ಜಿ. ಚಂದ್ರಕಾಂತ** – ಆತ ತಾಂತ್ರಿಕ ಸಿಬ್ಬಂದಿಯೆ?

**ಶ್ರೀ ಮೊಹಮದ್ ಅಲಿ** – ಆತ ಲೋಕ ಸೇವಾ ಆಯೋಗದಿಂದ ಆಯ್ಕೆಯಾದ ವ್ಯಕ್ತಿ. ಆತ ನೇರವಾಗಿ ನೇಮಕಗೊಂಡವನು.

**ಶ್ರೀ ಸಿ.ಕೆ. ರಾಜಯ್ಯ ಶೆಟ್ಟಿ** – ಮೆಕ್ಯಾನಿಕಲ್ ಇಂಜಿನಿಯರ್‌ನ ಬಡ್ತಿ ಬಗ್ಗೆ ಶ್ರೀನಂಜೇಗೌಡರು ಎತ್ತಿದ ಅಂಶದ ಬಗ್ಗೆ ಏನು ಹೇಳ್ತಿರಿ?

**ಶ್ರೀ ಮೊಹಮದ್ ಅಲಿ** – ಆ ವಿಷಯ ರಿಟ್ ಅರ್ಜಿಯಲ್ಲಿ ಉಚ್ಚ ನ್ಯಾಯಾಲಯದ ಪರಗಣನೆಯಲ್ಲಿದೆ. ಇದು ವಿಚಾರಣಾಧೀನ ವಿಷಯವಾಗಿರುವುದರಿಂದ, ನಾನು ಅದರ ಬಗ್ಗೆ ಟೀಕೆ ಮಾಡಲಾರೆ.

ರಾಜ್ಯದಲ್ಲಿ ರಸ್ತೆ ಸಾರಿಗೆ ರಾಷ್ಟ್ರೀಕರಣದ ಬಗ್ಗೆ ತುಂಬಾ ಹೇಳಲಾಗಿದೆ. ರಸ್ತೆ ಸಾರಿಗೆ ನಿಗಮವು ಒಂದು ಸ್ವಾಯತ್ತ ಸಂಸ್ಥೆಯಾಗಿದೆ. ಅದು ಸ್ವಾಯತ್ತ ಸಂಸ್ಥೆ ಆಗಿದೆ ಎಂದು ಹೇಳುವ ಮೂಲಕ ಚರ್ಚೆಗಳನ್ನು ತಡೆಯುವುದು ನನಗೆ ಇಷ್ಟವಿಲ್ಲ. ರಸ್ತೆ ಸಾರಿಗೆ ನಿಗಮವು ಒಂದು ವಾಣಿಜ್ಯ ಉದ್ಯಮವಾಗಿರುವುದರಿಂದ ಅದಕ್ಕೆ ಸಂಬಂಧಿಸಿದ ವಿಷಯಗಳನ್ನು ಚರ್ಚಿಸುವಾಗ ಸದಸ್ಯರು ತುಂಬಾ ಸಂಯಮವನ್ನು ತೋರಿರುವುದು ನನಗೆ ಸಂತೋಷವನ್ನುಂಟು ಮಾಡಿದೆ. ಒಬ್ಬ ಸದಸ್ಯರಾದ ಶ್ರೀನಂಜೇಗೌಡರು ರಸ್ತೆ ಸಾರಿಗೆ ನಿಗಮದ ಕಾರ್ಯನಿರ್ವಹಣೆಯ ಆರ್ಥಿಕತೆಯ ಬಗ್ಗೆಯೂ ಮಾತನಾಡಿ ತುಂಬಾ ಶ್ರಮ ತೆಗೆದುಕೊಂಡಿದ್ದಾರೆ. ವಿಷಯವನ್ನು ಅರ್ಥ ಮಾಡಿಕೊಳ್ಳಲು ಅವರು ವಹಿಸಿರುವ ಶ್ರಮಕ್ಕಾಗಿ ನಾನು ಕೃತಜ್ಞತೆ ವ್ಯಕ್ತಪಡಿಸಲೇ ಬೇಕು. ಸದಸ್ಯರಿಗೆ ತಿಳಿದಿರುವಂತೆ ರಾಜ್ಯದ ಪುನರ್ ವಿಂಗಡಣೆಯ ಸಂದರ್ಭದಲ್ಲಿ ಹಳೆಯ ಮೈಸೂರು ಪ್ರದೇಶದಲ್ಲಿ ಸಾರಿಗೆ ಇಲಾಖೆ 245 ಬಸ್ಸುಗಳನ್ನು ಓಡಿಸುತ್ತಿತ್ತು. ಅದು 131 ಬಸ್ಸುಗಳೊಂದಿಗೆನಗರ ಸೇವೆಯನ್ನು ರಾಷ್ಟ್ರೀಕರಣಗೊಳಿಸಿತು. ರಾಷ್ಟ್ರೀಕರಣಗೊಂಡ ಮೇಲೆ ಹೈದರಾಬಾದ್ ಕರ್ನಾಟಕದ ರಾಷ್ಟ್ರೀಕರಣಗೊಂಡ ವಲಯದಿಂದ 45 ಬಸ್ಸುಗಳನ್ನು ಹೈದರಾಬಾದ್ ಪ್ರದೇಶದಿಂದ 673 ಬಸ್ಸುಗಳನ್ನು ನಾವು ಪಡೆದುಕೊಂಡೆವು. ಈ ಎಲ್ಲಾ 1100ಕ್ಕೂ ಹೆಚ್ಚು ಬಸ್ಸುಗಳ ಪೈಕಿ ಕೇವಲ 800 ಬಸ್ಸುಗಳು ರಸ್ತೆಯ ಮೇಲೆ ಓಡಾಡುತ್ತಿದ್ದವು. ಉಳಿದವು ರಸ್ತೆಯ ಮೇಲೆ ಓಡಿಸಲಾರದಷ್ಟು ದುಃಸ್ಥಿತಿಯಲ್ಲಿದ್ದವು. 1961ರಲ್ಲಿ ರಸ್ತೆ ಸಾರಿಗೆ ನಿಗಮವನ್ನು ರಚಿಸಿದಾಗಿನಿಂದ ಇಂದಿನ ತನಕ ಬಸ್ಸುಗಳ ಸಂಖ್ಯೆಯನ್ನು 2721ಕ್ಕೆ ಹೆಚ್ಚಿಸಲಾಗಿದೆ. ಪ್ರತೀ ದಿನ ಪ್ರವರ್ತಿಸುವಂಥ ಮಾರ್ಗದ ಉದ್ದವನ್ನು 1,31,000ಕಿ.ಮೀಗೆ ಹೆಚ್ಚಿಸಲಾಗಿದೆ. ನಿತ್ಯ 4,57,000 ಕಿ.ಮೀ.ಗಳಷ್ಟು ದೂರ ಬಸ್ಸುಗಳು ಓಡಾಡುತ್ತಿವೆ. ಪ್ರತಿ ದಿನ ಸುಮಾರು

7,50,000 ಪ್ರಯಾಣಿಕರು ಬಸ್ಸುಗಳಲ್ಲಿ ಓಡಾಡುತ್ತಿದ್ದಾರೆ. ಶಿವಮೊಗ್ಗ, ಮಂಗಳೂರು ಪಾಕೆಟ್ ಮತ್ತು ಕೋಲಾರ ಯೋಜನೆಗಳನ್ನು ಅನುಷ್ಠಾನಗೊಳಿಸುವುದರೊಂದಿಗೆ ಬಸ್ಸುಗಳ ಸಂಖ್ಯೆಯಲ್ಲಿ ಮತ್ತು ನೌಕರರ ಸಂಖ್ಯೆಯಲ್ಲಿ ಹಾಗೂ ಕಿ.ಮಿ.ಗಳ ರೂಪದಲ್ಲಿ ದೈನಿಕ ಸೇವೆಯಲ್ಲಿ ಮತ್ತುನಮ್ಮ ಪ್ರಯಾಣಿಕರನ್ನು ಒಯ್ಯುವ ಸಾಮರ್ಥ್ಯದಲ್ಲಿ ಹೆಚ್ಚಳ ಉಂಟಾಗಿದೆ. ರಾಯಲ್ ಸಾರಿಗೆ ನಿಗಮದ ಬಂಡವಾಳ ವೆಚ್ಚದಲ್ಲಿ ಕೂಡ ಸಾಪೇಕ್ಷ ಹೆಚ್ಚಳ ಉಂಟಾಗಿದೆ.

ಮಹಾರಾಷ್ಟ್ರ ರಸ್ತೆ ಸಾರಿಗೆ ನಿಗಮದ ಬಂಡವಾಳ ವೆಚ್ಚ 36.67 ಕೋಟಿ ರೂ.ಗಳಾಗಿದ್ದರೆ,ನಮ್ಮ ಬಂಡವಾಳ ವೆಚ್ಚ 20.20 ಕೋಟಿ ರೂ.ಗಳಾಗಿದೆ ಹಾಗೂನಮ್ಮ ಒಟ್ಟು ಆದಾಯ 17.15 ಕೋಟಿ ರೂ.ಗಳಾಗಿದ್ದರೆ, ಅವರ ಒಟ್ಟು ಆದಾಯ 38.91 ಕೋಟಿ ರೂ.ಗಳಾಗಿದೆ ಎಂದು ಸ್ಪಷ್ಟಪಡಿಸಲು ಶ್ರೀನಂಜೇಗೌಡರು ಬಯಸಿದರು. 1957–58ನೇ ಸಾಲಿನ ಅಂಕಿಗಳಿಗೆ ಸಂಬಂಧಿಸಿದಂತೆ ಹೇಳುವುದಾದರೆ ಪ್ರತಿ ಕಿ.ಮಿ.ಗೆ ನಿವ್ವಳ ಆದಾಯ ಈ ಮುಂದಿನಂತಿತ್ತು.

**ಮೈಸೂರು, ಮಹಾರಾಷ್ಟ್ರ, ಗುಜರಾತ್, ಆಂಧ್ರ, ಕೇರಳ**

**ಶ್ರೀ ಹೆಚ್. ಸಿದ್ಧವೀರಪ್ಪ** – ನೀವು ದರವನ್ನು ಹೆಚ್ಚಿಸಬೇಕಾಗಿತ್ತು.

**ಶ್ರೀ ಮೊಹಮದ್ ಅಲಿ** – 1966ರಲ್ಲಷ್ಟೇ ದರವನ್ನು ಹೆಚ್ಚಿಸಿದ್ದೆವು. ಅದು ಶೇ.10ರಷ್ಟು ಮಾತ್ರ. ದರಗಳು ಮಹಾರಾಷ್ಟ್ರ ಮತ್ತು ಮೈಸೂರುಗಳೆರೆಡರಲ್ಲೂ ತುಲನಾತ್ಮಕವಾಗಿ ಸಮನಾಗಿವೆ. ಆದರೆ ಮಹಾರಾಷ್ಟ್ರದಲ್ಲಿ ಪ್ರತಿಯೊಂದು ಬಸ್ಸಿನಿಂದ ಬರುವ ದೈನಂದಿನ ಆದಾಯ 300 ಆಗಿದ್ದರೆ ಮೈಸೂರಿನಲ್ಲಿ 250 ರೂ.ಗಳು. ಏಕೆಂದರೆ ಮಹಾರಾಷ್ಟ್ರ ತುಂಬಾ ದೊಡ್ಡ ರಾಜ್ಯವಾಗಿದ್ದು ಅವರು ತುಂಬಾ ಉದ್ದದ ಅಂದರೆ 500 ರಿಂದ 600 ಕಿ.ಮೀ.ಉದ್ದದ ಮಾರ್ಗಗಳನ್ನು ಆಪರೇಟ್ ಮಾಡುತ್ತಿದ್ದಾರೆ.

ಇಲ್ಲಿ ಒಂದು ವಿಷಯವನ್ನು ಸ್ಪಷ್ಟಪಡಿಸುವುದಕ್ಕೆ ಸಹ ಇಷ್ಟಪಡುತ್ತೇನೆ.ನಮ್ಮ 20 ಕೋಟಿ ರೂ.ಗಳ ಬಂಡವಾಳ ವೆಚ್ಚದಲ್ಲಿ 1.25 ಕೋಟಿ ರೂಪಾಯಿ ನಿರುಪಯುಕ್ತ ಬಂಡವಾಳವಿರುವುದು. ಮಾನ್ಯ ಸದಸ್ಯರಾದ ಶ್ರೀನಂಜೇಗೌಡರ ಗಮನಕ್ಕೆ ಬಂದಿರಲಿಕ್ಕಿಲ್ಲ. ಏನಾಗಿದೆ ಎಂದರೆ ಧರ್ಮಾಂಬುಧಿಕೆರೆಯನ್ನು ನಾವು ಖರೀದಿ ಮಾಡಿದಾಗ ಭೂಮಿಯ ಬೆಲೆಯನ್ನು 1.2 ಕೋಟಿ ರೂ.ಗಳೆಂದು ನಿರ್ಧರಿಸಲಾಗಿತ್ತು. ತರುವಾಯ ಅದನ್ನು ರಾಯಲ್ ಸಾರಿಗೆ ನಿಗಮಕ್ಕೆ ಸರ್ಕಾರ ನೀಡಿದ ಬಂಡವಾಳ ಕೊಡುಗೆಯಾಗಿ ಪರಿಗಣಿಸಲಾಯಿತು. ಅದರ ಮೇಲೆ ಯಾವುದೇ ಲಾಭವಿಲ್ಲದೆ ಸರ್ಕಾರಕ್ಕೆ ಸುಮಾರು 12 ಲಕ್ಷ ರೂಪಾಯಿ ಬಡ್ಡಿಯನ್ನು ಪಾವತಿ ಮಾಡಬೇಕಾಯಿತು. ಹಾಗಾಗಿನಮ್ಮ ಒಟ್ಟು ಆದಾಯ ಕಡಿಮೆ ಇರುವಂತೆ ತೋರುತ್ತಿದೆ. 1966–67ರಲ್ಲಿನಮ್ಮ ಲಾಭ ಗಣನೀಯವಾಗಿ ಹೆಚ್ಚಾಯಿತು. 1966–67ರಲ್ಲಿ ಶೇ.3.3 ರಷ್ಟಿದ್ದ ಲಾಭ 1967–68ರಲ್ಲಿ ಶೇ. 8.3 ಕ್ಕೆ ಹೆಚ್ಚಿತು. 1967 ಮತ್ತು 1968ರಲ್ಲಿ ಆದಾಯ ತೆರಿಗೆ ಮತ್ತು ಬೋನಸ್‌ಗೆ ಮೊದಲಿನ ನಿವ್ವಳ ಲಾಭ 40.50 ಲಕ್ಷ ರೂ.ಗಳಾಗಿದ್ದರೆ, 1968–69ರಲ್ಲಿ ಆದಾಯ ತೆರಿಗೆ ಮತ್ತು ಬೋನಸ್ ಸಂದಾಯಕ್ಕೆ ಮೊದಲಿನ ನಿವ್ವಳ ಲಾಭ 1,67,00,000 ಲಕ್ಷ. ಈ ವರ್ಷವೂ ಕೂಡ ಇದೇ ಗತಿಯನ್ನು ಹಾಗೂ ಪ್ರಮಾಣದ ಗಳಿಕೆಯನ್ನು ನಾವು

ಕಾಪಾಡಿಕೊಂಡು ಬರುತ್ತೇವೆ. ಆದರೆ,ನಮ್ಮ ನಿವ್ವಳ ಲಾಭದ ಪ್ರಮಾಣ ಕಡಿಮೆಯಾದಂತೆ ತೋರುತ್ತದೆ. ಇದಕ್ಕೆ ಕಾರಣ ಈ ವರ್ಷ ತುಟ್ಟಿಭತ್ಯೆಯ ಪರಿಷ್ಕರಣೆಯಿಂದಾಗಿ 41 ಲಕ್ಷ ರೂ.ಗಳನ್ನು ನಾವು ಸಂದಾಯ ಮಾಡಬೇಕಾಯಿತು. ಅಲ್ಲದೆ ಟೈರುಗಳು ಮತ್ತು ಟ್ಯೂಬ್‌ಗಳ ಬೆಲೆಯಲ್ಲಿ ಹೆಚ್ಚಳ ಉಂಟಾದುದರಿಂದ 60 ಲಕ್ಷ ರೂ.ಗಳ ಹೆಚ್ಚುವರಿ ವೆಚ್ಚ ಉಂಟಾಯಿತು. ಇಲ್ಲದಿದ್ದಲ್ಲಿ, ರಸ್ತೆ ಸಾರಿಗೆ ನಿಗಮಕ್ಕೆ ಸಂಬಂಧಿಸಿದಂತೆ ಇಷ್ಟೇ ಪ್ರಮಾಣದ ಲಾಭವನ್ನು ನಾವು ಗಳಿಸುತ್ತಿದ್ದೆವು. ನಾನು ಈಗಾಗಲೇ ಮಹಾರಾಷ್ಟ್ರ ಮೈಸೂರು, ಆಂದ್ರ ಹಾಗೂ ಕೇರಳ ರಾಜ್ಯಗಳ ತುಲನಾತ್ಮಕ ತ:ಖ್ತೆಯನ್ನು ನೀಡಿದ್ದೇನೆ. ಒಟ್ಟಾರೆ ಹಣಕಾಸು ಫಲಿತಾಂಶಗಳಿಗೆ ಸಂಬಂಧಪಟ್ಟಂತೆ, ಇತರ ಉದ್ಯಮಗಳಿಗೆ ಹೋಲಿಸಿದರೆ ಮೈಸೂರು ರಸ್ತೆ ಸಾರಿಗೆ ನಿಗಮವು ಉತ್ತಮ ಸ್ಥಿತಿಯಲ್ಲಿದೆ ಎಂದು ನಾನು ಹೇಳಬಲ್ಲೆ. ಇಲ್ಲಿ ಗಮನಿಸಬೇಕಾದ ಹೆಚ್ಚು ಮಹತ್ವದ ಸಂಗತಿಯೆಂದರೆ 1968–69ರಲ್ಲಿ, ಹೈ ಸ್ಪೀಡ್ ಡೀಸೆಲ್ ತೈಲ, ಟೈರುಗಳು, ಟ್ಯೂಬ್‌ಗಳು, ಕೀಲೆಣ್ಣೆಗಳ ಮೇಲೆ ತೆರಿಗೆ ವಿಧಿಸಿದ್ದರಿಂದಾಗಿ ನಿರ್ವಹಣಾ ವೆಚ್ಚ 41 ಲಕ್ಷ ರೂ.ಗಳಷ್ಟು ಹೆಚ್ಚಾಯಿತು. ಅಷ್ಟಾದರೂ ಆದಾಯ ಹೆಚ್ಚಾಗಿದೆ. ಆದ್ದರಿಂದ ಹಿಂದಿನ ವರ್ಷಗಳಿಗೆ ಹೋಲಿಸಿದರೆ 1968 – 69ರಲ್ಲಿ ರಸ್ತೆ ಸಾರಿಗೆ ನಿಗಮದ ಕಾರ್ಯಸಾಧನೆ ಉತ್ತಮವಾಗಿದೆ ಎಂದು ನಾನು ಹೇಳಬಲ್ಲೆ.

**ಶ್ರೀ ಹೆಚ್. ಸಿದ್ಧವೀರಪ್ಪ** – ಖಾಸಗಿ ಬಸ್ ಮಾಲೀಕರಂತೆಯೇ ನೀವೂ ಕೂಡ ರಸ್ತೆ ಉಪಕರ ಮತ್ತು ಇತರ ತೆರಿಗೆಗಳನ್ನು ಕಟ್ಟುತ್ತಿರುವುದನ್ನು ನಾನುನಂಬುತ್ತೇನೆ.

**ಶ್ರೀ ಮೊಹಮದ್ ಅಲಿ** – ನಾವು ತೀರ ಕಡಿಮೆಯೆಂದರೆ ಪ್ರತೀ ಬಸ್‌ಗೆ ಪ್ರತಿ ವರ್ಷಕ್ಕೆ 10,000ರೂ. ತೆರಿಗೆ ಕಟ್ಟಿದರೆ ಬಾಂಬೆ ಬೆಸ್ಟ್ ಸುಮಾರು 2000ರೂ. ಕಟ್ಟುತ್ತಿದೆ.

**ಶ್ರೀ ಸಿ.ಕೆ. ರಾಜಯ್ಯಶೆಟ್ಟಿ** – ನೀವು ವಿಮೆ ಪಾವತಿಸುತ್ತಿದ್ದೀರಾ?

**ಶ್ರೀ ಮೊಹಮದ್ ಅಲಿ** – ನಾವು ಎಲ್ಲಾ ವಾಹನಗಳಿಗೆ ವಿಮೆ ಮಾಡಿಸುತ್ತಿದ್ದು, ವಿಮೆ ಹಣ ಪಾವತಿಸುತ್ತಿದ್ದೇವೆ. ನನ್ನ ಸ್ನೇಹಿತರಾದ ಶ್ರೀ ಹೆಚ್.ಎಂ.ಚನ್ನಬಸಪ್ಪನವರು ಈ ಖಾತೆಯ ಸಚಿವರಾಗಿದ್ದಾಗ ಪ್ರತಿ ಕಿ.ಮೀ. ನಿರ್ವಹಣಾ ವೆಚ್ಚ ಕೇವಲ60 ಪೈಸೆಯಿತ್ತು ಆದರೆ ಈಗ

**ಶ್ರೀ ಹೆಚ್.ಎಂ. ಚನ್ನಬಸಪ್ಪ:** ಮಾನ್ಯ ಸಚಿವರು ಒಪ್ಪುವುದಾದರೆ, ಸ್ವಾಮಿ ನಾನೆಂದೂ ಸಾರಿಗೆ ಸಚಿವನಾಗಿರಲಿಲ್ಲ.

**ಶ್ರೀ ಮೊಹಮದ್ ಅಲಿ** – ಕ್ಷಮಿಸಿ ಸ್ವಾಮಿ, ಹೇಗಿದ್ದರೂ, 1963 – 64ರಲ್ಲಿ ನಿರ್ವಹಣಾ ವೆಚ್ಚ ಪ್ರತಿ ಕಿ.ಮೀ.ಗೆ ಕೇವಲ 60 ಪೈಸೆ ಇದ್ದದ್ದು, ಈಗ ಪ್ರತಿ ಕಿ.ಮೀ. 166 ಪೈಸೆಗೆ ಹೆಚ್ಚಾಗಿದೆ. ಆದ್ದರಿಂದ ಸಾರಿಗೆ ಉದ್ಯಮವನ್ನು ಲಾಭಕರವಾಗಿನಡೆಸಲು ಸಾಧ್ಯವಾಗದಂತೆ ಮಾಡಿರುವ ಭಾರೀ ತೆರಿಗೆಯ ಹೊರೆಯ ದೃಷ್ಟಿಯಿಂದ ಭಾರತ ಸರ್ಕಾರವು ಒಂದು ಸಮಿತಿಯನ್ನು ನೇಮಕ ಮಾಡುವುದು, ಅವಶ್ಯವೆಂದು ಭಾವಿಸಿ ಕೇಸ್ಕರ್ ಸಮಿತಿಯನ್ನು ನೇಮಕ ಮಾಡಿತು. ಅವರು, ದುರದೃಷ್ಟವಶಾತ್ ಈ ಸಾರಿಗೆ ಉದ್ಯಮಕ್ಕೆ ತುಂಬಾ ತೆರಿಗೆಯ ಹೊರೆಯನ್ನು ಹೇರಲಾಗಿದೆ ಎಂದು ಹೇಳಿದ್ದಾರೆ. ವಿರೋಧ ಪಕ್ಷದ ಸನ್ಮಾನ್ಯ ನಾಯಕರಾದ ಶ್ರೀ ಶಿವಪ್ಪನವರೂ ಸೇರಿದಂತೆ ಸ್ವಂತ

ಕಾರನ್ನು ಹೊಂದಿರುವ ಪ್ರತಿಯೊಬ್ಬರಿಗೂ ಇಂದು ಈ ಅನುಭವವಾಗುತ್ತಿದೆ. ಐದು ವರ್ಷದ ಹಿಂದೆ ಕಾರನ್ನು ಹೊಂದಿದ್ದ ಒಬ್ಬ ವ್ಯಕ್ತಿ ಪೆಟ್ರೋಲ್ ಮತ್ತು ನಿರ್ವಹಣೆಗಾಗಿ ಸುಮಾರು 100 – 150 ರೂ. ಖರ್ಚು ಮಾಡುತ್ತಿದ್ದರೆ, ಇಂದು ಅವರು ಸುಮಾರು 500 ರೂ. ಖರ್ಚು ಮಾಡಬೇಕಾಗಿದೆ. ಈ ವರ್ಷದ ಬಜೆಟ್ ರಾಜ್ಯ ರಸ್ತೆ ಸಾರಿಗೆ ನಿಗಮಕ್ಕೆ ಕೇವಲ ನಾಲ್ಕು ಲಕ್ಷ ರೂ.ಗಳಷ್ಟು ಹೊರೆಯನ್ನು ಉಂಟುಮಾಡುತ್ತಿದೆ. ಕೇಸ್ಕರ್ ಸಮಿತಿ ಮಾಡಿರುವ ಶಿಫಾರಸುಗಳನ್ನು ರಾಜ್ಯ ಇನ್ನೂ ಪರಿಗಣಿಸಿಲ್ಲ. ಆ ಶಿಫಾರಸುಗಳನ್ನು ಭಾರತ ಸರ್ಕಾರ ಪರಿಗಣಿಸುತ್ತದೆ. ಹಲವಾರು ಶಿಫಾರಸುಗಳಿವೆ. ಸಾರಿಗೆ ವಾಹನಗಳ ಮೇಲೆ ಶೇ. 110ಕ್ಕೂ ಹೆಚ್ಚಿನ ತೆರಿಗೆಯನ್ನು ವಿಧಿಸಬೇಕೆಂದು ನಾವು ಹೇಳಿದ್ದೇವೆ. ಇದರಲ್ಲಿ ಹೆಚ್ಚಿನ ತೊಂದರೆ ಇದೆ ಎಂದು ನಾನು ಭಾವಿಸುವುದಿಲ್ಲ. ಸದನದ ಸಮಯವನ್ನು ತುಂಬಾ ಹೆಚ್ಚಿಗೆ ತೆಗೆದುಕೊಳ್ಳಲು ನಾನು ಬಯಸುವುದಿಲ್ಲ.

**ಶ್ರೀ ಎ.ಆರ್. ಬದ್ರಿನಾರಾಯಣ್** (ಶಿವಮೊಗ್ಗ) – ಸರ್ಕಾರವು ಮ್ಯೂಟ್ಸ್ ಹಾಗೂ ವಾಹನಗಳ ಮೇಲೆ ಏಕಸ್ವಾಮ್ಯತೆಯನ್ನು ಹೊಂದಿರುವುದರಿಂದ ಹಾಗೂ ಯಾವುದೇ ಸ್ಪರ್ಧೆ ಇಲ್ಲದಿರುವುದರಿಂದ ಸಾರಿಗೆ ಸೇವೆಗಳಿಂದ ಆದಾಯದ ಸುಧಾರಣೆಗೆ ಅವಕಾಶವೇ ಇಲ್ಲ.

**ಶ್ರೀ ಮೊಹಮದ್ ಅಲಿ** – ಇದು ಬಸ್‌ನ ಆಸನದ ಸಂಖ್ಯಾ ಸಾಮರ್ಥ್ಯ ಹಾಗೂ ಅದು ಓಡುವ ದೂರವನ್ನು ಅವಲಂಬಿಸಿದೆ. ಅದೇನೆ ಇರಲಿ ನಾವು ಈ ಸಾರಿಗೆ ಸೇವೆಗಳಿಂದ ನಿರೀಕ್ಷಿಸುವಂಥ ಆದಾಯಕ್ಕೆ ಮಿತಿಯು ಇದೆ.

**ಶ್ರೀ ಎಂ.ಎಸ್. ರಾಮಣ್ಣ** – ಎಂ.ಎಸ್.ಆರ್.ಟಿ.ಸಿ.ಯಲ್ಲಿ ಪ್ರತಿ ದಿನ ವಾಹನವು ಕೆಟ್ಟು ನಿಲ್ಲುವುದು ನನಗೆ ಗೊತ್ತು.

**ಶ್ರೀ ಮೊಹಮದ್ ಅಲಿ** – ಎಂ.ಎಸ್.ಆರ್.ಟಿ.ಸಿ.ಯಲ್ಲಿ ಬಸ್ಸುಗಳು ಕೆಟ್ಟು ನಿಲ್ಲುವ ಪ್ರಮಾಣಕ್ಕೆ ಸಂಬಂಧಪಟ್ಟಂತೆ ಹೇಳುವುದಾದರೆ ಪ್ರತಿ ಸಾವಿರ ಕಿ.ಮೀ.ಗೆ ಅದು 0.44 ಇದ್ದರೆ ಮಹಾರಾಷ್ಟ್ರದಲ್ಲಿ 0.55, ಗುಜರಾತ್‌ನಲ್ಲಿ 0.41, ಅಂಧ್ರ ಪ್ರದೇಶದಲ್ಲಿ 0.79, ಕೇರಳದಲ್ಲಿ 0.30. ಆದ್ದರಿಂದನಮ್ಮ ಬಸ್ಸುಗಳು ಕೆಟ್ಟು ನಿಲ್ಲುವುದಕ್ಕೆ ಸಂಬಂಧಿಸಿದ ಅಂಕಿಗಳು ಗುಜರಾತ್‌ನನಂತರದ ಸ್ಥಾನದಲ್ಲಿವೆ.

ನಾನು ಗಂಭಿರವಾಗಿ ಪರಿಗಣಿಸಿರುವ ಎರಡು ಅಂಶಗಳೆಂದರೆ, ಒಂದು ವೇಳಾಪಟ್ಟಿಯ ನಿರ್ವಹಣೆ ಮತ್ತು ಎರಡು ಬಸ್ಸುಗಳು ಕೆಟ್ಟು ನಿಲ್ಲುವುದು. ಬದಲಿ ಬಸ್ಸುಗಳನ್ನು ಒದಗಿಸಲು ಅವಶ್ಯ ವ್ಯವಸ್ಥೆಗಳನ್ನು ಮಾಡಬೇಕಾಗಿದೆ. ಏಕೆಂದರೆ ಎಲ್ಲಾ ಪ್ರಕರಣಗಳಲ್ಲಿ ಬಸ್ಸುಗಳು ಕೆಟ್ಟು ನಿಲ್ಲುವುದನ್ನು ತಪ್ಪಿಸಲು ಸಾಧ್ಯವಿಲ್ಲ. ಬಸ್ಸುಗಳನ್ನು ಮತ್ತೆ ಸುಸ್ಥಿತಿಗೆ ತರುವ ಕೆಲಸ ಬಾಕಿಯಿದೆ ಎಂದು ನಾನು ಸದನಕ್ಕೆ ತಿಳಿಸಬೇಕಾಗಿದೆ.

**ಶ್ರೀ ಹೆಚ್. ಸಿದ್ಧವೀರಪ್ಪ** – ಅಂಥ ಬಸ್ಸುಗಳನ್ನು ನಿರುಪಯುಕ್ತವೆಂದು ತಿರಸ್ಕರಿಸಿ.

**ಶ್ರೀ ಮೊಹಮದ್ ಅಲಿ** – ಅವು ನಿರುಪಯುಕ್ತವೆಂದು ತಿರಸ್ಕರಿಸುವ ಸ್ಥಿತಿಗೆ ಬಂದಿಲ್ಲ. ಅವು ಇನ್ನೂ ಬಳಸುವ ಸ್ಥಿತಿಯಲ್ಲಿವೆ. ಆದ್ದರಿಂದ ಪಾಳಿ ಮಾದರಿಯನ್ನು ನಾವು ಜಾರಿಗೆ ತರುತ್ತಿದ್ದೇವೆ. ನಾವು ಈಗಾಗಲೇ ಹುಬ್ಬಳ್ಳಿಯಲ್ಲಿ ಈ ವ್ಯವಸ್ಥೆಯನ್ನು ಪ್ರಾರಂಭಿಸಿದ್ದು, ಬೆಂಗಳೂರಿನಲ್ಲಿ ಪ್ರಾರಂಭಿಸುತ್ತಿದ್ದೇವೆ. ಇದರಿಂದ ತೃಪ್ತಿಕರವಾದ ನಿರ್ವಹಣಾ ವ್ಯವಸ್ಥೆನಮಗೆ ದೊರೆತಂತಾಗುತ್ತದೆ. ಲಂಡನ್‌ನಲ್ಲಿ ಮಾಡಿರುವಂತೆ ದಿನ, ವಾರ, ಮತ್ತು ತಿಂಗಳ ಆಧಾರದ ಮೇಲೆ ಮೂರು ಹಂತದ ವ್ಯವಸ್ಥೆಯನ್ನು ಜಾರಿಗೆ ತರಲಾಗಿದೆ. ಬಸ್ಸುಗಳನ್ನು ಮತ್ತೆ ಸುಸ್ಥಿತಿಗೆ ತರುವುದಕ್ಕೆ ಸಂಬಂಧಿಸಿದಂತೆ ಯಾವುದೇ ಬ್ಯಾಕ್ ಲಾಗ್ ಇಲ್ಲದಂತೆ ನೋಡಿಕೊಳ್ಳಲು ನಾವು ಪ್ರಯತ್ನಿಸುತ್ತಿದ್ದೇವೆ.

**ಶ್ರೀ ಹೆಚ್. ಸಿದ್ಧವೀರಪ್ಪ** – ಇದಕ್ಕೆ ಪೂರ್ಣ ಅವಕಾಶವಿದೆ. ಸಾಮಾನ್ಯ ಕಾರ್ಯಸಾಧನೆ, ಅತೃಪ್ತಿಕರವಾಗಿರದಿದ್ದರೂ, ದುರಸ್ಥಿ ಮತ್ತು ಇತರೆ ವಿಷಯಗಳಿಗೆ ಸಂಬಂಧಿಸಿದ ಕಾರ್ಯ ನಿರ್ವಹಣೆ ತೃಪ್ತಿಕರವಾಗಿಲ್ಲ. ನಾನು ಸದಾ ಬಸ್ಸುಗಳಲ್ಲಿ ಪ್ರಯಾಣ ಮಾಡುತ್ತೇನೆ. ಸುರಕ್ಷಿತ ಪ್ರಯಾಣದ ಅವಕಾಶ ತಮಗಿದೆಯೆಂಬ ಭರವಸೆ ಪ್ರಯಾಣಿಕರಲ್ಲಿ ಮೂಡುವಂತೆ ಮಾಡಬೇಕು.

ಸಂಜೆ 8 ಗಂಟೆ.

**ಶ್ರೀ ಮೊಹಮದ್ ಅಲಿ** – ರಸ್ತೆ ಸಾರಿಗೆ ನಿಗಮವು ತೆಗೆದುಕೊಂಡ ಕ್ರಮಗಳನ್ನು ನಾನು ಸದನದ ಮುಂದೆ ಮಂಡಿಸುತ್ತಿದ್ದೇನೆಂದು, ಶ್ರೀ ಹೆಚ್. ಸಿದ್ಧವೀರಪ್ಪನವರಿಗೆ ತಿಳಿಸಬಯಸುತ್ತೇನೆ. ನಿರ್ವಹಣೆ ತುಂಬಾ ಉತ್ತಮ ಮಟ್ಟದ್ದಾಗಿಲ್ಲ ಎಂಬ ತೀರ್ಮಾನಕ್ಕೆ ಅಂತಿಮವಾಗಿ ನಾವು ಬಂದಿದ್ದೇವೆ.

**ಶ್ರೀ ಹೆಚ್. ಸಿದ್ಧವೀರಪ್ಪ** – ನೀವು ಬಯಸಿದರೆ ಒಬ್ಬ ಮುಖ್ಯ ಇಂಜಿನಿಯರ್ ಅನ್ನು ನೇಮಕ ಮಾಡಿ ಆತನನ್ನು ಹೊಣೆಗಾರನನ್ನಾಗಿ ಮಾಡಬಹುದು.

**ಶ್ರೀ ಮೊಹಮದ್ ಅಲಿ** – ನಾವು ನೇಮಕ ಮಾಡಿದ್ದೇವೆ. ಆತನನ್ನು ಅರ್ಹತೆಯ ಮೇಲೆ ಆಯ್ಕೆ ಮಾಡಿದ್ದೇನೆ ಹಾಗೂ ಆಯ್ಕೆ ಮಾಡುವಾಗ ನನಗೆ ಬೇರೆ ಯಾವುದೇ ಆಯ್ಕೆಯ ಅವಕಾಶವಿರಲಿಲ್ಲ. ಆತ ವಾಸ್ತವವಾಗಿ 700–1200 ರೂ. ಶ್ರೇಣಿಯಲ್ಲಿರುವ ಒಂದನೇ ದರ್ಜೆಯ ಅಧಿಕಾರಿ. ಆಯ್ಕೆಗೆ ಬಂದಿದ್ದಂಥ ಕೆಲವು ಅಧಿಕಾರಿಗಳು ರಿಟ್ ಅರ್ಜಿ ಸಲ್ಲಿಸಿ ಅವರ ಆಯ್ಕೆಯ ಬಗ್ಗೆ ಆಕ್ಷೇಪಣೆ ಎತ್ತಿದ್ದಾರೆ. ಈಗ ಈ ವಿಷಯ ನ್ಯಾಯಾಲಯದಲ್ಲಿದೆ.

**ಶ್ರೀ ಹೆಚ್.ಎನ್.ನಂಜೇಗೌಡ** – 1964ರ ಅಕ್ಟೋಬರ್ 16ರಷ್ಟು ಹಿಂದೆಯೇ ಕೆಳ ಶ್ರೇಣಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಒಬ್ಬ ವ್ಯಕ್ತಿಯನ್ನು 850 ರೂ.ಗಳ ಉನ್ನತ ಶ್ರೇಣಿಗೆ ಬಡ್ತಿ ನೀಡಿದ ವಿಷಯವನ್ನು ತಮ್ಮ ಗಮನಕ್ಕೆ ಈಗ ತರಬಯಸುತ್ತೇನೆ.

**ಶ್ರೀ ಮೊಹಮದ್ ಅಲಿ** – ಯಾವುದೇ ನಿಲುವಳಿ ಸೂಚನೆಯನ್ನು ಮಂಡಿಸದಿರುವುದರಿಂದ ಈ ಅಂಶಕ್ಕೆ ಉತ್ತರ ನೀಡಲು ನನಗೆ ಕಷ್ಟವಾಗುತ್ತದೆ.

ಏನೇ ಆಗಲಿ, ಸ್ವಾಮಿ, ಈ ಮುಂಚೆ ನಾನು ಉಲ್ಲೇಖಿಸಿದ ವಿಷಯಕ್ಕೆ ಸಂಬಂಧಿಸಿದಂತೆ ನಾನು ಹೇಳುವುದಾದರೆ, ಆ ವಿಷಯ ನ್ಯಾಯಾಲಯದಲ್ಲಿ ವಿಚಾರಣಾ ಹಂತದಲ್ಲಿರುವುದರಿಂದ ಅದು ನಾನು ಅಭಿಪ್ರಾಯ ತಿಳಿಸುವಂಥ ವಿಷಯವಾಗಿಲ್ಲ.

**ಶ್ರೀ ಸಿ.ಕೆ. ರಾಜಯ್ಯ ಶೆಟ್ಟಿ** – ವಾಣಿಜ್ಯ ಕ್ಷೇತ್ರದಲ್ಲಿ ಎಂಟು ಟ್ರಕ್ ಗಳನ್ನು ಖರೀದಿ ಮಾಡಿದ್ದರೆ, ಒಂದು ಟ್ರಕ್ ಅನ್ನು ಕಮೀಷನ್ ಆಗಿ ನೀಡಲಾಗುತ್ತಿದೆ. ಸರ್ಕಾರ ಹೆಚ್ಚಿನ ಪ್ರಮಾಣದಲ್ಲಿ ಖರೀದಿಸುವಾಗ ಈ ಸೌಲಭ್ಯವನ್ನು ಏಕೆ ಬಳಸಿಕೊಳ್ಳಬಾರದು.

**ಶ್ರೀ ಮೊಹಮದ್ ಅಲಿ** – ಸ್ವಾಮಿ, ಈ ವಿಷಯವನ್ನು ಸಾರ್ವಜನಿಕ ಲೆಕ್ಕಪತ್ರ ಸಮಿತಿಯು ಒಮ್ಮೆ ವಿಚಾರಮಾಡಿತ್ತು. ತರುವಾಯ ಎಲ್ಲಾ ವಾಹನ ತಯಾರಕರು ಅಂಥ ಯಾವುದೇ ಸೌಲಭ್ಯ ನೀಡಕೂಡದೆಂದು ತಮ್ಮ ವ್ಯಾಪಾರಿಗಳಿಗೆ ಪತ್ರ ಬರೆದು ತಿಳಿಸಿದ್ದಾರೆ. ಆನಂತರ ಮತ್ತೆ ದೇಶದ ಎಲ್ಲಾ ರಸ್ತೆ ಸಾರಿಗೆ ನಿಗಮಗಳ ಅಧ್ಯಕ್ಷರ ಸಮ್ಮೇಳನದಲ್ಲಿ ಈ ವಿಷಯವನ್ನು ಚರ್ಚಿಸಲಾಯಿತು ಮತ್ತು ವಾಹನ ತಯಾರಕರಿಂದ ಹೆಚ್ಚಿನ ರಿಯಾಯಿತಿಗಳನ್ನು ಪಡೆಯಬೇಕೆಂದು ಒತ್ತಾಯಿಸಲಾಯಿತು. ಅಂತಿಮವಾಗಿ ವಾಹನ ತಯಾರಕರು ವಿ.ಜಿ.ಎಸ್. ಮತ್ತು ಡಿ ದರಗಳನ್ನು ಒಪ್ಪಿಕೊಂಡರು. ಅದರ ಪ್ರಕಾರ ಚಾಸಿಗಳ ಬೆಲೆ, ನಾವು 100 ಚಾಸಿಗಳನ್ನು ಒಟ್ಟುಗಟ್ಟಲೆ ಖರೀದಿಸಿದರೆ, ಲೇಲ್ಯಾಂಡ್ ಮತ್ತು ಟಿ.ಎಂ.ಬಿ. ಚಾಸಿಗಳ ವಿಷಯದಲ್ಲಿ ಅನುಕ್ರಮವಾಗಿ ಸುಮಾರು 2,200 ಮತ್ತು 1200ರಷ್ಟು ಕಡಿಮೆಯಾಗುತ್ತದೆ. ತರುವಾಯ ಅವರು, ನಾವು ಕೂಡಲೇ ಹಣ ಸಂದಾಯ ಮಾಡಿದರೆ, ಪ್ರತಿಯೊಂದು ಚಾಸಿಗೆ 200 ರೂ. ಸೋಡಿ ನೀಡುವುದಾಗಿಯೂ ತಿಳಿಸಿದರು. ಆದ್ದರಿಂದ ಈಗ ನಾವು ಪಡೆಯುತ್ತಿರುವುದು ಈ ಹಿಂದೆ ನಾವು ಪಡೆಯುತ್ತಿದ್ದ ಗೌಣವಾದ ಪ್ರಯೋಜನಕ್ಕಿಂತ ಹೆಚ್ಚಾಗಿದೆ ಅಲ್ಲದೆನಮ್ಮ ಕುಶಲ ಕರ್ಮಿಗಳಿಗೆ, ತಂತ್ರಜ್ಞರಿಗೆ ಮತ್ತು ಇಂಜಿನಿಯರ್‌ಗಳಿಗೆ ತಮ್ಮ ವರ್ಕ್‌ಶಾಪ್ ಗಳಲ್ಲಿ ತರಬೇತಿ ನೀಡುವ ಸೌಲಭ್ಯಗಳನ್ನು ಒದಗಿಸಲು ಒಪ್ಪಿಕೊಂಡಿದ್ದಾರೆ. ಈ ತನಕ 200ಕ್ಕೂ ಹೆಚ್ಚು ತಂತ್ರಜ್ಞರನ್ನು ನಾವು ಕಳುಹಿಸಿಕೊಟ್ಟಿದ್ದು, ಅವರು ಮುಕ್ತಟೆಯಾಗಿ ಅವರಿಗೆ ತರಬೇತಿ ನೀಡಿದ್ದಾರಲ್ಲದೆ, ಉನ್ನತ ಮಟ್ಟದ ಕಾರ್ಯನಿರ್ವಾಹಕ ಇಂಜಿನಿಯರುಗಳನ್ನು ವಿದೇಶಕ್ಕೆ ಕಳುಹಿಸಿ ಅಲ್ಲಿ ಇರುವ ವರ್ಕ್‌ಶಾಪ್‌ಗಳಲ್ಲಿ ಸುತ್ತಾಡಿ, ಇತರ ಸಾರಿಗೆ ಉದ್ಯಮಗಳ ಕಾರ್ಯನಿರ್ವಹಣೆ ಯನ್ನು ಸ್ವತಃ ಕಂಡು ತಿಳಿದುಕೊಳ್ಳುವಂತೆ ಮಾಡಲು ಕೂಡ ಅವರು ಒಪ್ಪಿದ್ದಾರೆ. ಇದು ಕೂಡ ನಮ್ಮ ಮಟ್ಟಿಗೆ ಅನುಕೂಲಕರವಾದ ವಿಷಯವೇ ಇದೆಲ್ಲವೂ ಆದದ್ದು ದೇಶದ ಎಲ್ಲಾ ಸಾರಿಗೆ ಉದ್ಯಮಗಳ ಮಾನ್ಯ ಸಭಾಧ್ಯಕ್ಷರುಗಳ ಪ್ರಯತ್ನದಿಂದಾಗಿ. ಹಿಂದೆ ನಾವು ಸುಮಾರು 20,000 ರೂಗಳ ಬೆಲೆಯ ಒಂದು ಅಂಬಾಸಿಡರ್ ಕಾರನ್ನು ಪಡೆಯುತ್ತಿದ್ದರೆ ಈಗ ಅದಕ್ಕಿಂತಲೂ ಹೆಚ್ಚಿನದನ್ನು ಪಡೆಯುತ್ತಿದ್ದೇವೆ.

**ಶ್ರೀ ಎಸ್. ಶಿವಪ್ಪ** – ನಿಮ್ಮ ಖರೀದಿ ನೀತಿಗೆ ಸಂಬಂಧಿಸಿದಂತೆ, ಸರ್ಕಾರವು ಖರೀದಿದಾರ ಆಗಿರುವುದರಿಂದ ನೀವು ಮೈಸೂರು ರಾಜ್ಯದಲ್ಲಿರುವ ಎಲ್ಲಾ ವ್ಯಾಪಾರಿಗಳಿಗೆ ಖರೀದಿ ಬೇಡಿಕೆಯನ್ನು ಸಲ್ಲಿಸಿದ್ದೀರೋ ಅಥವಾ ಒಂದು ಅಥವಾ ಎರಡು ಫರ್ಮ್‌ಗಳಿಗೆ ಸಲ್ಲಿಸಿದ್ದೀರೋ ಎಂಬುದನ್ನು ನಾನು ತಿಳಿದುಕೊಳ್ಳಬಯಸುತ್ತೇನೆ.

**ಶ್ರೀ ಮೊಹಮದ್ ಅಲಿ** – ಬೇರೆ ಬೇರೆ ಫರ್ಮ್‌ಗಳಿಗೆ ಹೇಗೆ, ಯಾವಾಗ, ಬೇಡಿಕೆಗಳನ್ನು ಸಲ್ಲಿಸಲಾಗುತ್ತದೆ ಎಂಬುದನ್ನು ಈ ಹಂತದಲ್ಲಿ ನಾನು ಹೇಳಲಾರೆ. ಯಾವುದೇ ಕಮೀಷನ್ ಅನ್ನು ಪಡೆಯುವ ಪ್ರಶ್ನೆಯೇ ಇಲ್ಲ. ನಾವು ಸ್ಥಳೀಯ ವ್ಯಾಪಾರಿಗಳಿಗೆ ಖರೀದಿ ಬೇಡಿಕೆಯನ್ನು ಸಲ್ಲಿಸಿದರೆ ಮೈಸೂರು ಸರ್ಕಾರಕ್ಕೆ ಶೇ.11ರಷ್ಟು ಮಾರಾಟ ತೆರಿಗೆ ಪ್ರಾಪ್ತವಾಗುತ್ತದೆ. ಟೆಲ್ಕೋ ಅಥವಾ ಲೈಲ್ಯಾಂಡ್‌ಗೆ ನೇರವಾಗಿ ಬೇಡಿಕೆಗಳನ್ನು ಸಲ್ಲಿಸಿದರೆ ಕೇವಲ ಶೇ.3ರಷ್ಟು ಮಾರಾಟ ತೆರಿಗೆ ಉಳಿತಾಯವಾಗುತ್ತದೆ. ಆದರೆ ರಾಜ್ಯ ಸರ್ಕಾರಕ್ಕೆ ಶೇ.11ರಷ್ಟು ಮಾರಾಟ ತೆರಿಗೆನಷ್ಟವಾಗುತ್ತದೆ. ರಾಜ್ಯ ಸರ್ಕಾರಕ್ಕೆ ಲಾಭವಾಗುವಂತೆ ನೋಡಿಕೊಳ್ಳುವ ದೃಷ್ಟಿಯಿಂದ ಖರೀದಿ ಬೇಡಿಕೆಗಳನ್ನು ಸಾಧ್ಯವಾದಷ್ಟೂ ಮಟ್ಟಿಗೆ ಸ್ಥಳೀಯ ವ್ಯಾಪಾರಿಗಳಿಗೆ ಸಲ್ಲಿಸಲಾಗುತ್ತಿದೆ.

ಸ್ವಾಮಿ, ನಾನೀಗಾಗಲೇ ಸೂಚಿಸಿದಂತೆ, ರಸ್ತೆ ಸಾರಿಗೆ ನಿಗಮದ ಲೆಕ್ಕ ಸಂಶೋಧನಾ ವರದಿಯನ್ನು ಈ ಸದನದ ಮುಂದೆ ಮಂಡಿಸಿದರೆ, ಈ ಎಲ್ಲಾ ವಿಷಯಗಳ ಬಗ್ಗೆ ಸವಿವರವಾದ ಚರ್ಚೆಗೆ ಒಳ್ಳೆಯ ಅವಕಾಶ ಮಾಡಿಕೊಟ್ಟಂತಾಗುತ್ತದೆ ಎಂದು ನಾನು ಭಾವಿಸುತ್ತೇನೆ. ತಾಂತ್ರಿಕ ಕಾರಣಗಳ ಮೇಲೆ ಅಂಥ ಚರ್ಚೆಯನ್ನು ಒದಿಗಿಸುವುದು ನನಗಿಷ್ಟವಿಲ್ಲ.

**ಶ್ರೀ ಎಚ್. ಎನ್.ನಂಜೇಗೌಡ** – ವಿವಿಧ ವರದಿಗಳ ಅನುಷ್ಠಾನದ ಬಗ್ಗೆ ನೀವು ಏನನ್ನೂ ಹೇಳಲಿಲ್ಲ.

**ಶ್ರೀ ಮೊಹಮದ್ ಅಲಿ** – ಸ್ವಾಮಿ, ಈ ವರದಿಗಳ ಅನುಷ್ಠಾನದ ಬಗ್ಗೆ ನಿಗಮದ ಮಂಡಲಿಯು ಈ ತಿಂಗಳ 28 ರಂದುನಡೆಯುವ ಅದರ ಸಭೆಯಲ್ಲಿ ತೀರ್ಮಾನ ತೆಗೆದುಕೊಳ್ಳುತ್ತದೆ. ಇಡೀ ವಿಷಯವನ್ನು ಹಾಗೂ ಅದರ ಅಡಿಯಲ್ಲಿ ಸಲ್ಲಿಸಿರುವ ಪ್ರಸ್ತಾವಗಳನ್ನು ಎಲ್ಲಾ ವಿಭಾಗಗಳ ಮುಖ್ಯಸ್ಥರು ಹಾಗೂ ಪ್ರಧಾನ ವ್ಯವಸ್ಥಾಪಕರು ಮತ್ತು ಉಪಾಧ್ಯಕ್ಷರು ಪರಿಶೀಲಿಸಿದ್ದಾರೆ. ಈ ತಿಂಗಳ 28 ರಂದು ಸದರಿ ವರದಿಯನ್ನು ನಿಗಮದ ಮಂಡಲಿಯ ಮುಂದೆ ಮಂಡಿಸಲಾಗುತ್ತಿದೆ. ನಿಗಮ 28 ರಂದು ತೀರ್ಮಾನ ತೆಗೆದುಕೊಳ್ಳಲು ಸಾಧ್ಯವಾಗುತ್ತದೆಂದುನನಗನಿಸುವುದಿಲ್ಲ. ಏಕೆಂದರೆ ಅಂದು ನಾವು ಒಂದು ಟಿಪ್ಪಣಿಯನ್ನು ಅವರಿಗೆ ಕೊಡಬೇಕಾಗಿದ್ದು ಅದನ್ನು ಅವರು ಪರಿಶೀಲಿಸಬೇಕಾಗಿದೆ. ಆದ್ದರಿಂದ ಈ ವರದಿಗಳ ಪರಿಶೀಲನೆಗಾಗಿ ಮುಂದಿನ ತಿಂಗಳಲ್ಲಿ ಯಾವುದಾದರೂ ಒಂದು ದಿನ ಒಂದು ವಿಶೇಷ ಸಭೆಯನ್ನು ಗೊತ್ತುಪಡಿಸುವ ಬಗ್ಗೆ ನಾನು ವಿಚಾರ ಮಾಡುತ್ತಿದ್ದೇನೆ.

ಸ್ವಾಮಿ, ಮಾನ್ಯ ಸದಸ್ಯರಾದ ಶ್ರೀ ಗುರೆಡ್ಡಿಯವರು ಹೆಚ್ಚು ಬಸ್ಸುಗಳನ್ನು ಒದಗಿಸುವಂತೆ ತಿಳಿಸಿದ್ದರು. ಈ ಸಂಬಂಧದಲ್ಲಿ ನಾನು ಒಂದು ತೊಂದರೆಯನ್ನು ಸದನದ ಗಮನಕ್ಕೆ ತರಲಿಚ್ಛಿಸುತ್ತೇನೆ. ಅದೇನೆಂದರೆ 1956–57ರಲ್ಲಿ ನಾವು ಬಸ್ಸುಗಳನ್ನು ಖರೀದಿಸಿದ್ದೆವು ಮತ್ತು ನಾವು ಖರೀದಿಸಿದ ಬೆಲೆಯಲ್ಲಿ ಸವಕಳಿಗೆ ಅವಕಾಶ ಮಾಡಿಕೊಟ್ಟೆವು. ನಾವು 42000 ರೂಪಾಯಿಗಳಂತೆ ಖರೀದಿಸಿದರೆ ಇಂದು ನಾವು ಅವುಗಳನ್ನು ಬದಲಾಯಿಸಬೇಕಾದರೆ ಸುಮಾರು 75,000 ರೂಪಾಯಿಗಳನ್ನು ಖರ್ಚು ಮಾಡಬೇಕಾಗುತ್ತದೆ. ಇದು ತುಂಬಾ ಸಂದಿಗ್ಧ ಪರಿಸ್ಥಿತಿಯನ್ನು ಸಾರಿಗೆ ನಿಗಮಕ್ಕೆ ತಂದೊಡ್ಡಿದೆ. ಹೊಸ ಟ್ರಿಪ್ಪುಗಳನ್ನು ಪ್ರಾರಂಭಿಸಲು ಹೆಚ್ಚು ಬಸ್ಸುಗಳನ್ನು ಒದಗಿಸಿ ಶೆಡ್ಯೂಲ್‌ಅನ್ನು ಹೆಚ್ಚಿಸಲು

ನಿಮಗದ ಮೇಲೆ ತುಂಬಾ ಒತ್ತಡ ಇದೆ ಎಂಬುದು ನನಗೆ ತಿಳಿದಿದೆ. ಇದರ ಜೊತೆಗೆ 10 ವರ್ಷಗಳ ಹಿಂದೆ ರಾಷ್ಟ್ರೀಕರಣಗೊಳಿಸಿದಂಥ ಪ್ರದೇಶಗಳಲ್ಲಿ ಜನ ಸಂಚಾರದ ಒತ್ತಡ ಹೆಚ್ಚಾಗಿರುವುದರಿಂದ ಈ ಕಡೆಯಿಂದಲೂ ಹೆಚ್ಚಿನ ಬೇಡಿಕೆ ಇದೆ.

ಈ ಪ್ರದೇಶಗಳಲ್ಲಿ ರಸ್ತೆಯ ಮೇಲಿನ ಸಂಚಾರದ ಒತ್ತಡವು ಕೂಡ ಶೇ.400 ಪಟ್ಟು ಹೆಚ್ಚಾಗಿದೆ. ಆದ್ದರಿಂದ ನಾವು ಹೆಚ್ಚು ಬಸ್ಸುಗಳನ್ನು ಒದಗಿಸಬೇಕಾಗಿದೆ. ಉದಾಹರಣೆಗೆ ಗುಲ್ಬರ್ಗಾ ವಿಭಾಗದ ಒಂದು ಭಾಗವಾಗಿರುವ ಬೀದರ್‌ನಲ್ಲಿ ಯಾವುದೇ ಬಸ್ಸುಗಳನ್ನು ಒದಗಿಸಿಲ್ಲವೆಂದು ತಿಳಿಸಲಾಗಿತ್ತು. ಈ ಸಂಬಂಧದಲ್ಲಿ, ರಸ್ತೆ ಸಾರಿಗೆ ನಿಗಮದ ಎಲ್ಲಾ ಆದಾಯವೂ ಸರ್ಕಾರಕ್ಕೆ ಶೇ. 6 1/2 ಯಷ್ಟು ಬಡ್ಡಿಯನ್ನು ಸಂದಾಯ ಮಾಡಿದನಂತರವಷ್ಟೇ ಕೊರೆಯುವಂತದ್ದಾಗಿದೆ ಎಂಬ ಸಂಗತಿಯನ್ನು ಇಲ್ಲಿ ಉಲ್ಲೇಖಿಸುವುದು ತುಂಬಾ ಮುಖ್ಯ. 20 ಕೋಟಿ ರೂಪಾಯಿಗಳ ಬಂಡವಾಳದಲ್ಲೂ ಸಹ 6 ಕೋಟಿ ರೂಪಾಯಿಗಳಷ್ಟು ಹಣ ರಸ್ತೆ ಸಾರಿಗೆ ನಿಗಮದ ಆಂತರಿಕ ಸಂಪನ್ಮೂಲಗಳಿಂದ ಬಂದಿದ್ದು, ಆದ್ದರಿಂದ ಏನಿದೆಯೋ ಅದನ್ನು ಮತ್ತೆ ತೊಡಗಿಸುತ್ತಿದ್ದೇವೆ. ಇಡೀ ಹಣನಷ್ಟವಾಗುತ್ತದೆ ಇದರಿಂದಾಗಿ ನಾವು ಶೇ.10ರಷ್ಟು ಸವಕಳಿಗೆ ಅವಕಾಶ ಕಲ್ಪಿಸುತ್ತಿದ್ದೇವೆ. ಒಂದು ಬಸ್ಸು ಹಾಳಾದಾಗ ನಾವು ಏನನ್ನು ಕಳೆದುಕೊಳ್ಳುವುದಿಲ್ಲ. ಏಕೆಂದರೆ ನಾವು ಸವಕಳಿಯನ್ನು ಅನುಭವಿಸುತ್ತಿದ್ದೇವೆ. ಆದ್ದರಿಂದ,ನಷ್ಟವಾಗುವ ಯಾವುದೇ ಭಯದ ಪ್ರಶ್ನೆ ಇಲ್ಲ. ರಸ್ತೆ ಸಾರಿಗೆ ನಿಗಮವು ಸಾಲ ತೀರಿಸುವ ಸಾಮರ್ಥ್ಯವನ್ನು ಪಡೆಯುತ್ತಿದೆ.ನಮ್ಮ ಸ್ಥಿತಿಯನ್ನು ಸದಸ್ಯರು ಶ್ಲಾಘಿಸಲೇಬೇಕು. ಖಾಸಗಿ ಅಪರೇಟರ್ ಗಳಿಂದ ರಸ್ತೆ ಸಾರಿಗೆ ನಿಗಮಕ್ಕೆ ಯಾವುದೇ ಸ್ಪರ್ಧೆ ಇರದಿದ್ದರೆ ರಾಜ್ಯದಲ್ಲಿ ಸ್ಥಿತಿ ಏನಾಗುತ್ತಿತ್ತು.

**ಶ್ರೀ ಎಂ. ಎನ್. ರಾಮಣ್ಣ** – ರಸ್ತೆ ಸಾರಿಗೆ ನಿಗಮದ ಸಾಧನೆ ತುಂಬಾ ನಿಧಾನಗತಿಯದು.

**ಶ್ರೀ ಮೊಹಮದ್ ಅಲಿ** – ತುಮಕೂರು ಜಿಲ್ಲೆಯಲ್ಲಿ ಕೆಲವು ರಸ್ತೆಗಳನ್ನು ವಶಕ್ಕೆ ತೆಗೆದುಕೊಂಡಿರುವುದರಿಂದ ಈ ಪ್ರಶ್ನೆಯನ್ನು ಪರಿಶೀಲಿಸಲಾಗದು. ರಸ್ತೆಗಳನ್ನು ರಾಷ್ಟ್ರೀಕರಣಗೊಳಿಸಿಲ್ಲದ ಕಡೆಗಳಲ್ಲೆಲ್ಲಾ ಖಾಸಗಿ ಬಸ್ಸುಗಳ ಒಳಭಾಗದಲ್ಲಿ ಶೇ.50ರಷ್ಟು ಪ್ರಯಾಣಿಕರು ಮತ್ತು ಬಸ್ಸಿನ ಮೇಲ್ಭಾಗದಲ್ಲಿ ಶೇಕಡಾ 50ರಷ್ಟು ಪ್ರಯಾಣಿಕರು ಪ್ರಯಾಣಿಸುವುದನ್ನು ನಾವು ನೋಡಿದ್ದೇವೆ. ಒಂದು ಖಾಸಗಿ ಬಸ್‌ನಲ್ಲಿ 150 ಜನ ಇದ್ದರೆಂದು ತಿಳಿಸಿ ಚಿತ್ರದುರ್ಗದ ಜಿಲ್ಲಾಧಿಕಾರಿಯವರು ನನಗೆ ಒಂದು ವರದಿ ನೀಡಿದ್ದಾರೆ.

**ಶ್ರೀ ಎಸ್. ಸಿದ್ದವೀರಪ್ಪ** – ಅವರು ಬಸ್‌ನ ಮೇಲಾದರೂ ಇರಲಿ ಅಥವಾ ಬಸ್‌ನ ಒಳಗಾದರೂ ಇರಲಿ, ಅವರು ನೆಲದ ಮೇಲೆ ಪ್ರಯಾಣಿಸುತ್ತಿದ್ದರು.

**ಶ್ರೀ ಮೊಹಮದ್ ಅಲಿ** – ಸಾರಿಗೆ ಬೇಡಿಕೆಯ ಬಗ್ಗೆ ಈ ಸಂದರ್ಭದಲ್ಲಿ ಸದಸ್ಯರು ಹೇಳಿದ್ದೆಲ್ಲವನ್ನು ನಾನು ತುಂಬಾ ಗಮನವಿಟ್ಟು ಆಲಿಸಿದ್ದೇನೆ. ಯಾವೊಬ್ಬ ಸದಸ್ಯರು ಯಾವುದೇ ಸಕಾರಾತ್ಮಕ ಸುಧಾರಣೆಗಳ ಬಗ್ಗೆ ಸಲಹೆಗಳನ್ನು ನೀಡಿದ್ದರೆ ಅಥವಾ ಹೆಚ್ಚು ಸೌಲಭ್ಯಗಳನ್ನು

ಒದಗಿಸಬೇಕೆಂದು ಸಲಹೆ ಮಾಡಿದ್ದರೆ ನನಗೆ ಹೆಚ್ಚು ಸಂತೋಷವಾಗುತ್ತಿತ್ತು. ವಿರೋಧ ಪಕ್ಷದ ನಾಯಕರು ವಿದೇಶದಲ್ಲಿ ತುಂಬಾ ಅತ್ಯುತ್ತಮವಾದ ಬಸ್ ಸೇವೆಯಿರುವುದನ್ನು ನಾನು ನೋಡಿದೆ ಎಂದು ಇಂದು ಮಧ್ಯಾಹ್ನ ತಿಳಿಸಿದರು. ಅವರು ಹಾಗೆ ಹೇಳಿದಾಗ ಯಾವುದಾದರೂ ಒಂದು ಡಿಸ್ಸೈನ್‌ಅನ್ನು ತಂದಿದ್ದೀರಾ ಎಂದು ನಾನು ಕೇಳಿದೆ.

**ಶ್ರೀ ಎಸ್. ಶಿವಪ್ಪ** – ನಾನು ನಿಮಗೊಂದು ಡಿಸ್ಸೈನ್ ಅನ್ನು ತಂದುಕೊಡುತ್ತೇನೆ.

**ಶ್ರೀ ಮೊಹಮದ್ ಅಲಿ** – ಕಾಂಟ್ರ್ಯಾಕ್ಟ್ ಕ್ಯಾರೇಜ್‌ಗಳ ದುರ್ಬಳಕೆಯ ವಿರುದ್ಧ ಯಾವುದೇ ಕ್ರಮವನ್ನು ನಾನು ತೆಗೆದುಕೊಂಡಿಲ್ಲ ಎಂದು ಹಲವಾರು ಸದಸ್ಯರು ಹೇಳಿದರು. ನನಗೆ ಇರುವ ತೊಂದರೆಗಳೇನು ಎಂಬುದನ್ನು ಹಲವಾರು ಬಾರಿ ನಾನು ತಿಳಿಸಿದ್ದೇನೆ. ಈ ತನಕ ಈ ಎಲ್ಲಾ ಬಸ್ಸುಗಳನ್ನು 2 ಅಥವಾ 4 ಬಾರಿ ಅವರು ತನಿಖೆ ಮಾಡುತ್ತಿದ್ದಾರೆ. ಅವರಿಗೆ ಹಲವಾರು ತಪ್ಪಿತಸ್ಥರು ಕಂಡುಬಂದಿದ್ದಾರೆ. ಈ ವಿಷಯವನ್ನು ಸಂಬಂಧಪಟ್ಟ ರಸ್ತೆ ಸಾರಿಗೆ ಅಧಿಕಾರಿಗಳಿಗೆ ತಿಳಿಸಲಾಗಿದೆ. ಅವರು ಈ ವಿಷಯದ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿದೆ. ಈ ಮಧ್ಯೆ, ಅಪೀಲು ನ್ಯಾಯಾಲಯವು ಈ ಸಂಬಂಧ ಒಂದು ತೀರ್ಮಾನವನ್ನು ತೆಗೆದುಕೊಳ್ಳಬೇಕಾಗಿದೆ.

**ಶ್ರೀ ಬಿ. ಎಲ್. ನಾರಾಯಣಸ್ವಾಮಿ (ಶ್ರೀನಿವಾಸಪುರ)** – ದರಗಳ ಹೆಚ್ಚಳವನ್ನು ಸರ್ಕಾರ ಹೇಗೆ ಸಮರ್ಥಿಸಿಕೊಳ್ಳುತ್ತದೆ.

**ಶ್ರೀ ಮೊಹಮದ್ ಅಲಿ** – ಕೋಲಾರ ಜಿಲ್ಲೆಯ ವಿಷಯದಲ್ಲಿ ಅವಿರೋಧವಾಗಿ ಒಪ್ಪಿಕೊಂಡು ಜಾರಿಗೊಳಿಸಿರುವುದನ್ನು ಇಳಿಸಲಾಗುವುದಿಲ್ಲ.

**ಶ್ರೀ ಬಿ. ಎಲ್. ನಾರಾಯಣಸ್ವಾಮಿ** – ದುರಾದೃಷ್ಟವಶಾತ್ ರಾಜ್ಯದ ಜನ ಹತಾಶರಾಗಿದ್ದಾರೆ. ಜನ ರಾಷ್ಟ್ರೀಕರಣದನಂತರ ಏನಾದರೂ ಒಳ್ಳೆಯದಾಗಬಹುದು ಎಂದು ನಿರೀಕ್ಷೆ ಮಾಡಿದ್ದರು. ಆದರೆ, ಪ್ರತಿಯೊಂದು ಅದಕ್ಕೆ ವಿರುದ್ಧವಾಗೇನಡೆಯುತ್ತಿದೆ. 60 ಮೈಲಿ ದೂರಕ್ಕೆ ಸರ್ಕಾರ 3.02 ರೂಪಾಯಿ ವಿಧಿಸುತ್ತಿದೆ. ಇದು ಸಮರ್ಥನೀಯವೇ?

**ಶ್ರೀ ಮೊಹಮದ್ ಅಲಿ** – ಇದು ಎಲ್ಲಾ ಜಿಲ್ಲೆಗಳಿಗೂ ಅನ್ವಯಿಸುತ್ತದೆ. ಅದಕ್ಕೆ ನನ್ನ ಸಹಾನುಭೂತಿ ಇದೆ. ಈ ವಿಷಯದಲ್ಲಿ ನಿಮಗೆ ಸಹಾಯ ಮಾಡಲು ನನಗೆ ಸಾಧ್ಯವಿಲ್ಲ ಎಂದು ನಿಮಗೆ ತಿಳಿಸುತ್ತೇನೆ.

**ಶ್ರೀ ಬಿ. ಎಲ್. ನಾರಾಯಣಸ್ವಾಮಿ** – ಇಷ್ಟೊಂದು ಹೆಚ್ಚಿನ ದರ ವಿಧಿಸಿ ನೀವು ಹೆಚ್ಚು ಲಾಭ ಮಾಡುತ್ತಿದ್ದೀರಿ ಎಂದು ಹೇಳುವುದು ಸರಿಯಲ್ಲವೆ?

**ಶ್ರೀ ಮೊಹಮದ್ ಅಲಿ** – ಪೂರ್ಣ ಲೆಕ್ಕವನ್ನು ಅವರು ಕೊಟ್ಟಿದ್ದಾರೆ. ಖಾಸಗಿ ಆಪರೇಟರ್‌ಗಳಿಗೆ ಸಂಬಂಧಿಸಿದಂತೆ ಹೇಳುವುದಾದರೆ, ಅವರೇ ಚಾಲಕರು, ಅವರೇ ಕಂಡಕ್ಟರ್‌ಗಳು, ಅವರೇ ಕ್ಲೀನರ್‌ಗಳು ಎಲ್ಲರೂ ಅವರೇ. ಆದರೆ ನಿಗಮದಲ್ಲಿ ತುಂಬಾ ಹೆಚ್ಚಿನ ಮೇಲ್ ವೆಚ್ಚಗಳು ಬರುತ್ತವೆ.

**ಶ್ರೀ ಬಿ.ಎಲ್. ನಾರಾಯಣಸ್ವಾಮಿ** – ಏನೇ ಆಗಲಿ, ಇದು ಬಹಳ ನಿರಾಶೆಯ ವಿಷಯ.

**ಶ್ರೀ ಮೊಹಮದ್ ಅಲಿ** – ನಾವು ಸಿಬ್ಬಂದಿಯನ್ನು ನೇಮಕ ಮಾಡಬೇಕಾಗುತ್ತದೆ ಮತ್ತು ಅವರ ಅನುಪಾತವನ್ನು ಕಾಪಾಡಿಕೊಂಡು ಬರಬೇಕಾಗುತ್ತದೆ. ಬಹುತೇಕ ಸದಸ್ಯರು, ವಿಶೇಷವಾಗಿ ಬೆಂಗಳೂರಿನ ಸದಸ್ಯರು, ಓಡಿಸುತ್ತಿರುವ ಬಸ್ಸುಗಳ ಸಂಖ್ಯೆ ಸಾಕಾಗುತ್ತಿಲ್ಲ, ಹೆಚ್ಚಿನ ಬಸ್ಸುಗಳನ್ನು ಬಿಡಿ ಮತ್ತು ಅವು ಕಾಲಕ್ಕೆ ಸರಿಯಾಗಿ ಓಡುವಂತೆ ಮಾಡಿ ಎಂದು ದೂರುತ್ತಿದ್ದಾರೆ. ಅವರು, ಪ್ರತಿಯೊಂದು ಬಸ್ ನಿಲ್ದಾಣದಲ್ಲೂ ವಿಪರೀತ ಜನ ಬಸ್ಸುಗಳಿಗಾಗಿ ಕಾಯುತ್ತಾ ನಿಂತಿರುತ್ತಾರೆ, ಆದ್ದರಿಂದ ಹೆಚ್ಚಿನ ಸಂಖ್ಯೆಯ ಬಸ್ಸುಗಳನ್ನು ಓಡಿಸುವುದು ಖಂಡಿತ ಅವಶ್ಯ ಎಂದು ದೂರಿದ್ದಾರೆ. ಇದನ್ನು ನಾನು ಗಮನಕ್ಕೆ ತೆಗೆದುಕೊಂಡಿದ್ದೇನೆ. ಹಾಗೂ ಬೆಂಗಳೂರಿನಲ್ಲಿ ಬಸ್ ಸೇವೆಗಳು ಸುಗಮಗೊಳ್ಳುವಂತೆ ನೋಡಿಕೊಳ್ಳಲು ನಾನು ಪ್ರಯತ್ನಿಸುತ್ತೇನೆ. ಈ ವಿಷಯದ ಬಗ್ಗೆ ವಿಚಾರಣೆ ಮಾಡಿ ಬೆಂಗಳೂರು ಸಾರಿಗೆ ಸೇವೆಗೆ ಸಂಬಂಧಿಸಿದಂತೆನಷ್ಟವನ್ನು ಕಡಿಮೆ ಮಾಡಲು ಹಾಗೂ ಸೇವೆಗಳನ್ನು ಸುಗಮಗೊಳಿಸಲು ಮಾರ್ಗೋಪಾಯಗಳನ್ನು ಸೂಚಿಸುವ ಸಲುವಾಗಿ ಒಂದು ಅಧಿಕಾರಿಗಳ ಸಮಿತಿಯನ್ನು ನಾನು ನೇಮಕ ಮಾಡಿದ್ದೇನೆ. ಬೆಂಗಳೂರು ಸಾರಿಗೆ ಸೇವೆ ಹೊರತು ಪಡಿಸಿ ಬೇರಾವುದೇ ವಿಭಾಗದಲ್ಲಿ ಕಳೆದ ವರ್ಷದಲ್ಲಿ ನಷ್ಟವಾಗಿಲ್ಲ ಎಂಬುದನ್ನು ತಿಳಿಸಲೇ ಬೇಕಾಗಿದೆ. ಗುಲ್ಬರ್ಗ ವಿಭಾಗದಲ್ಲಿ ನಮಗೆ 40 ಲಕ್ಷ ರೂಪಾಯಿನಷ್ಟವಾಗಿದೆ ಎಂಬ ಮಾಹಿತಿ ಮಾನ್ಯ ಸದಸ್ಯರಾದ ಚಂದ್ರಕಾಂತ ಅವರಿಗೆ ಎಲ್ಲಿಂದ ಸಿಕ್ಕಿತೋ ನನಗೆ ಗೊತ್ತಿಲ್ಲ. ನನ್ನ ಉತ್ತರವನ್ನು ಮುಕ್ತಾಯಗೊಳಿಸುವುದಕ್ಕೆ ಮುಂಚೆ ನಾನೊಂದು ವಿಷಯವನ್ನು ತಿಳಿಸಬಯಸುತ್ತೇನೆ. ಕಂಡಕ್ಟರುಗಳನ್ನು ಪುನರ್ ನಿಯೋಜಿಸುವಾಗ ಜಾತೀಯತೆ ಮಾಡಲಾಗುತ್ತಿದೆ ಎಂದು ಮಾನ್ಯ ಸದಸ್ಯರಾದ ಶ್ರೀ ಸದಾಶಿವ ಪಾಟೀಲ್ ಅವರು ತಿಳಿಸಿದರು. ಇದು ನನ್ನ ಪಾಲಿಗೆ ಖಂಡಿತ ದುರದೃಷ್ಟಕರವಾದ ಮತ್ತು ನೋವಿನ ಸಂಗತಿಯಾಗಿದೆ. ಅನುಕಂಪದ ಅರ್ಜಿಗಳನ್ನು ಸ್ವೀಕರಿಸಿದನಂತರ, ನಾನು ನೇಮಕ ಮಾಡಿದ ಕಂಡಕ್ಟರುಗಳ ಒಟ್ಟು ಸಂಖ್ಯೆ 36. ಈ 36 ಜನರ ಪೈಕಿ ಹೆಚ್ಚಿನವರು ಇತರ ಕೋಮುಗಳಿಗೆ ಸೇರಿದವರು. ನನ್ನ ಕೋಮಿಗೆ ಸೇರಿರುವವರಲ್ಲ. ಇವರನ್ನು ಪುನರ್ ನೇಮಕ ಮಾಡುವಾಗ ಏನಾದರೂ ತಾರತಮ್ಯ ಮಾಡಿದ್ದರೆ ಮತ್ತು ಒಂದು ಕೋಮಿಗೆ ಸಹಾಯವಾಗುವಂತಹ ಯಾವುದೇ ನೀತಿಯನ್ನು ಅಳವಡಿಕೊಂಡಿದ್ದರೆ. ಮಾನ್ಯ ಸದಸ್ಯರ ಟೀಕೆಗೆ ಸ್ವಲ್ಪ ಬೆಲೆಯಿರುತ್ತಿತ್ತು. ಈ ಕಂಡಕ್ಟರ್‌ಗಳನ್ನು ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಮತ್ತು ಬೆಂಗಳೂರಿನಲ್ಲಿ ಸಾರಿಗೆ ಇಲಾಖೆ ಇದ್ದಾಗ ನೇಮಕ ಮಾಡಲಾಗಿತ್ತು. ಅವರೆಲ್ಲರನ್ನು ಪ್ರಧಾನ ವ್ಯವಸ್ಥಾಪಕರು ನೇಮಕ ಮಾಡಿದ್ದು, ವಿಭಾಗೀಯ ನಿಯಂತ್ರಣಾಧಿಕಾರಿಯವರು ಕೆಲಸದಿಂದ ತೆಗೆದುಹಾಕಿದ್ದರು. ಇದು ತಪ್ಪು. ಈ ಎಲ್ಲರೂ ಅನುಕಂಪದ ಅರ್ಜಿಗಳನ್ನು ನೀಡಿದ್ದರು. ನಾನು ಅವರಿಗೆ ಹೊಸ ಉದ್ಯೋಗಗಳನ್ನು ನೀಡಿದೆ. ಹಿಂದಿನ ಅವಧಿಯ ಮಜೂರಿಗಳನ್ನು ನೀಡದಿದ್ದುದರಿಂದ ಮತ್ತು ಉಚ್ಚ ನ್ಯಾಯಾಲಯದ ತೀರ್ಪು ಅವರ ಪರವಾಗಿದ್ದುದರಿಂದ ನಿಗಮಕ್ಕೆ ಅನುಕೂಲವೇ ಆಯಿತು.

# ಅಧ್ಯಾಯ - 3

## ಕರ್ನಾಟಕದಲ್ಲಿ ಪ್ರವಾಸಿ ತಾಣಗಳ ಅಭಿವೃದ್ಧಿ ಕುರಿತು ಚರ್ಚೆ

### ಶ್ರೀರಂಗಪಟ್ಟಣವನ್ನು ಪ್ರವಾಸಿ ಕೇಂದ್ರವಾಗಿ ಅಬಿವೃದ್ಧಿಪಡಿಸುವುದು

. **ಶ್ರಿ ಬಿ. ದೊಡ್ಡ ಬೋರೇಗೌಡ ( ಶ್ರೀರಂಗಪಟ್ಟಣ)** ಸಾರಿಗೆ ಸಚಿವರು ದಯವಿಟ್ಟು ಇದನ್ನು ತಿಳಿಸುವರೇ?

ಎ) ಶ್ರೀರಂಗಪಟ್ಟಣದಲ್ಲಿ ಆದಿ ರಂಗನಾಥ ದೇವಾಲಯ, ಪಕ್ಷಿ ಧಾಮ, ಧರಿಯಾದೌಲತ್, ಗುಂಬಜ್, ಕಾವೇರಿನದಿ ಸಂಗಮ ಮುಂತಾದಂಥ ಹೆಸರಾಂಥ ಪ್ರೇಕ್ಷಣೀಯ ಸ್ಥಳಗಳಿರುವುದರಿಂದ ಇದನ್ನು ಪ್ರವಾಸಿ ಕೇಂದ್ರವಾಗಿ ಮಾಡಲು ತೆಗೆದುಕೊಂಡಿರುವ ಕ್ರಮಗಳು ಮತ್ತು ಸದರಿ ಕೆಲಸ ಎಷ್ಟು ವರ್ಷಗಳಲ್ಲಿ ಪೂರ್ಣಗೊಳ್ಳುತ್ತದೆ:

(ಬಿ) ಸದರಿ ಕೆಲಸದ ಅನುಷ್ಠಾನದಲ್ಲಿ ವಿಳಂಬವಾಗುತ್ತಿರುವದರಿಂದ ಸ್ಥಳೀಯ ಮತ್ತು ವಿದೇಶಿ ಪ್ರವಾಸಿಗರಿಗೆ ತೊಂದರೆಯಾಗುತ್ತಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ

(ಸಿ) ಅದರ ಅಂದಾಜು ವೆಚ್ಚ

(ಡಿ) ಪಕ್ಷಿಧಾಮಕ್ಕೆ ಸಂಪರ್ಕ ರಸ್ತೆ ಇಲ್ಲದಿರುವುದರಿಂದ ಪ್ರವಾಸಿಗರಿಗೆ ಆಗುತ್ತಿರುವ ತೊಂದರೆ ಸಂಬಂಧದದಲ್ಲಿ ತೆಗೆದುಕೊಂಡಿರುವ ಕ್ರಮಗಳು.

**ಶ್ರೀ ಮೊಹಮದ್ ಅಲಿ ( ಸಾರಿಗೆ ಸಚಿವರು) –**

(ಎ) ಲಭ್ಯವಿರುವ ಹಣಕಾಸು ಸಂಪನ್ಮೂಲಗಳು ತುಂಬಾ ಕಡಿಮೆಯಿರುವುದರಿಂದ ಕೇವಲ ಕೆಲವೇ ಕೆಲವು ಪ್ರಮುಖ ಸ್ಥಳಗಳನ್ನು ಅಭಿವೃದ್ಧಿಪಡಿಸಲು ಉದ್ದೇಶಿಸಲಾಗಿದೆ. ಹಣಕಾಸು ಸ್ಥಿತಿ ಅನುಮತಿಸಿದಾಗ ಇತರ ಅರ್ಹ ಪ್ರವಾಸಿ ಸ್ಥಳಗಳನ್ನು ಅಭಿವೃದ್ಧಿಗೆ ಪರಿಗಣಿಸಲಾಗುವುದು.

(ಬಿ) ಇಲ್ಲ

(ಸಿ) ಖಂಡ (ಎ)ಗೆ ಉತ್ತರ ನೀಡುವುದರಿಂದ ಇದು ಉದ್ಭವಿಸುವುದಿಲ್ಲ.

(ಡಿ) ಪಕ್ಷಿಧಾಮವು ಶ್ರೀರಂಗಪಟ್ಟಣದಿಂದ ಪಾಲಹಳ್ಳಿಗೆ ಹೋಗುವ ದಾರಿಯಲ್ಲಿ ಬಲಕ್ಕೆ ಹೋದರೆ ಸುಮಾರು 1.1 ಕಿ. ಮೀ ದೂರದಲ್ಲಿದೆ. ಈ ರಸ್ತೆಯ ಒಟ್ಟು ಉದ್ದದಲ್ಲಿ ಲೋಕೋಪಯೋಗಿ ಇಲಾಖೆಯ ಅಧೀನದಲ್ಲಿರುವ 0.3 ಕಿ. ಮೀ ಉದ್ದದ ರಸ್ತೆಗೆ ಜಲ್ಲಿ ಹಾಕಿ ಉತ್ತಮ ಸ್ಥಿತಿಯಲ್ಲಿ ನಿರ್ವಹಿಸಲಾಗಿದೆ. ಉಳಿದ 0.8 ಕಿ. ಮೀ ಉದ್ದದ ರಸ್ತೆಯನ್ನು ಸುಧಾರಣೆ ಮಾಡುವ ವಿಷಯವನ್ನು ಅರಣ್ಯ ಇಲಾಖೆಯು ಪರಿಗಣಿಸುತ್ತದೆ.

**ಶ್ರೀ ಬಿ. ದೊಡ್ಡಬೋರೇಗೌಡ** – ಬಿ ಪ್ರಶ್ನೆಗೆ ಉತ್ತರ ಕೊಡುತ್ತಾ ಲಭ್ಯವಿರುವ ಆರ್ಥಿಕ ಸಂಪನ್ಮೂಲಗಳು ಅತ್ಯಲ್ಪವಾದ್ದರಿಂದ ಕೆಲವೊಂದು ಪ್ರಮುಖ ಸ್ಥಳಗಳನ್ನು ಮಾತ್ರ ಅಭಿವೃದ್ಧಿಗೊಳಿಸಬೇಕೆಂದು ಉದ್ದೇಶಿಸಲಾಗಿದೆ ಎಂದು ಹೇಳಿದ್ದೀರಿ. ಆ ಪ್ರಮುಖ ಸ್ಥಳಗಳು ಯಾವುವು ಮತ್ತು ಅವುಗಳ ಅಭಿವೃದ್ಧಿಗಾಗಿ ಎಷ್ಟು ಹಣ ಖರ್ಚು ಮಾಡಬೇಕೆಂದಿದ್ದೀರಿ ಎಂಬುದನ್ನು ಹೇಳುತ್ತೀರಾ?

**ಶ್ರೀ ಮೊಹಮದ್ ಅಲಿ** –ಕಳೆದ 3 ವರ್ಷಗಳಲ್ಲಿ ಪ್ರವಾಸೋದ್ಯಮ ಇಲಾಖೆಗೆ ಬಜೆಟ್‌ನಲ್ಲಿ ಕೇವಲ 5 ಲಕ್ಷ ರೂಪಾಯಿಗಳನ್ನು ಒದಗಿಸಲಾಗಿದೆ. ಅ ಪೈಕಿ 3 ಲಕ್ಷ ರೂ.ಗಳನ್ನು ಸಂಬಳ ಸಂದಾಯಕ್ಕಾಗಿ ಖರ್ಚು ಮಾಡಲಾಗಿದೆ. ಉಳಿದ 5 ಲಕ್ಷ ರೂ. ಗಳನ್ನು ಬಹುತೇಕ ಪ್ರಚಾರ ಮತ್ತು ಇತರ ಕಾಮಗಾರಿಗಾಗಿ ಬಳಸಲಾಗಿದೆ.

**ಶ್ರೀ ಬಿ. ದೊಡ್ಡಬೋರೇಗೌಡ** – ಮೈಸೂರು ಮತ್ತು ಬೆಂಗಳೂರುನಗರಗಳ ಮಧ್ಯೆ ಇರುವ ಶ್ರೀರಂಗಪಟ್ಟಣ ಬಹಳ ಇತಿಹಾಸ ಪ್ರಸಿದ್ಧವಾದ ಸ್ಥಳವಾಗಿದೆ. ಅಲ್ಲಿ ಕಾವೇರಿನದಿ ಹರಿಯುತ್ತದೆ. ದರಿಯಾ ದೌಲತ್, ಗುಂಬಜ್ ಮುಂತಾದವೆಲ್ಲ ಇವೆ. ಇಂತಹ ಸ್ಥಳವನ್ನು ಸರ್ಕಾರದವರು ಹೆಚ್ಚಿನ ಹಣ ಖರ್ಚು ಮಾಡಿ ಅಭಿವೃದ್ಧಿಗೊಳಿಸುವುದಕ್ಕೆ ಇರುವ ಅಡ್ಡಿ ಆತಂಕಗಳು ಏನು? ಅದೇ ರಾಜ್ಯದ ಹೊರಗೆ ಇರುವ ಶ್ರೀ ಶೈಲದಲ್ಲಿ ಮೂರು ಲಕ್ಷ ರೂಪಾಯಿಗಳನ್ನು ಖರ್ಚು ಮಡುವುದಕ್ಕೆ ಕಾರಣವೇನು?

**ಶ್ರೀ ಮೊಹಮದ್ ಅಲಿ** – ಶ್ರೀಶೈಲಂನಲ್ಲಿ ಎಷ್ಟು ಹಣ ಖರ್ಚು ಮಾಡಲಾಗಿದೆ ಎಂಬುದು ನನಗೆ ಗೊತ್ತಿಲ್ಲ. ದತ್ತಿ ಇಲಾಖೆ ಸ್ವಲ್ಪ ಹಣವನ್ನು ಖರ್ಚು ಮಾಡಬಹುದಾದ ಸಾಧ್ಯತೆ ಇದೆ. ಆದರೆ ಬಜೆಟ್‌ನಲ್ಲಿ ಹಣ ಒದಗಿಸುವುದಕ್ಕೆ ಸಂಬಂಧಪಟ್ಟಂತೆ ಹೇಳುವುದಾದರೆ ಪ್ರವಾಸೋದ್ಯಮಕ್ಕೆ ಒದಗಿಸಿರುವ ಹಣ ತುಂಬಾ ಅಲ್ಪ ಮತ್ತು ಹಣಕಾಸಿಗೆ ಸಂಬಂಧಿಸಿದಂತೆ ಮುಕ್ತ ಮಾರುಕಟ್ಟೆಯ ಸೌಲಭ್ಯವನ್ನು ಪಡೆಯಲು ಪ್ರವಾಸ ಅಭಿವೃದ್ಧಿ ನಿಗಮವನ್ನು ರಚಿಸಲು ಈಗ ಸರ್ಕಾರ ವಿಚಾರ ಮಾಡುತ್ತಿದೆ.

**ಶ್ರೀ ಬಿ. ದೊಡ್ಡಬೋರೆಗೌಡ:** ಈ ಬಗ್ಗೆ ಶ್ರೀರಂಗಪಟ್ಟಣ ಮತ್ತು ಸೋಮನಾಥಪುರ ದೇವಾಲಯ ಇವುಗಳನ್ನು ಹೆಚ್ಚು ರಕ್ಷಣೆ ಮಾಡಬೇಕು ಎಂದು ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ಆದೇಶ ಬಂದಿಲ್ಲವೆ?

**ಶ್ರೀ ಮೊಹಮದ್ ಅಲಿ** – ಹೌದು ಬಜೆಟ್‌ನಲ್ಲಿ ಎಷ್ಟು ಹಣ ಒದಗಿಸಲಾಗಿದೆಯೋ ಅದು ಭಾರತ ಸರ್ಕಾರದಿಂದ ಪಂಚವಾರ್ಷಿಕ ಯೋಜನೆ ಅವಧಿಯಲ್ಲಿ ಮುಂದೆ ಬರುತ್ತದೆ. ಮೈಸೂರು ಸರ್ಕಾರದ ಪ್ರವಾಸೋದ್ಯಮ ಇಲಾಖೆಗೆ ಸಂಬಂಧಪಟ್ಟಂತೆ ಹಲವಾರು ಯೋಜನೆಗಳನ್ನು ಕೈಗೊಳ್ಳಲು ನಾವು ಉದ್ದೇಶಿಸಿದ್ದೇವೆ ಮತ್ತು ಆ ಬಗ್ಗೆ ನಾವು ಸಲಹೆ ಸೂಚನೆಗಳನ್ನು ನೀಡಿದ್ದೇವೆ. ಆದರೆ ಪ್ರವಾಸೋದ್ಯಮ ಇಲಾಖೆಗೆ ಹೆಚ್ಚು ಯೋಜನಾ ಹಣಕಾಸು ಏರ್ಪಾಟು ಆಗುವಂತೆ ಮಾಡುವುದು ಕಷ್ಟ.

## ಉಳವಿಯನ್ನು ಪ್ರವಾಸಿ ಸ್ಥಳವಾಗಿ ಅಭಿವೃದ್ಧಿಪಡಿಸುವುದು

**ಶ್ರೀ ಆರ್. ಜಿ. ವಾಲಿ(ಹುಬ್ಬಳ್ಳಿ)** ಸಾರಿಗೆ ಸಚಿವರು ದಯವಿಟ್ಟು ಇದನ್ನು ತಿಳಿಸುವರೇ?

ಎ) ಹಿಂದೂಗಳ ಪುಣ್ಯಕ್ಷೇತ್ರ ಮತ್ತು ಪ್ರಸಿದ್ಧ ಯಾತ್ರಾಸ್ಥಳ ಹಾಗೂ ವಿಶಿಷ್ಟ ನೈಸರ್ಗಿಕ ಸೌಂದರ್ಯದ ನೆಲೆಯಾಗಿರುವ ಉಳಿವಿಯನ್ನು ಪ್ರವಾಸಿ ಕೇಂದ್ರವಾಗಿ ಅಭಿವೃದ್ಧಿಪಡಿಸಲಾಗುತ್ತದೆಯೇ;

ಬಿ) ಹಾಗಿದ್ದರೆ, ಪ್ರವಾಸಿಗರಿಗೆ ಒದಗಿಸುವಂತಹ ಸೌಲಭ್ಯಗಳು'

(ಸಿ) ಈ ಪುಣ್ಯಕ್ಷೇತ್ರಕ್ಕೆ ಹೋಗುವ ದಾರಿಯಲ್ಲಿ ಸೇತುವೆ ನಿರ್ಮಾಣಕಾರ್ಯ ಇನ್ನೂ ಮುಗಿದಿಲ್ಲ ಎಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಡಿ) ಹಾಗಿದ್ದರೆ, ಅದು ಯಾವಾಗ ಮುಗಿಯುತ್ತದೆ ಮತ್ತು ರಸ್ತೆಯನ್ನು ವರ್ಷದಾದ್ಯಂತ ಮೋಟಾರು ಓಡಾಡುವಂತೆ ಮಾಡುವುದು ಯಾವಾಗ;

(ಇ) ಈ ಪುಣ್ಯಕ್ಷೇತ್ರಕ್ಕೆ ಭೇಟಿ ನೀಡುವ ಯಾತ್ರಾರ್ಥಿಗಳ ಉಪಯೋಗಕ್ಕಾಗಿ ಒಂದು ಪ್ರವಾಸಿ ಧಾಮವನ್ನು ನಿರ್ಮಾಣ ಮಾಡಲು ಸರ್ಕಾರದ ಮುಂದೆ ಯಾವುದಾದರೂ ಪ್ರಸ್ತಾವ ಇದೆಯೇ?

**ಶ್ರೀ ಮೊಹಮದ್ ಅಲಿ (ಸಾರಿಗೆ ಸಚಿವರು) –**

(ಎ) ಹೌದು

(ಬಿ) ಪ್ರವಾಸಿ ಧಾಮವನ್ನು ನಿರ್ಮಾಣ ಮಾಡಲು ಉದ್ದೇಶಿಸಲಾಗಿದೆ

(ಸಿ)ಹೌದು

(ಡಿ)ಆದಷ್ಟು ಬೇಗನೆ

(ಇ) ಹೌದು

## ವೇಣೂರನ್ನು ಪ್ರವಾಸಿ ಕೇಂದ್ರವಾಗಿ ಅಭಿವೃದ್ಧಿಪಡಿಸುವುದು.

**ಶ್ರೀ ಜಿ. ಮಹದೇವ ಜಿ. ಬಣಕಾರ್ (ಬ್ಯಾಡಗಿ) (ಶ್ರೀ ರತನ್‌ಕುಮಾರ್ ಕಟೆಯಮರ್, (ಮೂಡಬಿದ್ರಿ) ಇವರ ಪರವಾಗಿ)**

ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಇದನ್ನು ತಿಳಿಸುವರೇ –

(ಎ) ದಕ್ಷಿಣ ಕನ್ನಡ ಜಿಲೆಯಲ್ಲಿರುವ " ವೇಣೂರು" ಎಂಬ ಸ್ಥಳವನ್ನು ಪ್ರವಾಸಿ ಕೇಂದ್ರವಾಗಿ ಆಯ್ಕೆ ಮಾಡಲು ಉದ್ದೇಶಿಸಿರುವುದು ನಿಜವೇ?

(ಬಿ) ದಕ್ಷಿಣ ಕನ್ನಡದ ಕಾರ್ಕಳದಲ್ಲಿರುವ "ಜೈನ ಯುವಕ ಸಂಘ"ದ ಅಥವಾ ಮಂಗಳೂರಿನ ಜಿಲ್ಲಾ ಅಭಿವೃದ್ಧಿ ಪರಿಷತ್‌ನ ಅಭಿಪ್ರಾಯವನ್ನೇನಾದರೂ ಸರ್ಕಾರ ಪಡೆದುಕೊಂಡಿದೆಯೇ?

(ಸಿ) ಮೂಡಬಿದ್ರೆಯಲ್ಲಿ ಪ್ರವಾಸಿ ಕೇಂದ್ರವನ್ನು ರಚಿಸುವ ಸಂಬಂಧ ಸರ್ಕಾರದ ನಿರ್ಧಾರವೇನು?

**ಶ್ರೀ ಮೊಹಮದ್ ಅಲಿ (ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)**

(ಎ) ಇಲ್ಲ

(ಬಿ) ಖಂಡ (ಎ)ಗೆ ಉತ್ತರ ನೀಡಿರುವ ದೃಷ್ಟಿಯಿಂದ ಇದು ಉದ್ಭವಿಸುವಿದಿಲ್ಲ

(ಸಿ) ಈ ವಿಷಯ ಸರ್ಕಾರದ ಪರಿಶೀಲನೆಯಲ್ಲಿದೆ.

**ಶ್ರೀ ಎಚ್. ಬಿ. ಜ್ವಾಲನಯ್ಯ** – ಮೂಡಬಿದ್ರಿ ಜೈನರ ಯಾತ್ರಾಸ್ಥಳವಾಗಿದ್ದು ಪ್ರತಿನಿತ್ಯವೂ ಅಲ್ಲಿಗೆ ಬರುವ ಯಾತ್ರಾರ್ಥಿಗಳಿಗಾಗಿ ತೊಂದರೆಯಾಗವುದರಿಂದ ಅಲ್ಲಿ ಟೂರಿಸ್ಟ್ ಹೊಂ ಕಟ್ಟಲು ಏರ್ಪಾಟು ಮಾಡುತ್ತೀರಾ?

**ಶ್ರೀ ಮೊಹಮದ್ ಅಲಿ** –ಮೂಡಬಿದಿರೆ ಒಂದು ತುಂಬಾ ಪ್ರಮುಖವಾದ ಯಾತ್ರಾಸ್ಥಳ ಎಂಬುದರಲ್ಲಿ ಯಾವುದೇ ಅನುಮಾನ ಇಲ್ಲ. ಹಣಕಾಸಿನ ಕೊರತೆಯಿಂದಾಗಿ ಅಲ್ಲಿ ಸ್ಥಳಾವಕಾಶ ಮತ್ತು ಇತರ ಸೌಲಭ್ಯಗಳನ್ನು ಒದಗಿಸುವ ಸಲುವಾಗಿ ಕೆಲಸ ಕೈಗೊಳ್ಳಲು ಸಾಧ್ಯವಾಗಿಲ್ಲ. ಈ ವಿಷಯವನ್ನು ಪರಿಶೀಲಿಸಲಾಗುತ್ತಿದೆ. ಸಾಧ್ಯವಾದರೆ, 4ನೇ ಪಂಚವಾರ್ಷಿಕ ಯೋಜನಾವಧಿಯನ್ನು ಇಲ್ಲಿ ಒಂದು ವಿಶ್ರಾಂತಿಧಾಮವನ್ನು ನಿರ್ಮಾಣ ಮಾಡುವ ಯೋಜನೆಯನ್ನು ಸೇರಿಸಲು ನಾವು ಪ್ರಯತ್ನಿಸುತ್ತಿದ್ದೇವೆ.

**ಸನ್ಮಾನ್ಯ ಸಭಾಧ್ಯಕ್ಷರು** – ಇನ್ನೊಂದು ಪ್ರಶ್ನೆಯಿದೆ. ಅದು ಪ್ರಶ್ನೆ ಸಂಖ್ಯೆ 9 ಮೊದಲನೇ ಪಟ್ಟಿಯಿಂದ ಅದನ್ನು ತೆಗೆದುಕೊಳ್ಳಲಾಗಿದೆ. 9 ಮತ್ತು 60, ಈ ಎರಡೂ ಪ್ರಶ್ನೆಗಳು ಪೂರಕ ಪ್ರಶ್ನೆಗಳಿಗಾಗಿ ಸದನದ ಮುಂದಿವೆ.

## ಪ್ರವಾಸಿ ಕೇಂದ್ರವಾಗಿ ತೊಣ್ಣೂರು ಕೆರೆ

**ಶ್ರೀ ಎನ್. ಎ. ಚನ್ನೇಗೌಡ (ಪಾಂಡವ ಪುರ)–**

(ಎ) ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಇದನ್ನು ತಿಳಿಸುವರೇ:

ಪ್ರಸಿದ್ಧ ಐತಿಹಾಸಿಕ ತೊಣ್ಣೂರು ಕೆರೆಯನ್ನು ಪ್ರವಾಸಿ ಕೇಂದ್ರವಾಗಿ ಮಾಡುವ ಯಾವುದಾದರೂ ಪ್ರಸ್ತಾಪ ಇದೆಯೇ;

(ಬಿ) ಸದರಿ ಕೆರೆಯನ್ನು ಸ್ವಚ್ಛಗೊಳಿಸಲು ನೀವು ತೆಗೆದುಕೊಂಡಿರುವ ಕ್ರಮ.

**: ಶ್ರೀ ಮೊಹಮದ್ ಅಲಿ( ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)**

(ಎ) ಇಲ್ಲ

(ಬಿ) ಈ ಕೆರೆಯನ್ನು ಅದರ ಅಡಿಯಲ್ಲಿರುವ ಅಚ್ಚುಕಟ್ಟು ಪ್ರದೇಶಕ್ಕೆ ನೀರುಣಿಸುವಂತಹ ಉತ್ತಮ ಸ್ಥಿತಿಯಲ್ಲಿ ಲೋಕೋಪಯೋಗಿ ಇಲಾಖೆ ನಿರ್ವಹಿಸಿದೆ. ಮೀನುಗಾರಿಕೆಯಿಂದ ನೀರು ಹೊಲಸಾಗಿ ಕುಡಿಯುವ ಉದ್ದೇಶಕ್ಕೆ ಅನುಪಯುಕ್ತವಾಗಿರುವುದರಿಂದ ಈ ಕೆರೆಯಲ್ಲಿ ಮೀನು ಹಿಡಿಯುವುದಕ್ಕೆ ಲೈಸೆನ್ಸ್‌ಗಳನ್ನು ನೀಡಬಾರದೆಂದು ಆ ಇಲಾಖೆಯು ಮೀನುಗಾರಿಕಾ ಇಲಾಖೆಗೆ ಪತ್ರ ಬರೆದಿದೆ.

**ಶ್ರೀ ಎನ್. ಚನ್ನೇಗೌಡ**– ಒಂದು ಸ್ಥಳವನ್ನು ಪ್ರವಾಸಿ ಕೇಂದ್ರವಾಗಿ ಮಾಡುವಂತಹ ಸಾಮಾನ್ಯ ಅರ್ಹತೆಗಳು ಹಾಗೂ ಸನ್ನಿವೇಶಗಳು ಯಾವುವು?

**ಶ್ರೀ ಮೊಹಮ್ಮದ್ ಅಲಿ:** ಪ್ರಮುಖ ಷರತ್ತುಗಳಲ್ಲಿ ಒಂದು ಆ ಸ್ಥಳಕ್ಕೆ ಪ್ರವಾಸಿಗರು ಹೆಚ್ಚಿನ ಸಂಖ್ಯೆಯಲ್ಲಿ ಬರಬೇಕು ಎಂಬುದು.

**ಶ್ರೀ ಎನ್. ಚನ್ನೇಗೌಡ** – ತೊಣ್ಣೂರು ಕೆರೆಯು ಹಿಂದೂಗಳ ಯಾತ್ರಾಸ್ಥಳವಾಗಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರಿ ಮೊಹಮದ್ ಅಲಿ:** ಹೌದು ತೊಣ್ಣೂರು ಐತಿಹಾಸಿಕ ಮಹತ್ವವುಳ್ಳದ್ದು. ಆದರೆ ವಿದೇಶಿಯ ಮತ್ತು ದೇಶಿಯ ಪ್ರವಾಸಿಗರಿಬ್ಬರಿಗೂ ಆಕರ್ಷಣೀಯವಾದಂಥ ಇನ್ನೂ ಹಲವಾರು ಸ್ಥಳಗಳು ಮೈಸೂರು ರಾಜ್ಯದಲ್ಲಿವೆ. ಸ್ಥಳಾವಕಾಶ, ಸಾರಿಗೆ ಸೌಲಭ್ಯ ಮತ್ತು ಇತರ ಸೌಕರ್ಯಗಳ ಅಲಭ್ಯತೆಯಿಂದಾಗಿ ಮಹತ್ವ ಸೀಮೀತಗೊಂಡಿದೆ.

**ಶ್ರೀ ಎನ್. ಎ. ಚನ್ನೇಗೌಡ** – ಟಿಪ್ಪು ನಿರ್ಮಾಣ ಮಾಡಿದ ತೊಣ್ಣೂರು ಕೆರೆ ಮತ್ತು ಮೋತಿ ತಳವಾ ಇವು ರಮಣೀಯ ಸೌಂದರ್ಯವನ್ನು ಹೊಂದಿದ್ದು, ಭಾರತದ ಎಲ್ಲೆಡೆಯಿಂದ ಪ್ರವಾಸಿಗರನ್ನು ಆಕರ್ಷಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಮೊಹಮದ್ ಅಲಿ** – ಹಲವಾರು ಸ್ಥಳಗಳಿವೆ ಎಂದು ನಾನು ಈಗಷ್ಟೇ ಹೇಳಿದೆ. ತೊಣ್ಣೂರಿಗೆ ಸಂಬಂಧಪಟ್ಟಂತೆ ಹೇಳುವುದಾದರೆ ಐತಿಹಾಸಿಕ ಮಹತ್ವ ಹೊಂದಿರುವುದನ್ನು ಬಿಟ್ಟರೆ, ಪ್ರವಾಸಿಗರನ್ನು ಆಕರ್ಷಿಸುವಂತಹ ರಮಣೀಯ ಸೌಂದರ್ಯ ಇದರಲಿಲ್ಲ.

**ಶ್ರೀ ಎ. ಎನ್. ಪಾಟೀಲ್** – ಬೀದರ್ ಜಿಲ್ಲೆಯಲ್ಲಿ ಬಹುಮನಿ ದೊರೆಗಳ ಸಮಾದಿಗಳು ಮತ್ತು ಇತರ ಅವಶೇಷಗಳಂಥ ಪ್ರಮುಖವಾದ ಸ್ಥಳಗಳಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ?

**ಶ್ರೀ ಮೊಹಮದ್ ಅಲಿ** – ಈ ಪ್ರಶ್ನೆಯಿಂದ ಈ ಪೂರಕ ಪ್ರಶ್ನೆ ಹೇಗೆ ಉದ್ಭವಿಸಿತು ಎನ್ನುವುದು ನನಗೆ ಅರ್ಥವಾಗುತ್ತಿಲ್ಲ.

# ಪ್ರವಾಸಿ ಕೇಂದ್ರಗಳ ಅಭಿವೃದ್ಧಿ

**ಶ್ರೀ ಹೆಚ್. ಸಿ. ಲಿಂಗಾರೆಡ್ಡಿ** ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಇದನ್ನು ತಿಳಿಸುವರೆ –

(ಎ) 3ನೇ ಯೋಜನಾವಧಿಯಲ್ಲಿ ರಾಜ್ಯದಲ್ಲಿ ಅಭಿವೃದ್ಧಿಪಡಿಸಿದ ಪ್ರವಾಸಿ ಕೇಂದ್ರಗಳ ಸಂಖ್ಯೆ ಮತ್ತು ಹೆಸರುಗಳು;

(ಬಿ) ಈವರೆಗೆ ಅವುಗಳಿಗೆ ಮಾಡಿರುವ ಖರ್ಚು;

(ಸಿ) 4ನೇ ಯೋಜನಾವಧಿಯಲ್ಲಿ 4ನೇ ಯೋಜನಾ ಪ್ರವಾಸಿ ಕಾರ್ಯಕ್ರಮದ ಜೊತೆಗೆ ಅಭಿವೃದ್ಧಿಪಡಿಸಲು ಪ್ರವಾಸಿ ಕೇಂದ್ರಗಳಾಗಿ ಆಯ್ಕೆ ಮಾಡಿರುವ ಸ್ಥಳಗಳು ಹಾಗೂ ರಾಜ್ಯದಲ್ಲಿ ಅದಕ್ಕೆ ಮಾಡಿರುವ ಹಣಕಾಸು ಏರ್ಪಾಟು, ಅದರ ವಿವರಗಳೊಂದಿಗೆ;

**ಶ್ರೀ ಮೊಹಮದ್ ಅಲಿ (ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)** –

**(ಎ)** ಈ ಮುಂದಿನ 15 ಸ್ಥಳಗಳನ್ನು ಪ್ರವಾಸಿ ಕೇಂದ್ರಗಳಾಗಿ ಅಭಿವೃದ್ಧಿಪಡಿಸಲಾಗಿದೆ.

ಜೋಗಜಲಪಾತ, ಬೀದರ್, ಬಸವಕಲ್ಯಾಣ, ಗುಲ್ಬರ್ಗ, ಮಡಿಕೇರಿ, ಬಾದಾಮಿ, ಐಹೊಳೆ, ಬಿಜಾಪುರ, ತುಂಗಭದ್ರಾ ಆಣೆಕಟ್ಟು, ಕೃಷ್ಣರಾಜಸಾಗರ, ಮಂಗಳೂರು, ದೇವರಾಯನದುರ್ಗ, ಮಹದೇಶ್ವರ ಬೆಟ್ಟ, ಮಾಗೋಡು ಜಲಪಾತ ಮತ್ತು ಹಂಪಿ.

(ಬಿ) ರೂ 14.26 ಲಕ್ಷ

(ಸಿ) 4ನೇ ಯೋಜನಾವಧಿಯಲ್ಲಿ ಪ್ರವಾಸಿ ಕೇಂದ್ರಗಳಾಗಿ ಅಭಿವೃದ್ಧಿಪಡಿಸಲು ತಾತ್ಕಾಲಿಕವಾಗಿ ಅಯ್ಕೆ ಮಾಡಿರುವ ಸ್ಥಳಗಳು ಇಂತಿವೆ.–

ಗೋಕಾಕ್ ಜಲಪಾತ, ಬಂಡೀಪುರ, ಲುಷಿಂಗ್‌ಟನ್ ಜಲಪಾತ,ನಂದಿಬೆಟ್ಟ, ವಾಣಿವಿಲಾಸ ಸಾಗರ, ಮರವಂತೆ, ಮೈಸೂರು (ನೆಹರು ಲೋಕ) ಸೋಮನಾಥಪುರ, ಶಿವಗಂಗೆ, ಜೋಗಿಮಠ ಎಲ್ಲಮ್ಮಗುಡ್ಡ, ಕೂಡಲಸಂಗಮ, ಆಗುಂಬೆ, ಮಲ್ಪೆ, ಗೋಕರ್ಣ. 4ನೇ ಯೋಜನಾ ಪ್ರಸ್ತಾಪಗಳನ್ನು ಇನ್ನೂ ಪೂರ್ಣಗೊಳಿಸಿಲ್ಲ.

**ಶ್ರೀ ಬಿ. ಭಾಸ್ಕರಶೆಟ್ಟಿ**– ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೆಲಸ ಮಾಡುತ್ತಿದ್ದ ಕೆಲವರನ್ನು ಎಂದರೆ ಮೂರನೇ ದರ್ಜೆ ಹಾಗೂ ನಾಲ್ಕನೇ ದರ್ಜೆ ನೌಕರರುಗಳನ್ನು ಮಲಪ್ರಭಾ ಹಾಗೂ ಘಟಪ್ರಭಾ ಯೋಜನೆಗಳಲ್ಲಿ ಕೆಲಸ ಮಾಡಲು ವರ್ಗ ಮಾಡಿದ್ದಾರೆ. ಇದರಲ್ಲಿ ಅನುಕೂಲವಿದ್ದವರನ್ನು ಮಾತ್ರ ಇಲ್ಲೇ ಬಿಟ್ಟು ಉಳಿಕೆ ಬಡಜನರನ್ನು ಬಹು ದೂರದ ಜಾಗಗಳಿಗೆ ಹಾಕಿರುವುದರಿಂದ ಅವರಿಗೆಲ್ಲಾ ತೊಂದರೆಯಾಗಿದೆ. ಇವರನ್ನು ಪುನ: ದಕ್ಷಿಣ ಕನ್ನಡ ಜಿಲ್ಲೆಗೆ ಕಡೆಗೆ ವರ್ಗ ಮಾಡಲು ಪ್ರಯತ್ನ ಮಾಡುತ್ತೀರಾ?

**ಶ್ರೀ ವಿರೇಂದ್ರ ಪಾಟಿಲ್** – ಈಗ ಹೊಸದಾಗಿ ಮಂಗಳೂರಿನಲ್ಲಿ ಒಂದು ಹೆಲ್ತ್ ಅಂಡ್ ವಾಟರ್ ಸಪ್ಲೈ ಸ್ಯಾನಿಟರಿ ಡಿವಿಜನ್ ಎಂದು ಮಾಡಲಾಗಿದೆ. ಇಲ್ಲಿಗೆ ಎಷ್ಟು ಜನರನ್ನು ಪೋಸ್ಟು ಮಾಡಲು ಸಾಧ್ಯವೋ ಅಷ್ಟು ಜನರನ್ನು ಅಲ್ಲೆ ಇರುವುದನ್ನು ಬೇರೆ ಸರ್ಕಲ್‌ಗಳಿಗೆ ಪೋಸ್ಟು ಮಾಡಬೇಕಾಗಿ ಬರುತ್ತದೆ.

## ಅಂತರ ರಾಷ್ಟ್ರೀಯ ಪ್ರವಾಸಿ ವರ್ಷ, 1967

**ಶ್ರೀ ಹೆಚ್. ಸಿ. ಲಿಂಗಾರೆಡ್ಡಿ (ಮಾಲೂರು)** ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಇದನ್ನು ತಿಳಿಸುವರೆ –

(ಎ) 1967ನ್ನು ಅಂತರರಾಷ್ಟ್ರೀಯ ಪ್ರವಾಸಿ ವರ್ಷವನ್ನಾಗಿ ಮಾಡಲು ತೆಗೆದುಕೊಂಡಿರುವ ಹಲವಾರು ಕ್ರಮಗಳು ರಾಜ್ಯದಲ್ಲಿ ಯಶಸ್ವಿಯಾಗಿವೆಯೇ;

(ಬಿ) ಈ ವರ್ಷ ಅದರ ಪರಿಣಾಮವಾಗಿ ಗಳಿಸಿದ ವಿದೇಶಿ ವಿನಿಮಯದ ಮೊತ್ತ;

(ಸಿ) ಈ ವರ್ಷ ಅನುಷ್ಠಾನಗೊಳಿಸುವುದಕ್ಕಾಗಿ ಪ್ರವಾಸಿ ಕೇಂದ್ರಗಳ ಯಾವುದಾದರೂ ಸಮಗ್ರ ಯೋಜನೆಯನ್ನು ಸಿದ್ಧಪಡಿಸಲಾಗಿದೆಯೇ;

(ಡಿ) ಹಾಗಿದ್ದರೆ, ಅದರ ವಿವರ ?

**ಶ್ರೀ ಮೊಹಮದ್ ಅಲಿ (ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)** –

(1) ದೇಶೀಯ ಮತ್ತು ವಿದೇಶಿಯ ಪ್ರವಾಸಿಗರನ್ನು ಹೆಚ್ಚು ಹೆಚ್ಚಾಗಿ ಆಕರ್ಷಿಸಲು ದಸರಾ ಉತ್ಸವಗಳನ್ನು ಪುನರುಜ್ಜೀವನಗೊಳಿಸಲಾಗಿದೆ.

(2) ಬೆಂಗಳೂರು ಮತ್ತು ಮೈಸೂರಿನಲ್ಲಿ 1967 ರ ಅಕ್ಟೋಬರ್ 4 ರಿಂದ 1967ರ ಅಕ್ಟೋಬರ್ 10 ರವರೆಗೆ ಅಂತರ ರಾಷ್ಟ್ರೀಯ ಪ್ರವಾಸಿ ಸಪ್ತಾಹದ ಆಚರಣೆ

(3) ಈ ಸಪ್ತಾಹದ ಸಂದರ್ಭದಲ್ಲಿ ಸಾರಿಗೆ ಆಪರೇಟರ್‌ಗಳು ಟ್ರಾವಲ್ ಏಜೆಂಟ್‌ರುಗಳು, ಹೋಟೇಲ್ ಮಾಲೀಕರು ವಿಶೇಷ ಸಮಾರಂಭಗಳನ್ನು ವ್ಯವಸ್ಥೆ ಮಾಡಿದ್ದರು. ಅಲ್ಲದೆ ಲಯನ್ಸ್ ಮತ್ತು ರೋಟರಿಯಂತಹ ಅಂತರರಾಷ್ಟ್ರಿಯ ಕ್ಲಬ್‌ಗಳೂ ಸಹ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಮಾರಂಭಗಳನ್ನು ವ್ಯವಸ್ಥೆ ಮಾಡಿದ್ದವು.

(4) ಪ್ರವಾಸಿ ಮಾರ್ಗದರ್ಶಿಗಳಿಗೆ ತರಬೇತಿ ನೀಡಲು 3ನೇ ಕೋರ್ಸನ್ನು ಸಂಘಟಿಸಲಾಗಿತ್ತು.

(5) ಪ್ರವಾಸಿಗರ ಪ್ರಯೋಜನಕ್ಕಾಗಿ ಚಿತ್ರವಿರುವ ಪೋಸ್ಟಕಾರ್ಡ್‌ಗಳನ್ನು ಮತ್ತು ಆಕರ್ಷಕ ಹಾಗೂ ಮಾಹಿತಿ ಪೂರ್ಣ ಫೋಲ್ಡರ್‌ಗಳ ಪ್ರಕಟಣೆ.

(6) ದಸರಾ ರಜೆ ಅವಧಿಯಲ್ಲಿ ಆಯೋಜಿತ ಪ್ರವಾಸಗಳನ್ನು ವ್ಯವಸ್ಥೆ ಮಾಡಲಾಗಿತ್ತು ಅಲ್ಲದೆ ಸಾರಿಗೆ ಸೌಲಭ್ಯಗಳನ್ನು ಹಾಗೂ ಮಾರ್ಗದರ್ಶಿ ಸೇವೆಗಳನ್ನು ಭೇಟಿ ಮಾಡುವ ಪ್ರವಾಸಿಗರಿಗೆ ಒದಗಿಸಲಾಗಿತ್ತು.

(7) ಮೈಸೂರಿನಲ್ಲಿ ವಸ್ತು ಪ್ರದರ್ಶನವನ್ನುನಡೆಸಲಾಯಿತು. ಪಣಜಿ, ಬಾಂಬೆ ಮತ್ತು ದೆಹಲಿಯಲ್ಲಿನಡೆದ ವಸ್ತು ಪ್ರದರ್ಶನಗಳಲ್ಲಿ ಭಾಗವಹಿಸಿ ಪ್ರವಾಸ ಸ್ಥಳಗಳ ಬಗ್ಗೆ ಗಮನವನ್ನು

ಕೇಂದ್ರೀಕರಿಸಲಾಯಿತು. ಅಲ್ಲದೆ ದೇಶೀಯ ಮೂಲದ ಕಲೆಗಳನ್ನು ಮತ್ತು ಕೈ ಕಸಬುಗಳನ್ನು ಪ್ರದರ್ಶಿಸಲಾಯಿತು.

(8) 1968 ರ ಜನವರಿ ತಿಂಗಳಲ್ಲಿ ಖೆಡ್ಡಾ ಕಾರ್ಯಾಚರಣೆಗಳನ್ನು ವ್ಯವಸ್ಥೆ ಮಾಡಲಾಗಿತ್ತು.

(ಬಿ) ಗಳಿಸಿದ ವಿದೇಸಿ ವಿನಿಮಯ ಪೂರ್ಣವಾಗಿ ದೇಶಕ್ಕೆ ಪ್ರಾಪ್ತವಾಗುತ್ತದೆ. ಈ ಕುರಿತ ಅಂಕಿಅಂಶಗಳು ರಾಜ್ಯ ಸರ್ಕಾರದ ಬಳಿ ಇಲ್ಲ.

(ಸಿ) ಸಮಗ್ರ ಯೋಜನೆಯನ್ನು ರೂಪಿಸಲಾಗಿದ್ದು, ಬಜೆಟ್‌ನಲ್ಲಿ ಮಾಡುವ ಹಣಕಾಸು ಏರ್ಪಾಟು ಅಲ್ಪವಾಗಿರುವುದರಿಂದ ಅದರ ಅನುಷ್ಟಾನಕ್ಕೆ ಹಲವಾರು ವರ್ಷಗಳು ಬೇಕಾಗುತ್ತವೆ.

(ಡಿ) ವಿವರಗಳು ಈ ಮುಂದಿನಂತಿವೆ –

(1) ಮೈಸೂರುನಗರದಲ್ಲಿ ನೆಹರು ಲೋಕ ಯೋಜನೆಯನ್ನು ಕೈಗೊಳ್ಳಲು ಉದ್ದೇಶಿಸಲಾಗಿದೆ. ನಾಲ್ಕನೆ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಈ ಯೋಜನೆಗಾಗಿ ಮಂಜೂರು ಮಾಡಿದ ಒಟ್ಟು ಮೊತ್ತ 23 ಲಕ್ಷ ರೂ.ಗಳು. ಇದಕ್ಕೆ ಪ್ರಸಕ್ತ ಹಣಕಾಸು ವರ್ಷದಲ್ಲಿ 2 ಲಕ್ಷ ರೂ ಗಳನ್ನು ಹಂಚಿಕೆ ಮಾಡಿದೆ. ವಿವರಗಳನ್ನು ರೂಪಿಸಲಾಗುತ್ತಿದೆ. ಈ ಯೋಜನೆಗೆ ಭಾರತ ಸರ್ಕಾರವು ಪೂರ್ಣವಾಗಿ ಹಣಕಾಸು ನೆರವು ನೀಡುತ್ತಾ ಇದೆ.

(2) ನಾಲ್ಕನೇ ಪಂಚವಾರ್ಷಿಕ ಯೋಜನಾ ಕಾರ್ಯಕ್ರ,ಮದಡಿಯಲ್ಲಿ ಈ ಮುಂದಿನ ಪ್ರದೇಶಗಳನ್ನು ಅಭಿವೃದ್ಧಿಪಡಿಸಲು ಉದ್ದೇಶಿಸಲಾಗಿದೆ –

(1) ಮೈಸೂರು – ಕೆ. ಆರ್.ನಗರ – ಬಂಡೀಪುರ ಸಂಕೀರ್ಣ

(2) ಹಾಸನ– ಬೇಲೂರು–ಹಳೇಬೀಡು ಸಂಕೀರ್ಣ

(3) ಶರಾವತಿ –ಮರವಂತೆ– ಮಡಿಕೇರಿ ಸಂಕೀರ್ಣ

(4) ಬಿಜಾಪುರ – ಬಾದಾಮಿ – ಐಹೋಳೆ ಸಂಕಿರ್ಣ

(5) ತುಂಗ ಭದ್ರಾ – ಹಂಪಿ ಸಂಕೀರ್ಣ

ಮೇಲಿನ ಪ್ರದೇಶಗಳ ಅಭಿವೃದ್ಧಿಗಾಗಿ ಭಾರತ ಸರ್ಕಾರವು ವೆಚ್ಚದ ಶೇ.50ರಷ್ಟನ್ನು ಭರಿಸುತ್ತದೆ. ಈ ಮುಂದಿನ ಯೋಜನೆಗಳನ್ನು 1967–68ರಲ್ಲಿ ಅನುಷ್ಠಾನಕ್ಕಾಗಿ ಕೈಗೆತ್ತಿಗೊಳ್ಳಲಾಗಿತ್ತು/ ಕೈಗೆತ್ತಿಕೊಳ್ಳಲಾಗಿದೆ.

ಎ) ಸೋಮನಾಥಪುರದಲ್ಲಿ ಕ್ಯಾಂಟೀನ್ ಕಟ್ಟಡ

ಬಿ) ಹಂಪಿಯಲ್ಲಿ ಒಂದು ವಿಶ್ರಾಂತಿಧಾಮ

ಸಿ) ಮರವಂತೆ ಪ್ರದೇಶದ ಅಭಿವೃದ್ಧಿ (ಒಂದನೇ ಹಂತ)

ಡಿ) ಬೇಲೂರಿನಲ್ಲಿ ಪ್ರವಾಸಿ ಪೆವಿಲಿಯನ್

ಭಾಗ-**111** ಯೋಜನೆಗಳಡಿಯಲ್ಲಿ ಈ ಮುಂದಿನ ಯೋಜನೆಗಳನ್ನು ತೆಗೆದುಕೊಳ್ಳಲಾಗಿತ್ತು/ ತೆಗೆದುಕೊಳ್ಳಲಾಗಿದೆ. ಈ ಯೋಜನೆಗಳಿಗೆ ತಗಲುವ ಪೂರ್ಣ ವೆಚ್ಚವನ್ನು ರಾಜ್ಯ ಸರ್ಕಾರವೇ ಭರಿಸುತ್ತದೆ.

1. ತಲಕಾವೇರಿಯಲ್ಲಿ ಪ್ರವಾಸಿ ವಿಶ್ರಾಂತಿಧಾಮ
2. ಗೋಕಾಕ್ ಜಲಪಾತದಲ್ಲಿ ಪ್ರವಾಸಿ ವಿಶ್ರಾಂತಿಧಾಮ
3. ವಾಣಿವಿಲಾಸ ಸಾಗರದಲ್ಲಿ ಪ್ರವಾಸಿ ವಿಶ್ರಾಂತಿಧಾಮ
4. ಲುಷಿಂಗ್ಟನ್ ಜಲಪಾತದಲ್ಲಿ ಪ್ರವಾಸಿ ವಿಶ್ರಾಂತಿಧಾಮ
5. ನಂದಿಬೆಟ್ಟದಲ್ಲಿ ಕುಟುಂಬ ವಸತಿ ಗೃಹಗಳ ನಿರ್ಮಾಣ
6. ನಂದಿಬೆಟ್ಟದಲ್ಲಿ ಕ್ಯಾಂಟೀನ್ ಕಟ್ಟಡದ ನಿರ್ಮಾಣ
7. ಕೂಡಲ ಸಂಗಮದಲ್ಲಿ ಪ್ರವಾಸಿ ವಿಶ್ರಾಂತಿಧಾಮ
8. ನಂದಿಬೆಟ್ಟದಲ್ಲಿ ನೀರು ಸರಬರಾಜು ಸೌಲಭ್ಯ ಕಲ್ಪಿಸುವುದು.

ಸ್ವಾಮಿ, ಹೋಟೆಲ್ ಇಂಡಿಯಾ ನಿರ್ಮಾಣದ ವಿಷಯ ಉತ್ತರದಲ್ಲಿನ ಒಂದು ದೋಷ ಎಂದು ತಿಳಿಸಬಯಸುತ್ತೇನೆ.

**ಶ್ರೀ ಹೆಚ್.ಸಿ.ಲಿಂಗಾರೆಡ್ಡಿ**– ಸ್ವಾಮಿ, ಖೆಡ್ಡಾ ಕಾರ್ಯಾಚರಣೆಗೆ ಮಾಡಿದ ಖರ್ಚು ಎಷ್ಟು? ಮತ್ತು ಅದರಿಂದ ಏನಾದರೂ ಲಾಭ ಬಂತೆ ದಯವಿಟ್ಟು ತಿಳಿಸಿ.

**ಶ್ರೀ ಮೊಹಮದ್ ಅಲಿ** – ಖೆಡ್ಡಾ ಕಾರ್ಯಾಚರಣೆಗಳಿಂದನಮಗೇನಾದರೂನಷ್ಟವಾಯಿತು ಎಂದು ನನಗೆ ಅನಿಸುವುದಿಲ್ಲ.

**ಶ್ರೀ ಹೆಚ್.ಸಿ.ಲಿಂಗಾರೆಡ್ಡಿ**– ಖೆಡ್ಡಾ ಕಾರ್ಯಾಚರಣೆಗೆ ಖರ್ಚು ಮಾಡಿದ ಹಣ ಎಷ್ಟು ತಿಳಿಸಿ.

**ಶ್ರೀ ಬಿ.ರಾಚಯ್ಯ**– ಪ್ರತ್ಯೇಕ ಪ್ರಶ್ನೆಯನ್ನು ಕೇಳಿದರೆ ನಾನು ಅವಶ್ಯ ಮಾಹಿತಿಯನ್ನು ಸದನಕ್ಕೆ ತಿಳಿಸುತ್ತೇನೆ.

**ಶ್ರೀ ಹೆಚ್.ಸಿ.ಲಿಂಗಾರೆಡ್ಡಿ**– ಪ್ರವಾಸಿ ಕಾರ್ಯಕ್ರಮಕ್ಕಾಗಿಯ ಸಮಗ್ರ ಯೋಜನೆಯಲ್ಲಿ ಒಳಗೊಂಡಿರುವ ಹಣ ಎಷ್ಟು ತಿಳಿಸಿ, ಸ್ವಾಮಿ?

**ಶ್ರೀ ಮೊಹಮದ್ ಅಲಿ** – ಒಳಗೊಂಡಿರುವ ಒಟ್ಟು ಮೊತ್ತ ಒಂದೂವರೆ ಕೋಟಿ ರೂಪಾಯಿಗಳಿಗೂ ಹೆಚ್ಚು.

**ಶ್ರೀ ಜೆ.ಪಿ.ಸರ್ವೇಶ**–ನಮ್ಮಲ್ಲಿನ ಕಡುಬಡ ವರ್ಗಗಳನ್ನು ಆಕರ್ಷಿಸುವ ಸಲುವಾಗಿ ಪ್ರವಾಸಿ ಕೇಂದ್ರಗಳಲ್ಲಿರುವ ಈ ಗೃಹಗಳ ಅಥವಾ ಕೊಠಡಿಗಳ ಬಾಡಿಗೆಯನ್ನು ಇಳಿಸುವ ವಿಷಯವನ್ನು ಸರ್ಕಾರ ಪರಿಶೀಲಿಸುತ್ತದೆಯೆ?

**ಶ್ರೀ ಮೊಹಮದ್ ಅಲಿ** – ವಿಧಿಸುತ್ತಿರುವ ದರಗಳು ತುಂಬಾ ಕಡಿಮೆ ಇವೆ. ಅವು ಎಲ್ಲ ವರ್ಗದ ಜನರನ್ನು ವಿಶೇಷವಾಗಿ ಸಮಾಜದ ಕಡು ಬಡ ವರ್ಗವನ್ನು ಖಂಡಿತ ಆಕರ್ಷಿಸುತ್ತವೆ.

**ಶ್ರೀ ಹೆಚ್. ಸಿದ್ಧವೀರಪ್ಪ** – ಸ್ವಾಮಿ ಈ ಅಂತಾರಾಷ್ಟ್ರೀಯ ಪ್ರವಾಸಿ ವರ್ಷಕ್ಕಾಗಿ ಸಹಾಯಧನವಾಗಿ ಈ ಸರ್ಕಾರ ಪಡೆದ ಹಣವೆಷ್ಟು ಎಂಬುದನ್ನು ತಿಳಿಸುತ್ತೀರಾ?

**ಶ್ರೀ ಮೊಹಮದ್ ಅಲಿ** – ಭಾರತ ಸರ್ಕಾರದಿಂದ ಯಾವುದೇ ಸಹಾಯಧನವನ್ನು ನಾವು ಪಡೆದಿಲ್ಲ.

**ಶ್ರೀ ಹೆಚ್. ಸಿದ್ಧವೀರಪ್ಪ** – ಖೆಡ್ಡಾ ಕಾರ್ಯಾಚರಣೆಗಳಲ್ಲಿ ದೋಷಯುಕ್ತವಾದ ವ್ಯವಸ್ಥೆಗಳನ್ನು ಮಾಡಿದ್ದರಿಂದಾಗಿ, ಈ ಸದನದ ಮಾನ್ಯ ಸದಸ್ಯರೊಬ್ಬರ ಜೀವಕ್ಕೆ ಅಪಾಯವುಂಟಾಗಿತ್ತು. ಅವರಿಗೆ ಗುಂಡಿನ ಏಟು ಬಿತ್ತು.

**ಶ್ರೀ ಮೊಹಮದ್ ಅಲಿ** – ಅದು ದೋಷಯುಕ್ತವಾದ ವ್ಯವಸ್ಥೆಗಳಿಂದ ಆಯಿತೋ ಅಥವಾ ಆಕಸ್ಮಿಕ ಕಾರಣದಿಂದ ಸಂಭವಿಸಿತೋ ಎಂದು ಹೇಳುವುದು ಕಷ್ಟ.

**ಶ್ರೀ ಎಂ.ಎಸ್.ಕೃಷ್ಣನ್** – ಪ್ರವಾಸೋದ್ಯಮವನ್ನು ಅಭಿವೃದ್ಧಿಪಡಿಸುವ ಹೆಸರಿನಲ್ಲಿ ಅಮೇರಿಕಾದಿಂದ ರಾಜ್ಯಕ್ಕೆ ಹಲವಾರು ಸಿ.ಐ.ಎ. ಏಜೆಂಟ್‌ರುಗಳ ಪ್ರವಾಸವನ್ನು ಸಹ ನೀವು ಅಭಿವೃದ್ಧಿಪಡಿಸುತ್ತಿದ್ದೀರಿ ಎಂಬುದು ನಿಜವಲ್ಲವೆ?

**ಶ್ರೀ ಮೊಹಮದ್ ಅಲಿ** – ಇದು ನಿಮ್ಮ ಸ್ವಂತ ತೀರ್ಮಾನ. ಈ ದೇಶಕ್ಕೆ ಬರುವವರೆಲ್ಲರೂ ಬೇಹುಗಾರಿಕೆ ಉದ್ದೇಶಕ್ಕಾಗಿಯೇ ಬರುತ್ತಾರೆಂದು ಹೇಳುವುದು ಸರಿಯಲ್ಲ.

**ಶ್ರೀ ಎಲ್. ಶ್ರೀಕಂಠಯ್ಯ** – ಅಂತರಾಷ್ಟ್ರೀಯ ಪ್ರವಾಸಿ ವರ್ಷವನ್ನು ಡೊಂಬರ ಆಟದಂತೆನಡೆಸಿ ಒಂದೂವರೆ ಕೋಟಿ ರೂಪಾಯಿಗಳನ್ನು ಖರ್ಚು ಮಾಡಿದಿರಿ. ಇದೇ ಹಣವನ್ನು ಯಾವುದಾದರೂ ಪ್ರಾಜೆಕ್ಟಿಗೆ ಹಾಕಿದ್ದರೆ ಹೆಚ್ಚಿನ ಉತ್ಪಾದನೆ ಬರುತ್ತಿರಲಿಲ್ಲವೆ?

**ಶ್ರೀ ಮೊಹಮದ್ ಅಲಿ** – ನಾವು ಅಂತಾರಾಷ್ಟ್ರೀಯ ಪ್ರವಾಸಿ ವರ್ಷದ ಆಚರಣೆಗಾಗಿ ಒಂದುವರೆ ಕೋಟಿ ರೂಪಾಯಿಗಳನ್ನು ಖರ್ಚು ಮಾಡಲಿಲ್ಲ. ಎಲ್ಲಾ ಪ್ರವಾಸಿ ಕೇಂದ್ರಗಳ ಅಭಿವೃದ್ಧಿಗಾಗಿಯ ಸಮಗ್ರ ಯೋಜನೆಗೆ ಬೇಕಾದ ಒಟ್ಟು ಹಣ ಸುಮಾರು ಒಂದೂವರೆ ಕೋಟಿ ರೂಪಾಯಿ.

## ಪ್ರವಾಸಿ ಕೇಂದ್ರವಾಗಿ ಮಾರಸ್ವಾಮಿ

**ಶ್ರೀ ಸುಬ್ಬರಾವ್ ಹಲಸ್ನದ್ (ಬೈಂದೂರು)**– ಸಾರಿಗೆ ಸಚಿವರು ದಯವಿಟ್ಟು ಇದನ್ನು ತಿಳಿಸುವರೆ –

ಎ) ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲೂಕಿನ ಮರವಂತೆ ಗ್ರಾಮದಲ್ಲಿರುವ ಮಾರಸ್ವಾಮಿಯನ್ನು ಪ್ರವಾಸಿ ಕೇಂದ್ರವಾಗಿ ಆಯ್ಕೆ ಮಾಡಿರುವುದು ನಿಜವೆ; ಹಾಗಿದ್ದರೆ ಅದನ್ನು ಯಾವಾಗ ತೆರೆಯಲಾಗುತ್ತದೆ;

ಬಿ) ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರ ತಾಲೂಕಿನ ಕೊಲ್ಲೂರು ಗ್ರಾಮದಲ್ಲಿ ಪ್ರಸಿದ್ಧ ಮೂಕಾಂಬಿಕ ದೇವಾಲಯ ಇರುವುದರಿಂದ ಅಸಂಖ್ಯಾತ ಜನ ಪೂಜೆಗಾಗಿ ಇಲ್ಲಿಗೆ ಬರುವುದರಿಂದ ಕೊಲ್ಲೂರಿನಲ್ಲಿ ಪ್ರಯಾಣಿಕರ ಬಂಗಲೆಯನ್ನು ನಿರ್ಮಾಣ ಮಾಡುವ ಯೋಜನೆ ಇದೆಯೆ?

**ಶ್ರೀ ಮೊಹಮದ್ ಅಲಿ – (ಸಾರಿಗೆ ಸಚಿವರು)**

ಎ) ಮರವಂತೆ ಪ್ರದೇಶದಲ್ಲಿ ಹೋಟೆಲ್ ನಿರ್ಮಿಸಲು ಭಾರತ ಸರ್ಕಾರಕ್ಕೆ ಶಿಫಾರಸು ಮಾಡಲಾಗಿದೆ.

ಬಿ) ಇಲ್ಲ.

## ಪ್ರವಾಸಿ ಕೇಂದ್ರವಾಗಿ ನರಗುಡ್ಡ

**ಶ್ರೀ ಎಂ. ನಾಗಪ್ಪ (ರಾಯಚೂರು)**– ವಾರ್ತಾ ಮತ್ತು ಪ್ರಚಾರ ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಇದನ್ನು ತಿಳಿಸುವರೆ?

ಎ) ರಾಯಚೂರು ತಾಲೂಕಿನಲ್ಲಿರುವ ಪವಿತ್ರ ಸ್ಥಳ 'ನರಗುಡ್ಡ'ವನ್ನು ಪ್ರವಾಸಿ ಕೇಂದ್ರವಾಗಿ ಘೋಷಿಸುವ ಯೋಜನೆ ಯಾವುದಾದರು ಇದೆಯೆ;

ಬಿ) ಇದ್ದರೆ, ಈ ಯೋಜನೆ ಯಾವ ಹಂತದಲ್ಲಿದೆ.

ಸಿ) ಅದು ಯಾವಾಗ ಕಾರ್ಯಗತವಾಗುತ್ತದೆ?

**ಶ್ರೀ ಮೊಹಮದ್ ಅಲಿ (ಮಾಹಿತಿ ಮತ್ತು ಪ್ರಸಾರ, ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)** –

ಎ) ಇಲ್ಲ

ಬಿ) ಮತ್ತು

ಸಿ) ಖಂಡಕ್ಕೆ ನೀಡಿರುವ ಉತ್ತರದಿಂದಾಗಿ ಉದ್ಭವಿಸುವುದಿಲ್ಲ.

ಡಿ) ಮೇಲಿನಂತೆ.

**ಶ್ರೀ ಎಂ. ನಾಗಪ್ಪ** – ನರಗುಡ್ಡದ ಬಳಿ ಎರಡು ಮುಖ್ಯವಾದ ದೇವಸ್ಥಾನಗಳಿವೆ. ಒಂದು ದತ್ತಾತ್ರೇಯ ದೇವಸ್ಥಾನ ಮತ್ತೊಂದು ಚನ್ನಬಸವೇಶ್ವರ ಸ್ವಾಮಿ ದೇವಸ್ಥಾನ. ಇವು ಬಹಳ ಮುಖ್ಯವಾದ ಸ್ಥಳಗಳು ಮತ್ತು ಸುಂದರವಾದ ಪ್ರದೇಶಗಳು ಆಗಿವೆ. ಇದನ್ನು ಒಂದು ಉತ್ತಮವಾದ ಟೂರಿಸ್ಟ್ ಸೆಂಟರಾಗಿ ಮಾಡಲು ಏಕೆ ಕ್ರಮ ತೆಗೆದುಕೊಳ್ಳಬಾರದು?

**ಬೆಳಗ್ಗೆ 9.30 ಗಂಟೆ**

**ಶ್ರೀ ಮೊಹಮದ್ ಅಲಿ** – ಈ ಸ್ಥಳವು ಕೃಷ್ಣಾನದಿಯಿಂದ ಸುತ್ತುವರಿದಿರುವ ಅರಣ್ಯದ ಮಧ್ಯದಲ್ಲಿದೆ ಮತ್ತು ಅಲ್ಲಿ ಹಲವಾರು ಪ್ರಮುಖ ದೇವಾಲಯಗಳೂ ಇವೆ. ಈ ಸ್ಥಳವಬನ್ನು ಪ್ರವಾಸಿ ಕೇಂದ್ರ ಎಂದು ಘೋಷಿಸಿದ ಮಾತ್ರಕ್ಕೆ ಯಾವುದೇ ಉದ್ದೇಶ ಈಡೇರುವುದಿಲ್ಲ ಮತ್ತು ಅದನ್ನು ಹಾಗೆ ಘೋಷಿಸುವುದಕ್ಕೆನನಗಾವ ತೊಂದರೆಯೂ ಇಲ್ಲ.

**ಶ್ರೀ ಎಂ. ನಾಗಪ್ಪ** – ಮುಂದೆ ಆಂಧ್ರದವರ ಗುಂಡಾಲ್ ಪ್ರಾಜೆಕ್ಟ ಅಂತ 10 ಮೈಲಿ ಮೇಲೆ ಕಟ್ಟತಕ್ಕ ಪರಿಸ್ಥಿತಿ ಅಲ್ಲಿ ಇದೆ. ಅದಕ್ಕೆ ಮುಂಚೆಯೇ ಇದನ್ನು ಟೂರಿಸ್ಟ್ ಸೆಂಟರ್ ಅಂತ

ಡೆವೆಲಪ್ ಮ್ರಿ ತಮ್ಮ ಕೇಸನ್ನು ಸಬ್ ಸ್ವಾನ್ ಪಿಯೇಟ್ ಮಾಡುವುದಕ್ಕೆ ಅನುಕೂಲವಾಗುತ್ತದೆ. ಆದ್ದರಿಂದ ಆದಷ್ಟು ತೀವ್ರ ಇದನ್ನು ಟೂರಿಸ್ಟ್ ಆಗಿ ಮಾಡುವುದಕ್ಕೆ ಸಾಧ್ಯವಿದೆಯೆ? -

**ಶ್ರೀ ಮೊಹಮದ್ ಅಲಿ** – ಗುಂಡಾಲ್ ಯೋಜನೆಗೆ ಸಂಬಂಧಿಸಿದಂತೆ, ಹೇಳುವುದಾದರೆ ಅದಕ್ಕೆ ಮೈಸೂರು ಸರ್ಕಾರದ ಸಮ್ಮತಿ ಬೇಕಾಗುತ್ತದೆ ಮತ್ತು ಮೈಸೂರು ಸರ್ಕಾರದ ಅನುಮೋದನೆ ಇಲ್ಲದೆ ಇದನ್ನು ಮಾಡಲಾಗುವುದಿಲ್ಲ ನನ್ನ ಅಭಿಪ್ರಾಯ.

**ಶ್ರೀ ಎಂ. ನಾಗಪ್ಪ** –ಮೈಸೂರು ಗವರ್ನಮೆಂಟ್ ಅವರಿಗೆ ಅಧಿಕಾರವಿಲ್ಲ ಎಂದು ಹೇಳುವುದಿಲ್ಲ. ಇದು ತಮ್ಮ ಗ್ರೌಂಡನ್ನು ಸಬ್‌ಸ್ವಾನ್ ಷಿಯೇಟ್ ಮಾಡಲಿಕ್ಕೆ ಅಲ್ಲಿ ಇಂತಹ ಒಂದು ಮುಖ್ಯವಾದಂತಹ ಟೆಂಪಲ್ ಇದೆ. ಖೂರಿಸ್ಟ್ ಸೆಂಟರ್ ಅದರೆ ಅದು ಮುಖ್ಯವಾದಂತಹ ಸ್ಥಳ ಎಂದು ತಾವು ಅಬ್ಜಕ್ಷನ್ ಮಾಡಲಿಕ್ಕೆ ಅನುಕೂಲವಾಗುತ್ತದೆ ಎಂಬ ದೃಷ್ಟಿಯಿಂದ ಇದನ್ನು ತೀವ್ರವಾಗಿ ಟೂರಿಸ್ಟ್ ಸೆಂಟರ್ ಮಾಡಲಿಕ್ಕೆ ಸಾಧ್ಯವಿದೆಯೇ ಇಲ್ಲವೇ?

**ಶ್ರೀ ಮೊಹಮದ್ ಅಲಿ** – ಗುಂಡಾಲ್ ಯೋಜನೆಗೆ ಅನುಮೋದನೆ ನೀಡುವುದಕ್ಕೆ ನಿರಾಕರಿಸಲು ಮೈಸೂರು ಸರ್ಕಾರಕ್ಕೆ ತುಂಬಾ ಪ್ರಬಲವಾದ ಕಾರಣಗಳೂ ಇವೆ.

**ಶ್ರೀ ಎಸ್.ವಿ. ಅಗ್ನಿಹೋತ್ರಿ** – ಧಾರವಾಡ ಜಿಲ್ಲೆಯಲ್ಲಿ ದೇವರಗುಡ್ಡ ಎಂಬ ಸ್ಥಳದಲ್ಲಿ ಮೈಲಾರಲಿಂಗನ ದೇವಸ್ಥಾನವಿಡೆ ಅದನ್ನು ಟೂರಿಸ್ಟ್ ಸೆಂಟರ್ ಮಾಡಬೇಕೆಂದು ಇದುವರೆಗೆ ತೆಗೆದುಕೊಂಡಿಲ್ಲ, ಆದ್ದರಿಂದನಮ್ಮ ಸ್ನೇಹಿತರು ಹೇಳತಕ್ಕ ಟೂರಿಸ್ಟ್ ಸೆಂಟರ್ ಮಾಡುವುದಕ್ಕಿಂತ ಮೊದಲು ಅದಕ್ಕೆ ಪ್ರಾಶಸ್ತ್ಯ ಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

**ಶ್ರೀ ಮೊಹಮದ್ ಅಲಿ** – ಸ್ಥಳೀಯವಾಗಿ ಕೆಲಮಟ್ಟಿನ ಪ್ರವಾಸಿ ಮಹತ್ವ ಹೊಂದಿರುವಂಥ ಹಲವಾರು ಧಾರ್ಮಿಕ ಮಹತ್ವದ ಸ್ಥಳಗಳಿವೆ. ಈ ಎಲ್ಲಾ ಸ್ಥಳಗಳನ್ನು ತೆಗೆದುಕೊಂಡು ಪ್ರವಾಸೋದ್ಯಮ ಇಲಾಖೆಗೆ ನೀಡುವುದು ಮೈಸೂರು ಸರ್ಕಾರಕ್ಕೆ ಸಾಧ್ಯವಾಗುವುದಿಲ್ಲ.

# ಪ್ರವಾಸಿ ಕೇಂದ್ರವಾಗಿ ಕೊಡಚಾದ್ರಿ ಬೆಟ್ಟ

**ಶ್ರೀ ಕೆ.ಹೆಚ್. ಶ್ರೀನಿವಾಸ (ಸಾಗರ)**– ವಾರ್ತಾ ಮತ್ತು ಪ್ರಸಾರ, ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಇದನ್ನು ತಿಳಿಸುವರೇ –

ಎ) ಕೊಡಚಾದ್ರಿ ಬೆಟ್ಟವನ್ನು ಪ್ರವಾಸೀಕೇಂದ್ರನ್ನಾಗಿ ಅಭಿವೃದ್ಧಿ ಪಡಿಸುವ ವಿಷಯ ಸರ್ಕಾರದ ಪರಿಶೀಲನೆಯಲ್ಲಿದೆಯೇ;

ಬಿ) ಹಾಗಿದ್ದರೆ, ಖರ್ಚು ಮಾಡಲುದ್ದೇಶಿಸಿರುವ ಹಣ ಎಷ್ಟು;

ಸಿ) ಈ ಕಾರ್ಯವನ್ನು ಯಾವಾಗ ಕೈಗೆತ್ತಿಕೊಳ್ಳಲಾಗುತ್ತದೆ?

**ಶ್ರೀ ಮೊಹಮದ್ ಅಲಿ – (ವಾರ್ತಾ ಮತ್ತು ಪ್ರಚಾರ, ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)**

ಎ) ಕೊಡಚಾದ್ರಿ ಬೆಟ್ಟವನ್ನು ಪ್ರವಾಸಿ ಕೇಂದ್ರವಾಗಿ ಅಭಿವೃದ್ಧಿಪಡಿಸುವ ವಿಷಯ ಪ್ರಸ್ತುತ ಸರ್ಕಾರದ ಪರಿಶೀಲನೆಯಲ್ಲಿಲ್ಲ.

ಬಿ) ಮತ್ತು (ಸಿ) ಮೇಲಿನ (ಎ) ಖಂಡಕ್ಕೆ ಉತ್ತರ ನೀಡಿರುವುದರಿಂದ ಇದು ಉದ್ಭವಿಸುವುದಿಲ್ಲ.

**ಶ್ರೀ ಕೆ.ಹೆಚ್. ಶ್ರೀನಿವಾಸ**– ಕೊಡಚಾದ್ರಿ ಬೆಟ್ಟವನ್ನು ಪ್ರವಾಸಿ ಕೇಂದ್ರವಾಗಿ ಅಭಿವೃದ್ಧಿ ಪಡಿಸುವ ವಿಷಯ ಸರ್ಕಾರದ ಪರಿಶೀಲನೆಯಲ್ಲಿದೆಯೇ ತಿಳಿಸಿ?

**ಶ್ರೀ ಮೊಹಮದ್ ಅಲಿ** – ಹೌದು ಸ್ವಾಮಿ, ಹಣ ದೊರೆತಾಗ ಈ ಗಿರಿಧಾಮವನ್ನು ಅಭಿವೃದ್ಧಿಪಡಿಸುವ ವಿಷಯವನ್ನು ಪರಿಶೀಲಿಸಲಾಗುವುದು.

**ಶ್ರೀ ಎಸ್.ಗೋಪಾಲಗೌಡ** – ಕೊಡಚಾದ್ರಿ ಬೆಟ್ಟವನ್ನು ಪ್ರವಾಸಿ ಕೇಂದ್ರವನ್ನಾಗಿ ಮಾಡುವ ಬಗ್ಗೆ ಬ್ಲೂ ಪ್ರಿಂಟ್ ಆಗಲೀ, ಎಸ್ಟಿಮೇಟ್ ಆಗಲೀ ತಯಾರಾಗಿದೆಯೇ?

**ಶ್ರೀ ಮೊಹಮದ್ ಅಲಿ** –ನಮಗೆ ಸರಿಸುಮಾರು 12 ರಿಂದ 15 ಲಕ್ಷ ರೂಪಾಯಿಗಳವರೆಗೆ ಬೇಕಾಗುತ್ತದೆ.

**ಶ್ರೀ ಐ. ಸೋಮಶೇಖರಪ್ಪ** – ಈ ಬೆಟ್ಟಕ್ಕೆ ರಸ್ತೆಯನ್ನು ಮಾಡಿಸಲು ಮತ್ತು ಬೆಟ್ಟದ ಮೇಲೆ ಪ್ರವಾಸಿ ಮಂದಿರವನ್ನು ಕಟ್ಟುವ ಸಲುವಾಗಿ 3 ಲಕ್ಷದ 80 ಸಾವಿರಕ್ಕೆ ಒಂದು ಎಸ್ಟಿಮೇಟ್ ತಯಾರಾಗಿ ಮೈಸೂರು ರಾಜ್ಯದ ಚೀಫ್ ಇಂಜಿನಿಯರ್ ಅವರ ಹತ್ತಿರವಿರುವುದು ಗೊತ್ತಿದೆಯೇ?

**ಶ್ರೀ ಮೊಹಮದ್ ಅಲಿ** – ಇನ್ನೂ ಹಲವಾರು ಅಂದಾಜುಗಳನ್ನು ಸಿದ್ಧಪಡಿಸಲಾಗಿದೆ. ಆದರೆ ಹಣದ ಕೊರತೆಯಿಂದಾಗಿ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲುನಮಗಾಗಿಲ್ಲ.

**ಸನ್ಮಾನ್ಯ ಉಪ ಸಭಾಧ್ಯಕ್ಷರು** – ಪ್ರಶ್ನೆ ಸಂಖ್ಯೆ 365 ಅನ್ನು ಕೇಳಲು ಶ್ರೀ ಎನ್.ವಿ. ಅಗ್ನಿಹೋತ್ರಿಯವರಿಗೆ ಅಧಿಕಾರ ನೀಡಲಾಗಿದೆ.

**ಶ್ರೀ ಪಿ.ಎಂ.ನಾಡಗೌಡ.**– ಮಾನ್ಯ ಸದಸ್ಯರು ಸರ್ಕಾರದ ಗಮನಕ್ಕೆ ತಂದರೆ ನಾವು ಖಂಡಿತ ಕ್ರಮ ಕೈಗೊಳ್ಳುತ್ತೇವೆ.

**ಶ್ರೀ ಹೆಚ್.ಸಿದ್ಧವೀರಪ್ಪ** – ದಾವಣಗೆರೆ ತಾಲ್ಲೂಕಿನ ಹಡಗಲಿ ಭಾರೀ ಪ್ರಮಾಣದ ಸಹಕಾರ ಸಂಘಕ್ಕೆ ಸಂಬಂಧಿಸಿದಂತೆ ನಾನೊಂದು ಪತ್ರವನ್ನು ಬರೆದಿದ್ದೆ. ಅದಕ್ಕೆ ಉತ್ತರವೇ ಬಂದಿಲ್ಲ. ಆ ಪತ್ರದ ಪ್ರತಿ ನನ್ನಲ್ಲಿದೆ, ಅದನ್ನು ನಿಮಗೆ ನೀಡುತ್ತೇನೆ.

**ಶ್ರೀ ಪಿ. ಎಂ. ನಾಡಗೌಡ**– ಆ ಪತ್ರವನ್ನು ಇತ್ತೀಚೆಗೆ ಬರೆಯಲಾಗಿದೆ ಅದನ್ನು ವಿಚಾರಣೆಗಾಗಿ ಕಳುಹಿಸಿಕೊಟ್ಟಿದ್ದೇನೆ.

**ಶ್ರೀ ಸಿದ್ದಯ್ಯ ಕಾಶೀಮಠ** – ಸಹಕಾರ ಸಂಘಗಳ ಕಾಯಿದೆ ಪ್ರಕಾರ ಪ್ರತಿ ವರ್ಷ ಸಾಲವನ್ನು ವಾಪಸ್ಸು ಕೊಡದಿದ್ದರೆ ಏನು ಕ್ರಮ ಕೈಕೊಳ್ಳುತ್ತೀರಿ?

**ಶ್ರೀ ಪಿ. ಎಂ. ನಾಗನಗೌಡ** – ಸಾಲವನ್ನು ಕೊಟ್ಟಿರುವ ಷರತ್ತಿನ ಪ್ರಕಾರ ಸಕಾಲದಲ್ಲಿ ವಾಪಸ್ಸು ಕೊಡದಿದ್ದರೆ ಡಿಮ್ಯಾಂಡ್ ನೋಟೀಸು ಕಳುಹಿಸುವುದು,ನಂತರ ಕೋಯರ್ಸಿ ಮೆಷರ್ಸ್ ತೆಗೆದುಕೊಳ್ಳುವುದು; ಅರ್ಬಿಟ್ರೇಷನ್ ಕೇಸು ಹಾಕುವುದು, ಸಿವಿಲ್ ಲಯಬಿಲಿಟಿ ಫಿಕ್ಸ್ ಮಾಡುವುದು ಮುಂತಾದ ಕ್ರಮಗಳನ್ನು ಕೈಕೊಳ್ಳಲಾಗುವುದು.

ಕಾನೂನಿನಲ್ಲಿ ಅವಕಾಶ ಕಲ್ಪಿಸಿರುವ ಎಲ್ಲಾ ಕ್ರಮಗಳನ್ನು ಕೈಗೊಳ್ಳಲಾಗುವುದು

**ಶ್ರೀ ಆರ್. ನಾಗನಗೌಡ– ಬೆಳೆ** ಉತ್ಪಾದನೆಗಾಗಿ ಅಲ್ಪಾವಧಿ ಸಾಲಗಳನ್ನು ನೀಡುತ್ತಿದ್ದೀರಾ? ಹಾಗಿದ್ದರೆ ಎಷ್ಟು ಎಂಬುದನ್ನು ತಿಳಿಸಿ.

**ಶ್ರೀ ಆರ್. ನಾಗನಗೌಡ**– ಪ್ರತ್ಯೇಕ ಪ್ರಶ್ನೆಯನ್ನು ಕೇಳಿದರೆ ನಾನು ಉತ್ತರ ಕೊಡುತ್ತೇನೆ. ಈ ಸದನದ ಮಾಹಿತಿಗಾಗಿ ಸರ್ಕಾರವು ಅಲ್ಪಾವಧಿ ಸಾಲ, ಮಧ್ಯಮಾವಧಿ ಸಾಲ ಮತ್ತು ದೀರ್ಘಾವಧಿ ಸಾಲಗಳನ್ನು ನೀಡುತ್ತಿದೆಯೆಂದು ತಿಳಿಸುತ್ತೇನೆ.

**ಶ್ರೀ ಹಂಜಿ ಶಿವಣ್ಣ** – ಅಲ್ಲಲ್ಲಿ ಕೆಲವು ಸೊಸೈಟಿಗಳು ಸರಿಯಾಗಿ ಕೆಲಸ ಮಾಡುತ್ತಿಲ್ಲವೆಂದೂ ಅವುಗಳ ವಿರುದ್ಧವಾಗಿ ಕ್ರಮ ತೆಗೆದುಕೊಂಡಿರುವಂತೆ ತರೀಕೆರೆ, ಲಕ್ಕವಳ್ಳಿ ತಾಲ್ಲೂಕುಗಳಲ್ಲಿ ಕ್ರಮ ತೆಗೆದುಕೊಂಡಿದ್ದೀರಾ?

**ಶ್ರೀ ಪಿ. ಎ. ನಾಡಗೌಡ** – ಅದಕ್ಕೆ ಪ್ರತ್ಯೇಕ ಪ್ರಶ್ನೆ ಕೇಳಿದರೆ ಕೇಳಬಹುದು

## ಪ್ರವಾಸಿ ಕೇಂದ್ರವಾಗಿ ಜಲದುರ್ಗ

**ಶ್ರೀ ರಾಜಾ ಪಿಡ್ ನಾಯಕ್ (ಶೋರಾಪುರ)** ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಇದನ್ನು ತಿಳಿಸುವರೇ –

ಗುಲ್ಬರ್ಗ ಜಿಲ್ಲೆಯ ಸುರಪುರ ತಾಲ್ಲೂಕಿನಲ್ಲಿರುವ ನಾರಾಯಣಪುರ ಅಣೆಕಟ್ಟು ನಿವೇಶನದ ಬಳಿ ಇರುವ ಜಲದುರ್ಗವನ್ನು ಪ್ರವಾಸಿ ಕೇಂದ್ರವನ್ನಾಗಿ ಆಯ್ಕೆ ಮಾಡಲು ಉದ್ದೇಶಿಸಲಾಗಿದೆಯೇ?

**ಶ್ರೀ ಮೊಹಮದ್ ಅಲಿ (ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)**

ಇಲ್ಲ

**ಶ್ರೀ ರಾಜಾ ಪಿಡ್ ನಾಯಕ್** : ಪ್ರವಾಸಿ ಕೇಂದ್ರವನ್ನಾಗಿ ಮಾಡಲು ಅಗತ್ಯವಾದ ಎಲ್ಲಾ ಪರಿಸ್ಥಿತಿಗಳು ಜಲದುರ್ಗದಲ್ಲಿರುವುದು ಸರ್ಕಾರಕ್ಕೆ ತಿಳಿದಿದೆಯೇ?

**ಶ್ರೀ ಮೊಹಮದ್ ಅಲಿ** – ಇದೊಂದು ಸುಂದರವಾದ ಸ್ಥಳ ಇದನ್ನು ಅಭಿವೃದ್ಧಿಪಡಿಸಿದರೆ ಹಲವಾರು ಪ್ರವಾಸಿಗರನ್ನು ಆಕರ್ಷಿಸಬಲ್ಲದು ಎಂಬ ಪೂರ್ಣ ಅರಿವು ಸರ್ಕಾರಕ್ಕಿದೆ.

**ಶ್ರೀ ಎಂ. ಎಂ. ಜೆ . ಸದ್ಯೋತ:** ಇದನ್ನು ಪ್ರವಾಸಿ ಕೇಂದ್ರವಾಗಿ ಆಯ್ಕೆ ಮಾಡದಿರುವುದಕ್ಕೆ ಕಾರಣವೇನೆಂದು ತಿಳಿಸುತ್ತೀರಾ?

**ಶ್ರೀ ಮೊಹಮದ್ ಅಲಿ** – ಹಣಕಾಸಿನ ಕೊರತೆ.

# ಅಧ್ಯಾಯ – 4

## ಮೋಟಾರು ವಾಹನಗಳ ಟ್ಯಾಕ್ಸ್, ರಸ್ತೆ, ಸಾರಿಗೆ, ಪ್ರವಾಸಿ ತಾಣ ಹಾಗೂ ಬಸ್ಸು ನಿಲ್ದಾಣಗಳ ನಿರ್ಮಾಣ ಮತ್ತು ರಸ್ತೆ ರಾಷ್ಟ್ರೀಕರಣ ಕುರಿತು ಚರ್ಚೆ

### ಮೋಟಾರು ವಾಹನಗಳ ತೆರಿಗೆ

**ಸೋಮವಾರ 15 ಏಪ್ರಿಲ್ 1968**

**ಟಿ.ಆರ್. ಶಾಮಣ್ಣ.**– ವಾರ್ತಾ ಮತ್ತು ಪ್ರಚಾರ, ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಇದನ್ನು ತಿಳಿಸುವರೆ –

ಎ. ಮೋಟಾರು ವಾಹನ ತೆರಿಗೆ ಸಂಬಂಧದಲ್ಲಿ ಬೆಂಗಳೂರುನಗರ ಪಾಲಿಕೆಗೆ ಪಾವತಿ ಮಾಡಿದನಷ್ಟ ಪರಿಹಾರದ ಮೊತ್ತ;

ಬಿ. ಈನಷ್ಟ ಪರಿಹಾರವನ್ನು ನಿಗದಿ ಪಡಿಸಿದ್ದು ಯಾವಾಗ;

ಸಿ. ನಷ್ಟ ಪರಿಹಾರವನ್ನು ನಿಗದಿಪಡಿಸಿದಾಗ ಬೆಂಗಳೂರುನಗರದಲ್ಲಿ ಸಂಗ್ರಹಿಸಲಾದ ಮೋಟಾರು ವಾಹನ ತೆರಿಗೆಯ ಅಂದಾಜು ಮೊತ್ತ;

ಡಿ. ಬೆಂಗಳೂರುನಗರದಲ್ಲಿ ನೋಂದಾಯಿತವಾಗಿರುವ ಮತ್ತು ಬೆಂಗಳೂರುನಗರ ಪಾಲಿಕೆ ರಸ್ತೆಗಳನ್ನು ಬಳಸುತ್ತಿರುವ ವಾಹನಗಳ ಮೇಲೆ ಸಂಗ್ರಹಿಸಲಾದ ಮೋಟಾರು ವಾಹನಗಳ ತೆರಿಗೆಯ ಮೊತ್ತ;

ಇ. ಬೆಂಗಳೂರುನಗರ ಪಾಲಿಕೆಗೆ ಸಾಕಷ್ಟುನಷ್ಟ ಪರಿಹಾರ ನೀಡಲು ನೀವು ಕ್ರಮ ತೆರೆದುಕೊಳ್ಳುತ್ತೀರಾ?

**ಉತ್ತರ: ಶ್ರೀ ಮೊಹಮದ್ ಅಲಿ – (ವಾರ್ತಾ ಮತ್ತು ಪ್ರಚಾರ, ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)–**

ಎ. ಈ ಮುಂದಿನವರುಗಳಿಗೆನಷ್ಟ ಪರಿಹಾರವನ್ನು ನೀಡಲಾಗಿದೆ.

(i) ಮೋಟಾರು ವಾಹನ ತೆರಿಗೆ ಮತ್ತು ಸುಂಕ ಆದಾಯನಷ್ಟ .. ರೂ.1,85,506–50

(ii) ಸೇವಾ ತೆರಿಗೆ ಮತ್ತು ಮೈಲೇಜ್ ಉಪಕರನಷ್ಟ .. ರೂ.2,71,249–59

ಬಿ. ಇದನ್ನು ಮೈಸೂರು ವಾಹನಗಳ ಮೇಲೆ ತೆರಿಗೆ ವಿಧಿಸುವ ಅಧಿನಿಯಮ, 1957 ಇದು ಜಾರಿಗೆ ಬಂದ ದಿನವಾದ 1958ರ 1ನೇ ದಿನಾಂಕದಿಂದ ಪರಿಣಮಿಸುವಂತೆ ಸರ್ಕಾರಿ ಆದೇಶ ಸಂಖ್ಯೆ ಹೆಚ್.ಡಿ 26, ಟಿಎಂಟಿ 60 ದಿನಾಂಕ 24 ಮಾರ್ಚ್ 1964ರಲ್ಲಿ ನಿಗದಿ ಪಡಿಸಲಾಗಿತ್ತು.

## ಬಸ್ಸು ಮಾರ್ಗಗಳ ರಾಷ್ಟ್ರೀಕರಣ

**ಶ್ರೀ ಬಿ. ಭಾಸ್ಕರ ಶೆಟ್ಟಿ (ಕಾಪು)** – ವಾರ್ತಾ ಮತ್ತು ಪ್ರಚಾರ, ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಇದನ್ನು ತಿಳಿಸುವರೆ –

(ಎ) 1968 – 69ನೇ ಸಾಲಿನಲ್ಲಿ ಬಸ್ಸುಗಳನ್ನು ರಾಷ್ಟ್ರೀಕರಣಗೊಳಿಸಲು ಉದ್ದೇಶಿಸಲಾಗಿರುವ ಜಿಲ್ಲೆಗಳು;

(ಬಿ) ರಾಷ್ಟ್ರೀಕರಣಗೊಳಿಸಲು ಉದ್ದೇಶಿಸಲಾಗಿರುವ ಮಾರ್ಗಗಳು;

(ಸಿ) ಈ ಉದ್ದೇಶಕ್ಕಾಗಿ ಖರ್ಚು ಮಾಡಬೇಕಾದ ಹೆಚ್ಚುವರಿ ವೆಚ್ಚ.

**ಶ್ರೀ ಮೊಹಮದ್ ಅಲಿ – (ವಾರ್ತಾ ಮತ್ತು ಪ್ರಚಾರ, ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)**

(ಎ) ಮಂಗಳೂರು, ಶಿವಮೊಗ್ಗ ಮತ್ತು ಕೋಲಾರ ಪಾಕೆಟ್‌ಗಳಲ್ಲಿ ಬಸ್ ಮಾರ್ಗಗಳನ್ನು ರಾಷ್ಟ್ರೀಕರಣಗೊಳಿಸಲು ಅನುಕ್ರಮವಾಗಿ ಮೂರು ಯೋಜನೆಗಳನ್ನು ಸರ್ಕಾರವು ಮೋಟಾರು ವಾಹನಗಳ ಅಧಿನಿಯಮ, 1939ರ 68 (ಬಿ) ಪ್ರಕರಣದ ಅಡಿಯಲ್ಲಿ ಅನುಮೋದಿಸಿದ್ದು ಪ್ರಸಕ್ತ ವರ್ಷದಲ್ಲಿ ಈ ಮೂರು ಅನುಮೋದಿತ ಯೋಜನೆಗಳನ್ನು ಮೈಸೂರು ರಾಜ್ಯ ರಸ್ತೆ ಸಾರಿಗೆ ನಿಗಮದ ಮೂಲಕ ಅನುಷ್ಠಾನಗೊಳಿಸಲು ಉದ್ದೇಶಿಸಲಾಗಿದೆ.

(ಬಿ) ಸದನದಲ್ಲಿ ಮಂಡಿಸಿರುವ ಪಟ್ಟಿಗಳಲ್ಲಿರುವಂತೆ ಮಂಗಳೂರು ಪಾಕೆಟ್‌ನಲ್ಲಿ 31 ಮಾರ್ಗಗಳು, ಶಿವಮೊಗ್ಗ ಪಾಕೆಟ್‌ನಲ್ಲಿ 48 ಮಾರ್ಗಗಳು, ಕೋಲಾರ ಪಾಕೆಟ್‌ನಲ್ಲಿ 87 ಮಾರ್ಗಗಳು.

(ಸಿ) ಅಂದಾಜು ರೂ. 195–08 ಲಕ್ಷಗಳು.

**ಶ್ರೀ ಹೆಚ್. ಸಿದ್ಧವೀರಪ್ಪ**– ಇತರ ಕೆಲವು ಮಾರ್ಗಗಳ ರಾಷ್ಟ್ರೀಕರಣವನ್ನು ಕೈಗೆತ್ತಿಕೊಳ್ಳುವುದಕ್ಕೆ ಮುಂಚೆ ಈಗಾಗಲೇ ರಾಷ್ಟ್ರೀಕೃತಗೊಂಡಿರುವ ಮಾರ್ಗಗಳಲ್ಲಿರುವ 20 ಅಥವಾ 25 ಮೈಲಿಗಳ ಪ್ಯಾಕೆಟ್ ಗಳನ್ನು ಪೂರ್ಣ ಮಾಡುವುದು ಅಪೇಕ್ಷಣೀಯ ಎಂದು ನೀವು ಭಾವಿಸುತ್ತೀರಾ?

**ಶ್ರೀ ಮೊಹಮದ್ ಅಲಿ** – ಅದು ಕ್ರಮಕ್ಕಾಗಿ ಸೂಚಿಸಿದ ಸಲಹೆ.

**ಶ್ರೀ ಸಿದ್ಧವೀರಪ್ಪ** – ಕಾಂಗ್ರೆಸ್ ಸರ್ಕಾರ ಅಸ್ತಿತ್ವದಲ್ಲಿರುವವರೆಗೆ ಚಿತ್ರದುರ್ಗ ಮತ್ತು ಹರಿಹರನಡುವಣ ರಾಷ್ಟ್ರೀಕರಣಗೊಂಡ ಮಾರ್ಗದ ಭಾಗವನ್ನು ನೀವು ವಹಿಸಿಕೊಳ್ಳುತ್ತೀರಾ? ಅಥವಾ ವಹಿಸಿಕೊಳ್ಳುವುದಿಲ್ಲವೆ? ಅದನ್ನು ತಡೆಹಿಡಿಯುತ್ತಿರುವುದಕ್ಕೆ ನೀವು ನೀಡುವ ವಿಶೇಷ ಕಾರಣವೇನು?

**ಶ್ರೀ ಮೊಹಮದ್ ಅಲಿ** – ವಿಶೇಷ ಕಾರಣವೇನಿಲ್ಲ. ಅದು ಮಾನ್ಯ ಸದಸ್ಯರು ನನಗೆ ಬಿಟ್ಟುಕೊಟ್ಟ ಸೊತ್ತು.

**ಶ್ರೀ ಹೆಚ್. ಸಿದ್ಧವೀರಪ್ಪ** – ನಾನು ಎರಡು ತಿಂಗಳಿಗೆ ಮಾತ್ರ ಬಿಟ್ಟುಕೊಟ್ಟದ್ದೆ. ನೀವು ಅದನ್ನು ಹದಿನೈದು ವರ್ಷದಿಂದ ಅನುಭವಿಸುತ್ತಾ ಬಂದಿದ್ದೀರಿ.

**ಶ್ರೀ ಮೊಹಮದ್ ಅಲಿ** – ಈ ವಿಷಯದ ಬಗ್ಗೆ ಅರ್ಧ ಗಂಟೆನಡೆದ ಚರ್ಚೆಗೆ ಉತ್ತರವಾಗಿ ಚಿತ್ರದುರ್ಗ ಮತ್ತು ಹರಿಹರನಡುವಿನ ರಸ್ತೆಯ ಈ ಭಾಗವನ್ನು ಎರಡನೇ ಹಂತದಲ್ಲಿ ರಾಷ್ಟ್ರೀಕರಣಗೊಳಿಸಲು ಇಡೀ ಚಿತ್ರದುರ್ಗ ಜಿಲ್ಲೆಯನ್ನು ಕೈಗೆತ್ತಿಕೊಳ್ಳುವಾಗ ವಹಿಸಿಕೊಡಲಾಗುವುದು.

**ಶ್ರೀ ಎಲ್. ಶ್ರೀಕಂಠಯ್ಯ** – ಇನ್ನುಳಿದಿರತಕ್ಕಂಥ ಬಸ್ಸು ರೂಟ್ಸ್ ಯಾವಾಗ ನ್ಯಾಯನಲೈಜೇಷನ್ ಮಾಡುತ್ತೀರಿ?

**ಶ್ರೀ ಮೊಹಮದ್ ಅಲಿ** – ಐದನೇ ಯೋಜನೆಯನ್ನು ಅಂತಿಮಗೊಳಿಸಿದನಂತರ ನನ್ನ ಬದ್ಧತೆಯನ್ನು ತಿಳಿಸಲು ನನಗೆ ಸಾಧ್ಯವಾಗುತ್ತದೆ.

**ಡಾ|| ಆರ್. ನಾಗನಗೌಡ.**– (ಸಿ)ಗೆ ಪೂರಕವಾಗಿ: ರಸ್ತೆಗಳು, ಏತನೀರಾವರಿ ಮುಂತಾದವುಗಳಿಗೆ ಸರ್ಕಾರದಲ್ಲಿ ಹಣ ಇಲ್ಲದಿರುವಾಗ ಈ ಮೂರು ಜಿಲ್ಲೆಗಳನ್ನು ರಾಷ್ಟ್ರೀಕರಣಕ್ಕೆ ತೆಗೆದುಕೊಳ್ಳುವಂಥ ತುರ್ತಾದರೂ ಏನಿದೆ. ಈ ಜಿಲ್ಲೆಗಳಲ್ಲಿ ಬಸ್ಸು ಸೇವೆಗಳು ತುಂಬಾ ದುಃಸ್ಥಿತಿಯಲ್ಲಿವೆ ಎಂಬ ದೂರುಗಳು ನಿಮಗೆ ಬಂದಿವೆಯೇ?

**ಶ್ರೀ ಮೊಹಮದ್ ಅಲಿ** – ಸಹಜವಾಗಿ ಪಟ್ಟಭದ್ರ ಹಿತಾಸಕ್ತಿಗಳು ರಾಷ್ಟ್ರೀಕರಣಕ್ಕೆ ವಿರೋಧಿಸಿವೆ. ಆದರೆ ಹಂತಹಂತವಾದ ಕಾರ್ಯಕ್ರಮದ ಭಾಗವಾಗಿ ಸರ್ಕಾರ ಈ ಯೋಜನೆಗಳನ್ನು ಅನುಮೋದಿಸಿದೆ. ಈ ಯೋಜನೆಗಳನ್ನು 1.7.68 ರೊಳಗೆ ಅನುಷ್ಠಾನಗೊಳಿಸಲಾಗುವುದು. ಶಿವಮೊಗ್ಗ ಮತ್ತು ಮಂಗಳೂರು ಯೋಜನೆಯನ್ನು 1969ರಲ್ಲಿ ಅನುಷ್ಠಾನಗೊಳಿಸುವುದಾಗಿ ಸದನಕ್ಕೆ ಈ ಮೊದಲೇ ನಾನು ತಿಳಿಸಿದ್ದೇನೆ. ಉಚ್ಚ ನ್ಯಾಯಾಲಯದಲ್ಲಿ ಒಂದು ರಿಟ್ ಅರ್ಜಿ ಬಾಕಿ ಇತ್ತು. ಅದು ಈಗ ಇತ್ಯರ್ಥಗೊಂಡಿದೆ. ಈಗ ಈ ಯೋಜನೆಯನ್ನು ಅನುಷ್ಠಾನಗೊಳಿಸುವುದಕ್ಕೆ ಯಾವುದೇ ಕಾನೂನಿನ ಅಡಚಣೆ ಇಲ್ಲ.

ಮಧ್ಯಾಹ್ನ 2 ಗಂಟೆ.

**ಶ್ರೀ ಶಿವಪ್ಪ** – ಆ ಪಟ್ಟಭದ್ರ ಹಿತಾಸಕ್ತಿ ಯಾವುದು ತಿಳಿಸುತ್ತೀರಾ? ಚಿತ್ರದುರ್ಗ ಮತ್ತು ಹರಿಹರನಡುವಿನ ರಸ್ತೆಯ ಭಾಗದ ರಾಷ್ಟ್ರೀಕರಣವನ್ನು ವಿರೋಧಿಸುತ್ತಿರುವ ಪಟ್ಟಭದ್ರ ಹಿತಾಸಕ್ತಿಯ ಹೆಸರನ್ನು ಸಚಿವರು ತಿಳಿಸುವರೇ?

**ಶ್ರೀ ಮೊಹಮದ್ ಅಲಿ** – ನಾನು ಅದನ್ನು ಹೇಳಲಾರೆ, ಏಕೆಂದರೆ ನಾವು ಈಗಾಗಲೇ ರಾಷ್ಟ್ರೀಕರಣಗೊಳಿಸಿರುವಂಥ ಪ್ರದೇಶಕ್ಕೆ ಅದು ಸೇರಿದ್ದಲ್ಲ.

**ಶ್ರೀ ಎಲ್. ಶ್ರೀಕಂಠಯ್ಯ**– ಕೆಲವು ಮಾರ್ಗಗಳನ್ನು ನೀವು ರಾಷ್ಟ್ರೀಕರಣಗೊಳಿಸುತ್ತಿರುವುದು ಸರಿ. ರಾಷ್ಟ್ರೀಕರಣಗೊಂಡಿರುವ ಕೆಲವು ರಸ್ತೆಗಳು ಮೈಸೂರು ಜಿಲ್ಲೆಯಲ್ಲಿವೆ. ಆದರೆ ಕೊಳ್ಳೆಗಾಲ ಮತ್ತು ಚಾಮರಾಜನಗರದ ಕೆಲವು ಭಾಗಗಳು ಬಿಟ್ಟು ಹೋಗಿವೆ. ಈ ಭಾಗಗಳನ್ನು ಸಹ ಸೇರಿಸಲು ಸರ್ಕಾರ ಅಗತ್ಯ ಕ್ರಮ ಕೈಗೊಳ್ಳುತ್ತದೆಯೆ?

**ಶ್ರೀ ಮೊಹಮದ್ ಅಲಿ** – ಭಾಗಶ: ರಾಷ್ಟ್ರೀಕರಣಗೊಳಿಸಿರುವ ಮಾರ್ಗಗಳನ್ನು ಪೂರ್ಣವಾಗಿ ರಾಷ್ಟ್ರೀಕರಣಗೊಳಿಸಲಾಗುವುದು ಎಂದು ತಿಳಿಸಲು ಈ ಅವಕಾಶವನ್ನು ನಾನು ಬಳಸಿಕೊಳ್ಳುತ್ತೇನೆ?

**ಮಾನ್ಯ ಉಪ ಸಭಾಧ್ಯಕ್ಷರು** – ಪ್ರಶ್ನೋತ್ತರ ವೇಳೆ ಮುಗಿಯಿತು.

ಅಲ್ಪಾವಧಿ ಸೂಚನಾ ಪ್ರಶ್ನೆ ಸಂಖ್ಯೆ 32 ಮತ್ತು 83 ಸದೃಶವಾಗಿರುವುದರಿಂದ ಎರಡೂ ಪ್ರಶ್ನೆಗಳನ್ನು ಒಟ್ಟಿಗೆ ಕೇಳಬಹುದು.

# ಮೋಟಾರು ವಾಹನಗಳ ಪರಿವೀಕ್ಷಕರು

**ಶ್ರೀ ಎಸ್. ಚಂದ್ರಕಾಂತ (ಬೀದರ್).**– ವಾರ್ತಾ ಮತ್ತು ಪ್ರಚಾರ, ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಇದನ್ನು ತಿಳಿಸುವರೆ –

(ಎ) ಅಗತ್ಯ ಅರ್ಹತೆಯನ್ನು ಹೊಂದಿರುವಂಥ ಲಿಪಿಕ ಸಿಬ್ಬಂದಿ ಸಹ ಮೋಟಾರು ವಾಹನಗಳ ಪರಿವೀಕ್ಷಕರ ಹುದ್ದೆಗೆ ಹಕ್ಕುಳ್ಳರಾಗಿರುವುದು ವಾಸ್ತವ ಸಂಗತಿಯೆ;

(ಬಿ) ಅಧಿನಿಯಮದ ಅಡಿಯಲ್ಲಿ ಅಗತ್ಯಪಡಿಸಿರುವ ಅರ್ಹತೆ ಮತ್ತು ಅನುಭವ ಹೊಂದಿರುವಂಥ ಹೈದರಬಾದ್ ಕರ್ನಾಟಕ ಪ್ರದೇಶದಲ್ಲಿ ಇರುವ, ಲಿಪಿಕ ಸಿಬ್ಬಂದಿ ಸಂಖ್ಯೆ;

(ಸಿ) ಮೋಟಾರು ವಾಹನಗಳ ಪರಿವೀಕ್ಷಕರ ಹುದ್ದೆಗೆ ನೇಮಕ ಮಾಡಿದ ಅಂಥ ಲಿಪಿಕ ಸಿಬ್ಬಂದಿಯ ಒಟ್ಟು ಸಂಖ್ಯೆ?

**ಶ್ರೀ ಮೊಹಮದ್ ಅಲಿ** – (ವಾರ್ತಾ ಮತ್ತು ಪ್ರಚಾರ, ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)

(ಎ) ಹೌದು

(ಬಿ) ಒಂದು

(ಸಿ) ಏಳು.

## ಹಾಸನ ಜಿಲ್ಲೆಯಲ್ಲಿನ ಬಸ್ ಮಾರ್ಗಗಳು

**ಶ್ರೀ ಹೆಚ್.ಬಿ. ಜ್ವಾಲನಯ್ಯ** (ಹಾಸನ)– ಸಾರಿಗೆ ಸಚಿವರು ದಯವಿಟ್ಟು ಇದನ್ನು ತಿಳಿಸುವರೆ–

(ಎ) ಹಾಸನ ವಿಭಾಗದಲ್ಲಿ ಬಸ್ ಮಾರ್ಗಗಳನ್ನು ರಾಷ್ಟ್ರೀಕರಣಗೊಳಿಸುವುದಕ್ಕೆ ಮುಂಚೆ, ಖಾಸಗಿ ಆಪರೇಟರ್‌ಗಳು ಆಪರೇಟ್ ಮಾಡುತ್ತಿದ್ದ ಬಸ್ ಮಾರ್ಗಗಳ ಸಂಖ್ಯೆ;

(ಬಿ) ಮೇಲಿನ ವಿಭಾಗಗಳಲ್ಲಿ ಮೈಸೂರು ರಾಜ್ಯ ರಸ್ತೆ ಸಾರಿಗೆ ನಿಗಮವು ಈಗ ಆಪರೇಟ್ ಮಾಡುತ್ತಿರುವ ಬಸ್ ಮಾರ್ಗಗಳ ಸಂಖ್ಯೆ;

(ಸಿ) ಮೇಲಿನ ವಿಭಾಗದಲ್ಲಿ ಈಗ ಓಡುತ್ತಿರುವ ಬಸ್ಸುಗಳ ಸಂಖ್ಯೆ;

**ಶ್ರೀ ಮೊಹಮದ್ ಅಲಿ** –

(ಎ) 162 ಮಾರ್ಗಗಳು

(ಬಿ) 166

(ಸಿ) 280 ಬಸ್ಸುಗಳು.

**ಶ್ರೀ ಎಚ್.ಬಿ. ಜ್ವಾಲನಯ್ಯ**– ಹಾಸನ ಡಿವಿಜನ್‌ನಲ್ಲಿ ರಾಷ್ಟ್ರೀಕರಣವಾಗುವುದಕ್ಕೆ ಮುಂದೆ 162 ಬಸ್ ರೂಟ್‌ಗಳು ಇದ್ದು, ರಾಷ್ಟ್ರೀಕರಣವಾದ ಸುಮಾರು 8 ವರ್ಷಗಳನಂತರ ಕೇವಲ 4 ರೂಟ್ ಗಳನ್ನು ಮಾತ್ರ ಜಾಸ್ತಿ ಮಾಡಿದ್ದೀರಿ, ರಾಷ್ಟ್ರೀಕರಣವಾಗುವುದಕ್ಕೆ ಮುಂಚೆ ಸುಮಾರು 500 ಬಸ್ಸುಗಳು ಈ ಡಿವಿಜನ್‌ನಲ್ಲಿ ಓಡಾಡುತ್ತಾ ಇದ್ದು. ಈಗ 280 ಬಸ್ಸುಗಳು ಮಾತ್ರ ಓಡಾಡುತ್ತಾ ಇರುವುದು ತಮ್ಮ ಗಮನಕ್ಕೆ ಬಂದಿದೆಯೇ?

**ಶ್ರೀ ಮೊಹಮದ್ ಅಲಿ** – ಸ್ವಾಮಿ, ಇದು ಹೊಸ ಮಾರ್ಗಗಳ ರಚನೆಯನ್ನು ಅವಲಂಬಿಸಿದೆ, ಸ್ವಾಮಿ. ರಾಷ್ಟ್ರೀಕರಣಕ್ಕೆ ಮೊದಲು ಖಾಸಗಿ ಆಪರೇಟರ್‌ಗಳು 185 ವಾಹನಗಳನ್ನು ಓಡಿಸುತ್ತಿದ್ದರು. ಈಗ ರಸ್ತೆ ಸಾರಿಗೆ ನಿಗಮವು 285 ಬಸ್ಸುಗಳನ್ನು ಓಡಿಸುತ್ತಿದೆ.

**ಶ್ರೀ ಎಚ್.ಬಿ. ಜ್ವಾಲನಯ್ಯ**– ಈಗ ರಸ್ತೆ ಚೆನ್ನಾಗಿಲ್ಲ ಎನ್ನುವ ಒಂದೇ ಒಂದು ಕಾರಣದಿಂದ ಒಳನಾಡಿನ ರಸ್ತೆಗಳಲ್ಲಿ ಬಸ್ಸುಗಳನ್ನು ಓಡಿಸದೇ ಸಾರ್ವಜನಿಕರಿಗೆ ತೊಂದರೆಯಾಗುತ್ತಾ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಮೊಹಮದ್ ಅಲಿ** – ಇದು ಸರ್ಕಾರದ ಗಮನಕ್ಕೆ ಬಂದಿಲ್ಲ. ಅತ್ಯುತ್ತಮ ಮತ್ತು ಪಕ್ಕಾ ರಸ್ತೆ ಯಾವುದಾದರೂ ಇದ್ದರೆ, ಅದನ್ನು ಬಸ್ಸುಗಳನ್ನು ಓಡಿಸುವುದಕ್ಕೆ ಉಪಯೋಗಿಸಿಕೊಳ್ಳಲಾಗುವುದು.

**ಶ್ರೀ ಎಚ್.ಬಿ. ಜ್ವಾಲನಯ್ಯ**– ಇಲ್ಲಿಯವರೆಗೂ ಗ್ರಾಮಾಂತರ ಪ್ರದೇಶದಲ್ಲಿ ಬಸ್ಸುಗಳನ್ನು ಓಡಿಸಬೇಕೆಂದು ಅನೇಕ ಮನವಿಗಳು ಬಂದಿಲ್ಲವೇ?

**ಶ್ರೀ ಮೊಹಮದ್ ಅಲಿ** – ಸ್ವಾಮಿ, ನನಗೆ ನೆನಪಿರುವ ಮಟ್ಟಿಗೆ ನನಗೆ ಅಂಥ ಯಾವುದೇ ಮನವಿ ಬಂದಿಲ್ಲ.

**ಸನ್ಮಾನ್ಯ ಸಭಾಧ್ಯಕ್ಷರು** – ಮುಂದಿನ ಪ್ರಶ್ನೆಯು ಕೂಡ ಇದೇ ವಿಷಯಕ್ಕೆ ಸಂಬಂಧಪಡುತ್ತದೆ. ಮಾನ್ಯ ಸದಸ್ಯರು ಈ ಪ್ರಶ್ನೆಯನ್ನು ಕೇಳಲಿ?

**ಶ್ರೀ ಸಿ.ಎಂ.ಎಸ್. ಶಾಸ್ತ್ರಿ (ಚಿಕ್ಕಮಗಳೂರು)**– ಸಾರಿಗೆ ಸಚಿವರು ದಯವಿಟ್ಟು ಇದನ್ನು ತಿಳಿಸುವರೆ –

(ಎ) ಮೈಸೂರು ರಾಜ್ಯ ರಸ್ತೆ ಸಾರಿಗೆ ನಿಗಮದ ಒಡೆತನಕ್ಕೆ ಒಳಪಟ್ಟ ಸರ್ವೀಸ್ ಬಸ್‌ಗಳ ಸಂಖ್ಯೆ;

(ಬಿ) ಅವುಗಳಲ್ಲಿ (1) ಬಳಕೆಯಲ್ಲಿರುವಂಥವು (2) ಬಳಕೆಯಲ್ಲಿಲ್ಲದಿರುವಂಥವು;

(ಸಿ) ಬಿಡಿಭಾಗಗಳ ಅಲಭ್ಯತೆಯಿಂದಾಗಿ ಅವುಗಳ ಪೈಕಿ ಬಳಕೆಯಲ್ಲಿಲ್ಲದವುಗಳು;

(ಡಿ) ಬಳಕೆಯಲ್ಲಿಲ್ಲದಿರುವಂಥ ಬಸ್ಸುಗಳಿಗೆ ಅಳವಡಿಸಿದ ಸಿಬ್ಬಂದಿಯನ್ನು ಈಗ ಯಾವ ರೀತಿ ನಿಯೋಜಿಸಲಾಗುತ್ತಿದೆ.

**ಶ್ರೀ ಮೊಹಮದ್ ಅಲಿ – (ಸಾರಿಗೆ ಸಚಿವರು)**

ಎ) 3.8.1968ರಂದು ಮೈಸೂರು ರಾಜ್ಯ ರಸ್ತೆ ಸಾರಿಗೆ ನಿಗಮದ ಒಡೆತನದಲ್ಲಿದ್ದ ಸರ್ವೀಸ್ ಬಸ್ಸುಗಳ ಒಟ್ಟು ಸಂಖ್ಯೆ 2,477.

ಬಿ) 3.8.1968ರಂದು 1999 ವಾಹನಗಳು ಬಳಕೆಯಲ್ಲಿದ್ದವು. ಉಳಿದ 478 ವಾಹನಗಳು ಬಳಕೆಯಲ್ಲಿರಲಿಲ್ಲ.

ಸಿ) ಬಿಡಿ ಭಾಗಗಳ ಅಲಭ್ಯತೆಯಿಂದಾಗಿ 53 ವಾಹನಗಳು ಬಳಕೆಯಲ್ಲಿರಲಿಲ್ಲ.

ಡಿ) ಸಿಬ್ಬಂದಿಯನ್ನು ಆಪರೇಟ್ ಮಾಡುತ್ತಿರುವ ಷೆಡ್ಯೂಲ್ ಗಳ ಆಧಾರದ ಮೇಲೆ ಮಂಜೂರು ಮಾಡುತ್ತಿರುವುದರಿಂದ, ಬಸ್ಸುಗಳ ಸಂಖ್ಯೆಯ ಆಧಾರದ ಮೇಲೆ ಮಂಜೂರು ಮಾಡದಿರುವುದರಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ.

**ಶ್ರೀ ಸಿ.ಎಂ.ಎಸ್.ಶಾಸ್ತ್ರಿ** – 178 ಬಸ್ಸುಗಳ ಬೆಲೆ ಎಷ್ಟಾಗುತ್ತದೆ? 53 ಬಸ್ಸುಗಳಿಗೆ ಬೇಕಾಗಿರತಕ್ಕ ಬಿಡಿ ಭಾಗಗಳು ಇಂಡಿಯಾ ದೇಶದಲ್ಲಿ ತಯಾರಾಗುತ್ತಾ ಇಲ್ಲವೆ? ಅವು ಸಿಕ್ಕಿದರೆ, ಏಕೆ ಬಿಡಿ ಭಾಗಗಳನ್ನು ತರಿಸಿ ಈ ಬಸ್ಸುಗಳನ್ನು ರಿಪೇರಿ ಮಾಡಿಸಿ ರಸ್ತೆಗಳಲ್ಲಿ ಓಡಿಸುತ್ತಾ ಇಲ್ಲ?

**ಶ್ರೀ ಮೊಹಮದ್ ಅಲಿ** – ಸ್ವಾಮಿ, ರಸ್ತೆ ಸಾರಿಗೆ ಇಲಾಖೆಗೆ ಬೇಕಾಗುವ ಕೆಲವು ಬಿಡಿ ಭಾಗಗಳನ್ನು ಆಮದು ಮಾಡಿಕೊಳ್ಳಬೇಕಾಗಿದೆ ಮತ್ತು ಲೈಲ್ಯಾಂಡ್ ಬಸ್ಸುಗಳಿಗೆ ಹಾಗೂ ಟಿ.ಎಂ.ಬಿ.ಗಳಿಗೆ ಬಿಡಿ ಭಾಗಗಳನ್ನು ಪಡೆಯುವುದು ತುಂಬಾ ಕಷ್ಟವಾಗಿದೆ.ನಮ್ಮ ಇಂಜಿನಿಯರ್‌ಗಳು ಅಗತ್ಯ ಬಿಡಿ ಭಾಗಗಳನ್ನು ಖರೀದಿಸಲು ಜೆಮ್‌ಷೆಡ್ ಪುರಕ್ಕೆ ಹೋಗಿದ್ದಾರೆ. ಆದಷ್ಟು ಬೇಗನೆ ಈ ಬಸ್ಸುಗಳನ್ನು ರಸ್ತೆಯ ಮೇಲೆ ಓಡಿಸುವುದಕ್ಕೆನಮಗೆ ಸಾಧ್ಯವಾಗುತ್ತದೆ.

**ಶ್ರೀ ಎಸ್. ಶಿವಪ್ಪ** – ಹಾಸನ ಜಿಲ್ಲೆಗೆ ಸಂಬಂಧಿಸಿದಂತೆ ಹೇಳುವುದಾದರೆ ರಸ್ತೆ ಸಾರಿಗೆ ನಿಗಮದ ಕಾರ್ಯ ನಿರ್ವಹಣೆ ಕಳೆದ ಏಳು ವರ್ಷಗಳಿಂದ ತೃಪ್ತಿಕರವಾಗಿಲ್ಲ. ಜನ ಸಂಚಾರದ ಒತ್ತಡ ಶೇ.100ರಷ್ಟು ಹೆಚ್ಚಾಗಿದ್ದಾಗ್ಯೂ ನೀವು ಹೆಚ್ಚು ಬಸ್ಸುಗಳನ್ನು ಓಡಿಸುತ್ತಿಲ್ಲ. ನಿಮ್ಮ ಮಾರ್ಗಗಳು 1961ರಲ್ಲಿದ್ದಷ್ಟೇ ಇವೆ. ಇದರಿಂದ ಪ್ರಯಾಣಿಕರಿಗೆ ತುಂಬಾ ತೊಂದರೆಯುಂಟಾಗುತ್ತಿದೆ ಮತ್ತು ಅವರಿಗೆ ನಿಮ್ಮ ಯೋಜನೆಗಳಿಂದ ಯಾವುದೇ ಪ್ರಯೋಜನವಾಗುತ್ತಿಲ್ಲ. ಈ ಸಂಗತಿ ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಮೊಹಮದ್ ಅಲಿ** – ಜನ ಸಂಚಾರದ ಒತ್ತಡದಲ್ಲಿ ಹೆಚ್ಚಳವಾಗಿದೆ. ವಿರೋಧಪಕ್ಷದ ನಾಯಕರ ಮಾತನ್ನು ನಾನು ಒಪ್ಪುತ್ತೇನೆ. ಸೇವೆಗಳನ್ನು ನಾವು ಹೆಚ್ಚಿಸಬೇಕಾಗಿದೆ.

**ಶ್ರೀ ಎನ್. ಎ.ಚನ್ನೇಗೌಡ** – ರಾಷ್ಟ್ರೀಕರಣವಾಗುವುದಕ್ಕಿಂತ ಮುಂದೆ ಗ್ರಾಮಾಂತರ ಪ್ರದೇಶಗಳಲ್ಲಿ ಹೋಗುತ್ತಾ ಇದ್ದ ಬಸ್ಸುಗಳು ನಿಂತಿರುವುದರಿಂದ ತೊಂದರೆಯಾಗಿದೆ. ತಮ್ಮ ಬಸ್ಸುಗಳನ್ನು ಆ ಮೂಲಕ ಹೋಗುವ ಹಾಗೆ ಏರ್ಪಾಡು ಮಾಡುತ್ತೀರಾ? ಮತ್ತು ಕೆಲಸಗಳನ್ನು ಕಳೆದುಕೊಂಡಿರತಕ್ಕ ಕಂಡಕ್ಟರುಗಳು ಮತ್ತು ಡ್ರೈವರುಗಳಿಗೆ ನಿಮ್ಮ ಕಾರ್ಪೋರೇಷನ್ನಿನಲ್ಲಿ ಕೆಲಸ ಕೊಡಿಸುವುದಕ್ಕೆ ಪ್ರಿಪೆರೆನ್ಸ್ ಕೊಡುತ್ತೀರಾ?

**ಶ್ರೀ ಮೊಹಮದ್ ಅಲಿ** – ರಾಷ್ಟ್ರೀಕರಣದಿಂದಾಗಿ ಕೆಲಸ ಕಳೆದುಕೊಂಡಿರುವ ಕಂಡಕ್ಟರ್ ಮತ್ತು ಡ್ರೈವರ್ ಗಳನ್ನು ಪುನರ್ ನಿಯೋಜಿಸುವ ವಿಷಯದಲ್ಲಿ, ಖಾಸಗಿ ಆಪರೇಟರ್‌ಗಳು ಕೆಲಸದಿಂದ ತೆಗೆದುಹಾಕಿರುವ ನೌಕರರಿಗೆ, ಅವರು ನೇಮಕಾತಿ ಷರತ್ತುಗಳನ್ನು ಪೂರೈಸಿದರೆ, ಆದ್ಯತೆ ನೀಡಲಾಗುವುದು. ಅಂಥ ನೌಕರಿಗೆ ಸಂಬಂಧಿಸಿದಂತೆ ವಯಸ್ಸಿನ ಷರತ್ತನ್ನು ಮತ್ತು ಯಾಂತ್ರಿಕ ಸಿಬ್ಬಂದಿಯ ಅರ್ಹತೆಯನ್ನು ಸಡಿಲಿಸಲು ರಸ್ತೆ ಸಾರಿಗೆ ನಿಗಮದ ಮನವೊಲಿಸಲಾಗಿದೆ.

ರಾತ್ರಿ 9.30 ಗಂಟೆ.

**ಶ್ರೀ ಎಸ್.ಎಸ್. ಶೆಟ್ಟರ್**– ಭಾರತೀಯ ಮಜದೂರ್ ಸಂಘವು, ಬಸ್ ಮಾರ್ಗಗಳ ರಾಷ್ಟ್ರೀಕರಣದಿಂದಾಗಿ ತಮ್ಮ ಕೆಲಸ ಕಳೆದುಕೊಂಡಿರುವಂಥ ವ್ಯಕ್ತಿಗಳ ಬಗ್ಗೆ ಯಾವುದಾದರೂ ಮನವಿಯನ್ನು ಸಲ್ಲಿಸಿದೆಯೆ ಸ್ವಾಮಿ?

**ಶ್ರೀ ಮೊಹಮದ್ ಅಲಿ** – ಸರ್ಕಾರಕ್ಕೆ ಹಾಗೂ ಸಾರಿಗೆ ನಿಗಮಕ್ಕೆ ಹಲವಾರು ಮನವಿಗಳು ಬಂದಿವೆ.

**ಸನ್ಮಾನ್ಯ ಸಭಾಧ್ಯಕ್ಷರು** – ಈಗ ರಾತ್ರಿ 9.30 ಗಂಟೆ ಆಗಿದೆ. ಪ್ರಶ್ನೋತ್ತರ ವೇಳೆಯನ್ನು ಮತ್ತೆ 15 ನಿಮಿಷ ವಿಸ್ತರಿಸುತ್ತೇನೆ. ಮಾನ್ಯ ಸದಸ್ಯರುನನ್ನೊಂದಿಗೆ ಸಹಕರಿಸಿದ್ದೇ ಆದರೆ ನಾನು ಉಳಿದ ಪ್ರಶ್ನೆಗಳನ್ನು ಸಹ ಮುಗಿಸುತ್ತೇನೆ. ಶ್ರೀ ಗಂಗಾಧರ್ ರವರಿಂದ ಮುಂದಿನ ಪ್ರಶ್ನೆ.

## ಬೆಂಗಳೂರು ಮತ್ತು ಕುಂದಾಪುರ ನಡುವೆ ನೇರ ಬಸ್

**ಶ್ರೀ ಸುಬ್ಬರಾವ್ ಹಲ್ಸನದ್ (ಬೈಂದೂರು)** – ವಾರ್ತಾ ಮತ್ತು ಪ್ರಚಾರ, ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಇದನ್ನು ತಿಳಿಸುವರೆ –

(ಎ) ಬೆಂಗಳೂರಿನಿಂದ ಕುಂದಾಪುರ (ದಕ್ಷಿಣ ಕನ್ನಡ ಜಿಲ್ಲೆ), ಕುಂದಾಪುರದಿಂದ ಬೆಂಗಳೂರುನಡುವೆ ಯಾವುದೇ ನೇರ ಬಸ್ಸುಗಳು ಓಡಾಡುತ್ತಿಲ್ಲ ಎಂದು ಸರ್ಕಾರಕ್ಕೆ ತಿಳಿದಿದೆಯೆ;

(ಬಿ) ಹಾಗಿದ್ದರೆ, ಆದಷ್ಟು ಬೇಗನೆ ಬೆಂಗಳೂರು ಮತ್ತು ಕುಂದಾಪುರನಡುವೆ ಬಸ್ ಓಡಿಸುವ ಯಾವುದೇ ಪ್ರಸ್ತಾಪವಿದೆಯೆ;

**ಶ್ರೀ ಮೊಹಮದ್ ಅಲಿ** – (ವಾರ್ತಾ ಮತ್ತು ಪ್ರಚಾರ, ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)

(ಎ) ಹೌದು

(ಬಿ) ಹೌದು

**ಶ್ರೀ ಸುಬ್ಬರಾವ್ ಹಲಸನದ್** – ಈ ಮಾರ್ಗದಲ್ಲಿ ಬಸ್ ಲೈನನ್ನು ಹಾಕುವುದಕ್ಕೆ ಇನ್ನೂ ಎಷ್ಟು ಕಾಲ ಬೇಕಾಗುತ್ತದೆ.

**ಶ್ರೀ ಮೊಹಮದ್ ಆಲಿ** – ರಸ್ತೆ ಸಾರಿಗೆ ನಿಗಮವು ಪರ್ಮಿಟ್‌ಗೆ ಅರ್ಜಿ ಸಲ್ಲಿಸಿದ್ದು ಆರ್.ಟಿ.ಎ.ಯಿಂದ ಪರ್ಮಿಟ್ ಮಂಜೂರಾದ ಕೂಡಲೇ ಕುಂದಾಪುರಕ್ಕೆ ರಸ್ತೆ ಲೈನ್ ವಿಸ್ತರಿಸಲು ವ್ಯವಸ್ಥೆಗಳನ್ನು ಮಾಡಲಾಗುವುದು.

**ಶ್ರೀ ಬಿ.ಎಂ. ಇದಿನಬ್ಬ** – ಈಗ ಬೆಂಗಳೂರು – ಕುಂದಾಪುರಕ್ಕೆ ನೇರವಾಗಿ ಬಸ್ ಚಾಲು ಮಾಡುವ ಯೋಜನೆ ಇದೆ. ಅದು ಮಂಗಳೂರು ಮಾರ್ಗವಾಗಿ ಹೋಗುತ್ತದೋ ಅಥವಾ ಅಗುಂಬಿ ಮಾರ್ಗವಾಗಿ ಹೋಗುತ್ತದೋ?

**ಶ್ರೀ ಮೊಹಮದ್ ಅಲಿ** – ಅದು ಹೇಳುವುದು ಕಷ್ಟ. ತುಂಬಾ ಹಿಂದೆ ನಾವು ಪರ್ಮಿಟ್‌ಗೆ ಅರ್ಜಿ ಸಲ್ಲಿಸಿದ್ದೇವೆ.

**ಶ್ರೀ ಜಿ. ಚಂದ್ರಕಾಂತ**– ಕ್ರಮ ತೆಗೆದುಕೊಳ್ಳಲು ಆರ್.ಟಿ.ಎ ಕಚೇರಿಯಲ್ಲಿ ವಿಳಂಬವಾಗುತ್ತಿದೆ ಎಂಬುದು ನಿಮ್ಮ ಗಮನಕ್ಕೆ ಬಂದಿದೆ?

**ಶ್ರೀ ಮೊಹಮದ್ ಅಲಿ** – ಈ ಕಚೇರಿಯಲ್ಲಿ ಹಲವಾರು ಪ್ರಕರಣಗಳು ವಿಳಂಬವಾಗುತ್ತಿವೆ ಎಂಬುದುನಮ್ಮ ಗಮನಕ್ಕೆ ಬಂದಿದೆ. ಇದು ಅರೆ ನ್ಯಾಯಿಕ ಸಂಸ್ಥೆಯಾಗಿರುವುದರಿಂದ ಈ ಆರ್.ಟಿ.ಎ.ವಿರುದ್ಧ ಸರ್ಕಾರ ಕ್ರಮ ತೆಗೆದುಕೊಳ್ಳಲು ಬರುವುದಿಲ್ಲ.

**ಶ್ರೀ ರಾಮಚಂದ್ರ** – ಬೆಂಗಳೂರಿನಿಂದ ಉಡುಪಿಗೆ ಹೋಗುವಾಗ ಅದು ಯಾವ ಮಾರ್ಗವಾಗಿ ಹೋಗುತ್ತದೆ?

**ಶ್ರೀ ಮೊಹಮದ್ ಅಲಿ** – ಉಡುಪಿ ಮಾರ್ಗವಾಗಿ ಹೋಗುತ್ತದೆ. ಈ ಬಸ್ ಸೇವೆಯನ್ನು ಬೆಂಗಳೂರಿನಿಂದ ಉಡುಪಿಗೆ ಒದಗಿಸಲಾಗಿದ್ದು, ಇದನ್ನು ಕುಂದಾಪುರಕ್ಕೆ ವಿಸ್ತರಿಸಸಲಾಗುವುದು.

**ಶ್ರೀ ಬಿ. ವಿಠಲ್‌ದಾಸ್ ಶೆಟ್ಟಿ** – ಬೆಂಗಳೂರಿನಿಂದ ಮಂಗಳೂರಿಗೆ ಓಡಿಸುತ್ತಿರುವ ಲಕ್ಸುರಿ ಬಸ್ಸುಗಳನ್ನು ಕುಂದಾಪುರದಲ್ಲಿ ನಿಲ್ಲಿಸಲು ಸಾಧ್ಯವೇ ತಿಳಿಸಿ?

**ಶ್ರೀ ಮೊಹಮದ್ ಅಲಿ** – ಈ ಪ್ರಶ್ನೆ ಇದರಿಂದ ಉದ್ಭವಿಸುವುದಿಲ್ಲವಾದ್ದರಿಂದ ಮಾನ್ಯ ಸದಸ್ಯರು ಬೇರೊಂದು ಪ್ರಶ್ನೆ ಕೇಳುವುದಾದರೆ ಉತ್ತರಿಸಲು  ನನಗೆ ಸಾಧ್ಯವಾಗುತ್ತದೆ.

**ಶ್ರೀ ಎಂ ನಾಗಪ್ಪ** – (ಬಿ) ಪ್ರಶ್ನೆಯಲ್ಲಿ ಇಂಗ್ಲೀಷ್ ಕಾಪಿಯ ಕೊನೆಯಲ್ಲಿ 'ಅರ್ಲಿ' ಎಂದು ಕೇಳಿದ್ದಕ್ಕೆ ಉತ್ತರ 'ಎಸ್' ಎಂದು ಹೇಳಿದೆ. ಎಷ್ಟು ಅವಧಿಯಲ್ಲಿ ಅದನ್ನು ಮಾಡುತ್ತೀರಿ ಎಂಬುದನ್ನು ಹೇಳಲಿಲ್ಲ. ತಮ್ಮಲ್ಲಿ ಅರ್ಲಿ' (aearly) ಅಂದರೆ ಎಷ್ಟು ವರ್ಷಗಳು, ಎಷ್ಟು ತಿಂಗಳುಗಳು?

**ಶ್ರೀ ಮೊಹಮದ್ ಅಲಿ** – ಆ ವಿವರಗಳು  ನನ್ನಲ್ಲಿಲ್ಲ.

**ಶ್ರೀ ಸುಬ್ಬರಾವ್ ಹಲ್ಸನದ್** – ಈ ಮಾರ್ಗದಲ್ಲಿ ಭಟ್ಕಲ್‌ವರೆಗೆ ಮುಂದುವರೆಸಲು ಸಾಧ್ಯವಾಗುತ್ತದೆಯೇ?

**ಶ್ರೀ ಮೊಹಮದ್ ಅಲಿ** – ನಾವು ಪರ್ಮಿಟ್‌ಗೆ ಅರ್ಜಿ ಸಲ್ಲಿಸಿದ್ದೇವೆ. ಅದುನಮಗೆ ದೊರೆತ ಕೂಡಲೇ ಈ ಬಸ್ ಸೇವೆಯನ್ನು ವಿಸ್ತರಿಸಲು ವ್ಯವಸ್ಥೆ ಮಾಡಲಾಗುವುದು.

**ಶ್ರೀ ಸುಬ್ಬರಾವ್ ಹಲ್ಸನದ್** – ಈ ರೀತಿ ಮಾಡುವುದರಿಂದ, ಕುಂದಾಪುರದಿಂದ ಅಲ್ಲಿ ನೇರವಾಗಿ ಬಸ್ಸುಗಳು ಹೋಗುವುದಕ್ಕೆ ಅನುಕೂಲವಾಗುವುದಿಲ್ಲವೇ?

**ಶ್ರೀ ಮೊಹಮದ್ ಅಲಿ** – ಬೇರೊಂದು ಮಾರ್ಗದ ಮೂಲಕ ಭಟ್ಕಲ್‌ನಿಂದ ಮತ್ತೊಂದು ಬಸ್ ಸೇವೆಯನ್ನು ನಾವು ಪ್ರಾರಂಭಿಸಿದ್ದೇವೆ.

**ಶ್ರೀ ಸುಬ್ಬರಾವ್ ಹಲ್ಸನದ್** – ಭಟ್ಕಲ್ – ಗಂಗೊಳ್ಳಿ ಸರ್ವಿಸ್‌ನ್ನು ಕುಂದಾಪುರದಿಂದ ಮುಂದುವರಿಸುವುದು ಸಾಧ್ಯವೇ?

**ಶ್ರೀ ಮೊಹಮದ್ ಅಲಿ** – ಅದನ್ನು ಪ್ರತ್ಯೇಕವಾಗಿ ಪರಿಶೀಲನೆ ಮಾಡಬೇಕಾಗುತ್ತದೆ.

**ಶ್ರೀ ಎಂ. ನಾಗಪ್ಪ (ರಾಯಚೂರು)** .– ಸಾರಿಗೆ ಸಚಿವರು ದಯವಿಟ್ಟು ಇದನ್ನು ತಿಳಿಸುವರೇ –

(ಎ) ರಾಯಚೂರು ಮತ್ತು ಲಿಂಗಸುಗೂರುನಲ್ಲಿರುವ ಎರಡು ಬಸ್ ಡಿಪೋಗಳಲ್ಲಿ ಆ ಡಿಪೋಗಳ ಪ್ರಭಾರದಲ್ಲಿರುವ ಅಧಿಕಾರಿಗಳು ಸಾವಿರಾರು ಲೀಟರ್ ಡೀಸಲ್ ಮತ್ತು ಸೀಮೆ ಎಣ್ಣೆಯನ್ನು ದುರುಪಯೋಗಪಡಿಸಿಕೊಂಡಿರುವ ವಿಷಯ ಸರ್ಕಾರಕ್ಕೆ ತಿಳಿದಿದೆಯೇ;

(ಬಿ) ಹಾಗಿದ್ದರೆ ಈ ವಿಷಯದಲ್ಲಿ ಸರ್ಕಾರ ತೆಗೆದುಕೊಂಡಿರುವ ಕ್ರಮವೇನು?

**ಶ್ರೀ ಮೊಹಮದ್ ಅಲಿ (ಸಾರಿಗೆ ಸಚಿವರು)**

(ಎ) ಹೌದು. ಲಿಂಗಸುಗೂರು ಡಿಪೋನಲ್ಲಿ ಡೀಸೆಲ್ ಮತ್ತು ಸೀಮೆಎಣ್ಣೆ ದುರುಪಯೋಗಕ್ಕೆ ಸಂಬಂಧಿಸಿದಂತೆ ಮೈಸೂರು ರಾಜ್ಯ ಸಾರಿಗೆ ನಿಗಮದ ಕೇಂದ್ರ ಕಚೇರಿಗೆ ತಂತಿ ಬಂದಿದೆ. ದಾಸ್ತಾನು ಪರಿಶೀಲನೆ ಸಂದರ್ಭದಲ್ಲಿ ಸೀಮೆ ಎಣ್ಣೆಯನ್ನು ಅಸಾಧಾರಣ ಪ್ರಮಾಣದಲ್ಲಿ ಬಳಸಿರುವುದು ವರದಿಯಾಗಿದೆ.

(ಬಿ) ಮತ್ತೊಂದು ಲೋಪ ಪ್ರಕರಣದಲ್ಲಿ ಈಗಾಗಲೇ ಅಮಾನತ್ತಿನಲ್ಲಿರಿಸಲಾಗಿರುವ ಲಿಂಗಸುಗೂರು ಡಿಪೋ ವ್ಯವಸ್ಥಾಪಕರ ವಿರುದ್ಧ ಇಲಾಖಾ ವಿಚಾರಣೆನಡೆಸಿ ಅದರ ಹೊಣೆಗಾರಿಕೆಯನ್ನು ನಿಗದಿಪಡಿಸಲು ವಿಚಾರಣಾಧಿಕಾರಿಯನ್ನು ನೇಮಕ ಮಾಡಲಾಗಿದೆ. ರಾಯಚೂರು ಡಿಪೋಗೆ ಸಂಬಂಧಿಸಿದಂತೆ ವಿಚಾರಣೆನಡೆಸಿ ಹೊಣೆಗಾರಿಕೆ ನಿಗದಿಪಡಿಸುವಂತೆ ಗುಲ್ಬರ್ಗಾದ ವಿಭಾಗೀಯ ನಿಯಂತ್ರಣಾಧಿಕಾರಿಗೆ ಸೂಚಿಸಲಾಗಿದೆ.

**ಶ್ರೀ ಎಂ. ನಾಗಪ್ಪ** – ಇವೆರಡು ಡಿಪೋಗಳಲ್ಲಿ ಎಷ್ಟು ಗ್ಯಾಲನ್ ಡೀಸಲ್ ಆಯಿಲ್ ಹಾಗೂ ಸೀಮೆಎಣ್ಣೆ ದುರುಪಯೋಗವಾಗುತ್ತದೆ. ಅದರ ವಿವರಗಳನ್ನು ಕೊಡುತ್ತೀರಾ?

**ಶ್ರೀ ಮೊಹಮದ್ ಅಲಿ** – ಬಂದಿರುವ ತಂತಿಯಲ್ಲಿ ಲಿಂಗಸುಗೂರು ಡಿಪೋನಲ್ಲಿ 6000 ಲೀಟರ್ ಡೀಸಲ್ ಮತ್ತು 300 ಲೀಟರ್ ಸೀಮೆಎಣ್ಣೆ ದುರುಪಯೋಗವಾಗಿದೆ ಎಂದು ವರದಿಯಾಗಿದೆ. ರಾಯಚೂರು ಡಿಪೋ ಬಗ್ಗೆ ಏನನ್ನೂ ತಿಳಿಸಿಲ್ಲ.

**ಶ್ರೀ ಎಂ ನಾಗಪ್ಪ** – ಇದರಲ್ಲಿ ಎರಡು ಡಿಪೋಗಳ ಬಗ್ಗೆ ಹೇಳಿದೆ. ಇದುವರೆಗೆ ಬಂದಿರುವ ವರದಿಯಂತೆ ಯಾವ ಯಾವ ಡಿಪೋಗಳಲ್ಲಿ ಎಷ್ಟು ದುರುಪಯೋಗವಾಗಿದೆ ಎನ್ನುವ ವಿವರಗಳು ಬಂದಿವೆಯೇ? ಹಾಗೆ ವರದಿಗಳನ್ನು ಕಳುಹಿಸದೇ ಇದ್ದರೆ ಅಂತಹ ಅಧಿಕಾರಿಗಳ ಮೇಲೆ ಏನಾದರೂ ಕ್ರಮ ತೆಗೆದುಕೊಂಡಿದ್ದೀರಾ?

**ಶ್ರೀ ಮೊಹಮದ್ ಅಲಿ** – ವಿಚಾರಣಾಧಿಕಾರಿಯನ್ನು ನೇಮಕ ಮಾಡಲಾಗಿದೆ. ಪ್ರಾಥಮಿಕ ವರದಿ ಬಂದಿದೆ. ಹೊಣೆಗಾರಿಕೆಯನ್ನು, ಹೊಣೆಗಾರಿಕೆಯ ಸ್ವರೂಪವನ್ನು ಮತ್ತು ಅದಕ್ಕೆ ಹೊಣೆಗಾರರಾದ ವ್ಯಕ್ತಿಗಳನ್ನು ಗೊತ್ತುಪಡಿಸಲು ಹೆಚ್ಚಿನ ವಿಚಾರಣೆನಡೆಯುತ್ತಿದೆ.

**ಶ್ರೀ ಎನ್. ಚನ್ನೇಗೌಡ** – ಇದುವರೆಗೆ ಸರ್ಕಾರಕ್ಕೆ ಯಾವ ವರದಿಗಳೂ ಬಂದಿಲ್ಲವೇ?

**ಶ್ರೀ ಮೊಹಮದ್ ಅಲಿ** – ಈ ತಂತಿಯಿಂದಾಗಿ ಅದು ಸರ್ಕಾರದ ಗಮನಕ್ಕೆ ಬಂದಿದೆ.

**ಶ್ರೀ ಎನ್. ಚನ್ನೇಗೌಡ** – ಯಾವ ಕಾಲದಲ್ಲಿ ಇದು ದುರುಪಯೋಗವಾಗಿದೆ ಎಂದು ತಿಳಿದುಬಂದಿದೆ?

**ಶ್ರೀ ಮೊಹಮದ್ ಅಲಿ** – ಇದು ತಂತಿ ಬರುವುದಕ್ಕೆ ಮುಂಚಿನ ಆರು ತಿಂಗಳಿಗೆ ಸಂಬಂಧಪಡುತ್ತದೆ.

**ಶ್ರೀ ಜಿ. ಗುಂಡಪ್ಪ** – ವಿಚಾರಣಾಧಿಕಾರಿಯ ಪ್ರಾಥಮಿಕ ವರದಿಯಲ್ಲಿ ಏನು ಹೇಳಿದೆ? ವಿಚಾರಣೆಯ ಸಮಯದಲ್ಲಿ ಸಂಬಂಧಪಟ್ಟ ನೌಕರರನ್ನು ಅಮಾನತ್ತಿನಲ್ಲಿಡಲಾಗಿತ್ತೇ, ಪ್ರಾಥಮಿಕ ವಿಚಾರಣೆನಡೆಸಲು ವಿಚಾರಣಾ ಅಧಿಕಾರಿಗಳು ತೆಗೆದುಕೊಂಡ ಸಮಯ ಎಷ್ಟು, ಅಂತಿಮ ವರದಿಯನ್ನು ಸಲ್ಲಿಸಲು ಅವರಿಗೆ ಇನ್ನೆಷ್ಟು ಸಮಯ ಬೇಕಾಗುತ್ತದೆ?

**ಶ್ರೀ ಮೊಹಮದ್ ಅಲಿ** – ಅಂತಿಮ ವರದಿಯನ್ನು ಇನ್ನೊಂದು ತಿಂಗಳೊಳಗೆ ನಾನು ನಿರೀಕ್ಷಿಸುತ್ತಿದ್ದೇನೆ. ಪ್ರಾಥಮಿಕ ವರದಿಯು ತಪ್ಪು ಲೆಕ್ಕ ಇಟ್ಟಿರುವುದನ್ನು, ಅಧಿಕ ನೀಡಿಕೆಯನ್ನು ಹಾಗೂ ಕೊರತೆಯನ್ನು ಬಹಿರಂಗಪಡಿಸಿದೆ. ಇದು ದುರುಪಯೋಗದಿಂದಾದದ್ದೇ? ತಪ್ಪು ನೀಡಿಕೆಯಿಂದ ಅಥವಾ ಅಧಿಕ ನೀಡಿಕೆಯಿಂದಾದದ್ದೇ ಅಥವಾ ಕಳುವಿನಿಂದಾದದ್ದೇ? ಎಂಬುದನ್ನು ಪರಿಶೀಲನೆ ಮಾಡಲಾಗುತ್ತಿದೆ. ದಾಸ್ತಾನಿನ ಪರಿಶೀಲನೆನಡೆಸಿದನಂತರ ಅಂತಿಮ ವರದಿಯನ್ನು ನೀಡಲಾಗುವುದು.

**ಶ್ರೀ ಎಂ ನಾಗಪ್ಪ** – ಅದೇ ಸ್ಥಳದಲ್ಲಿದ್ದ ಡಿವಿಜನಲ್ ಕಂಟ್ರೋಲ್ ಅಧಿಕಾರಿಗಳನ್ನು ನೇಮಕ ಮಾಡಿ, ಅಲ್ಲಿಯ ಅಧಿಕಾರಿಯ ಅದೇ ಸ್ಥಳದಲ್ಲಿಟ್ಟು ವಿಚಾರಣೆ ಮಾಡಿಸಲಾಯಿತು ಎಂದು ಹೇಳಿದಂತಾಯಿತು. ಇದರಿಂದ ಆ ಅಧಿಕಾರಿಗೆ ಡಾಕ್ಯುಮೆಂಟುಗಳ್ನು ಟ್ಯಾಂಪರ್ ಮಾಡುವುದಕ್ಕೆ ಅವಕಾಶವಿದೆ ಎಂಬುದು ಸರ್ಕಾರದವರಿಗೆ ಗೊತ್ತಿರಲಿಲ್ಲವೇ? ಅವರನ್ನು ತೆಗೆದುಹಾಕಿ ಅಲ್ಲಿ ವಿಚಾರಣೆನಡೆಸುವುದಕ್ಕೆ ಸಾಧ್ಯವಿರಲಿಲ್ಲವೇ?

**ಶ್ರೀ ಮೊಹಮದ್ ಅಲಿ** – ದಸ್ತಾವೇಜುಗಳನ್ನು ಮತ್ತು ಇತರ ವಸ್ತುಗಳನ್ನು ವಶಕ್ಕೆ ತೆಗೆದುಕೊಳ್ಳಲಾಗಿದ್ದು ಅವುನಮ್ಮ ಭಧ್ರತಾಧಿಕಾರಿಗಳ ಅಭಿರಕ್ಷೆಯಲ್ಲಿವೆ.ನಮ್ಮ ಭದ್ರತಾಧಿಕಾರಿಗಳು ಈ ದಸ್ತಾವೇಜುಗಳ ಬಗ್ಗೆ ಈಗಾಗಲೇ ಗಮನ ಹರಿಸಿದ್ದಾರೆ ಮತ್ತು ಆ ದಸ್ತಾವೇಜುಗಳನ್ನು ಟ್ಯಾಂಪರ್ ಮಾಡುವುದಕ್ಕೆ ಯಾವುದೇ ಅವಕಾಶವಿಲ್ಲ ಎಂದು ನನಗೆ ಅನ್ನಿಸುತ್ತದೆ.

## ಹಿಂದಿನ ಬಾಂಬೆ- ಕರ್ನಾಟಕ ಪ್ರದೇಶದಲ್ಲಿ ಬಸ್ ನಿಲ್ದಾಣಗಳ ನಿರ್ಮಾಣ

**ಶ್ರೀ ಎಸ್.ಎಸ್. ಶೆಟ್ಟರ್ (ಹುಬ್ಬಳ್ಳಿ)** ಸಾರಿಗೆ ಸಚಿವರು ದಯವಿಟ್ಟು ಇದನ್ನು ತಿಳಿಸುವರೇ:

(ಎ) ಹಿಂದಿನ ಬಾಂಬೆ-ಕರ್ನಾಟಕ ಪ್ರದೇಶದಲ್ಲಿ ಮೈಸೂರು ರಾಜ್ಯ ರಸ್ತೆ ಸಾರಿಗೆ ನಿಗಮವು ನಿರ್ಮಿಸಲು ಉದ್ದೇಶಿಸಿರುವ ಬಸ್ ನಿಲ್ದಾಣಗಳ ಸಂಖ್ಯೆ ;

(ಬಿ) ಪ್ರತಿಯೊಂದು ಬಸ್ ನಿಲ್ದಾಣದ ಒಟ್ಟು ಅಂದಾಜು ವೆಚ್ಚ ;

(ಸಿ) ಕಾಮಗಾರಿಯು ಪ್ರಗತಿಯಲ್ಲಿದೆಯೇ: ಇಲ್ಲದಿದ್ದಲ್ಲಿ ಅದಕ್ಕೆ ಕಾರಣವೇನು?

**ಶ್ರೀ ಮೊಹಮದ್ ಅಲಿ (ಸಾರಿಗೆ ಸಚಿವರು)**

(ಎ) ಭೂಮಿ ಮತ್ತು ಹಣಕಾಸು ಸಂಪನ್ಮೂಲಗಳ ಲಭ್ಯತೆಯನ್ನು ಅವಲಂಬಿಸಿ ಐವತ್ತೆಂಟು ಬಸ್ ನಿಲ್ದಾಣಗಳನ್ನು ನಿರ್ಮಿಸಲು ಉದ್ದೇಶಿಸಲಾಗಿದೆ.

(ಬಿ) ಮತ್ತು

(ಸಿ) ಲಗತ್ತಿಸಿರುವ ತ:ಖ್ತೆಯ ಪ್ರಕಾರ.

**ಶ್ರೀ ಎಸ್.ಎಸ್. ಶೆಟ್ಟರ್** – ಪ್ರಶ್ನೆಗೆ ನೀವು ನೀಡಿದ ಉತ್ತರಕ್ಕೆ ಸಂಬಂಧಿಸಿದಂತೆ ಬಸ್ ನಿಲ್ದಾಣಗಳಿಗೆ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವಲ್ಲಿ ಏನು ತೊಂದರೆಯಿದೆ ತಿಳಿಸುತ್ತೀರಾ?

**ಶ್ರೀ ಮೊಹಮದ್ ಅಲಿ** – ಯಾವುದೇ ತೊಂದರೆ ಇದೆ ಎಂದು ನನಗೆ ಅನ್ನಿಸುವುದಿಲ್ಲ. ಭೂಮಿಯ ಸ್ವಾಧೀನಕ್ಕೆ ಸಂಬಂಧಿಸಿದಂತೆ ನಾವು ಬಹಳಷ್ಟು ಪ್ರಕ್ರಿಯಾ ವಿಧಿ ವಿಧಾನಗಳನ್ನು ಕೈಗೊಳ್ಳಬೇಕಾಗುತ್ತದೆ.

**ಶ್ರೀ ಎಸ್.ಎಸ್. ಶೆಟ್ಟರ್** – ರಸ್ತೆ ಸಾರಿಗೆ ಕಾಮಗಾರಿಗಳು ಬಹಳ ನಿಧಾನವಾಗಿ ನಡೆಯುತ್ತಿರುವುದರಿಂದ, ಅದನ್ನು ತ್ವರಿತಗತಿಯಲ್ಲಿ ತಕ್ಕ ಕ್ರಮವನ್ನು ತೆಗೆದುಕೊಳ್ಳುತ್ತೀರಾ?

**ಶ್ರೀ ಮೊಹಮದ್ ಅಲಿ** – ಪ್ರಗತಿಯಲ್ಲಿರುವ ಈ ಕಾಮಗಾರಿಗಳನ್ನು ತ್ವರಿತಗೊಳಿಸುವಂತೆ ನೋಡಿಕೊಳ್ಳುತ್ತೇನೆ.

**ಶ್ರೀ ಎಸ್.ಎಸ್. ಶೆಟ್ಟರ್** – ಅಣ್ಣಿಗೇರಿ ಮತ್ತು ಮನೋಲಿ ಗ್ರಾಮಗಳಲ್ಲಿನ ಕೆಲವು ಭೂ ಮಾಲೀಕರು ಬಸ್ ನಿಲ್ದಾಣಗಳ ನಿರ್ಮಾಣಕ್ಕೆ ಭೂಮಿಗಳನ್ನು ದಾನಮಾಡಲು ಸ್ವ–ಇಚ್ಛೆಯಿಂದ ಮುಂದೆ ಬಂದಿರುವುದು ನಿಜವೇ?

**ಶ್ರೀ ಮೊಹಮದ್ ಅಲಿ** – ನನಗೆ ನೋಟೀಸ್ ಬೇಕು.

**ಶ್ರೀ ಎಸ್.ಎಂ. ಗುರೆಡ್ಡಿ** – ಅ) ಪ್ರಶ್ನೆಗೆ ಉತ್ತರಕ್ಕೆ ಸಂಬಂಧವಾಗಿ ಕೊಟ್ಟಿರುವ ಪರಿಚ್ಛೇದದಲ್ಲಿ ಮುದ್ದೇಬಿಹಾಳ ಬಸ್ ನಿಲ್ದಾಣದ ಕೆಲಸ ಪ್ರಗತಿಯಲ್ಲಿದೆ ಎಂದು ಹೇಳಿದ್ದೀರಿ. ಎಷ್ಟು ಕೆಲಸ ಅಲ್ಲಿ ಆಗಿದೆ, ಎಷ್ಟು ರೂಪಾಯಿಗಳನ್ನು ಕೊಟ್ಟಿದ್ದೀರಿ?

**ಶ್ರೀ ಮೊಹಮದ್ ಅಲಿ** – ಕಾಮಗಾರಿ ಪ್ರಗತಿಯಲ್ಲಿದೆ. ವಿವರಗಳು ನನ್ನ ಬಳಿ ಇಲ್ಲ.

**ಶ್ರೀ ಸದಾಶಿವಪ್ಪ ಪಾಟೀಲ್**– ಎಲ್ಲಿಯಾದರೂ ಬಸ್‌ಸ್ಟ್ಯಾಂಡ್ ಕೆಲಸ ಆಗಬೇಕಾಗಿದೆ ಎಂಬುದಾಗಿ ಯಾರಾದರೂ ಮಾಹಿತಿಕೊಟ್ಟರೆ ಅದನ್ನು ವಿಚಾರ ಮಾಡುತ್ತೀರಾ?

**ಶ್ರೀ ಮೊಹಮದ್ ಅಲಿ** – ನಾನು ಪರಿಶೀಲನೆ ಮಾಡುತ್ತೇನೆ.

**ಶ್ರೀ ಸದಾಶಿವಪ್ಪ ಪಾಟೀಲ್**– ಸುಮಾರು ಮೂರು ವರ್ಷಗಳಿಂದಲೂ ಬಸ್ ನಿಲ್ದಾಣ ಕೆಲಸ ಜಾಸ್ತಿಯಾಗಿಲ್ಲಾ. ಯಾವ ಕಾರಣದಿಂದ ಜಾಸ್ತಿಯಾಗಿ ಆಗಿಲ್ಲ ತಿಳಿಸುತ್ತೀರಾ?

**ಶ್ರೀ ಮೊಹಮದ್ ಅಲಿ** – ಇದು ತುಂಬಾ ಸಾಮಾನ್ಯ ಪ್ರಶ್ನೆಯಾದ್ದರಿಂದ ಉತ್ತರ ನೀಡುವುದು ಕಷ್ಟ.

## ರಾಷ್ಟ್ರೀಕರಣಗೊಳಿಸಲಾದ ಬಸ್ ಮಾರ್ಗಗಳು

**ಶ್ರೀ ಎಂ ಮಲ್ಲಪ್ಪ (ಬಿರೂರು)** –ಸಾರಿಗೆ ಸಚಿವರು ದಯವಿಟ್ಟು ಇದನ್ನು ತಿಳಿಸುವರೇ –

(ಎ) ರಾಜ್ಯದಲ್ಲಿ ಈವರೆಗೆ ರಾಷ್ಟ್ರೀಕರಣಗೊಳಿಸಿರುವ ಬಸ್ ಮಾರ್ಗಗಳ ಸಂಖ್ಯೆ ;

(ಬಿ) ರಾಜ್ಯದಲ್ಲಿ ಖಾಸಗಿ ಬಸ್ ಆಪರೇಟರ್‌ಗಳು ಏಕಸ್ವಾಮ್ಯ ಹೊಂದಿರುವ ಬಸ್ ಮಾರ್ಗಗಳ ಸಂಖ್ಯೆ ;

(ಸಿ) ರಾಜ್ಯದಲ್ಲಿ ರಾಷ್ಟ್ರೀಕರಣಗೊಳಿಸಲು ಉದ್ದೇಶಿಸಿರುವ ಬಸ್ ಮಾರ್ಗಗಳ ಒಟ್ಟು ಮೇಲೇಜ್;

(ಡಿ) ಬಸ್ ಮಾರ್ಗಗಳ ರಾಷ್ಟ್ರೀಕರಣಕ್ಕೆ ಮಾಡಿರುವ ವೆಚ್ಚದ ಮೊತ್ತ ;

(ಇ) ರಾಜ್ಯದಲ್ಲಿ ಬಸ್ ಮಾರ್ಗಗಳ ರಾಷ್ಟ್ರೀಕರಣದಿಂದಾಗಿ ಹೂಡಲು ಉದ್ದೇಶಿಸಿರುವ ಬಂಡವಾಳದ ಮೇಲೆ ಬರುವ ಲಾಭದ ಶೇಕಡ ಪ್ರಮಾಣ?

**ಶ್ರೀ ಮೊಹಮದ್ ಅಲಿ (ಸಾರಿಗೆ ಸಚಿವರು)**

(ಬಿ) ಇಲ್ಲ

(ಸಿ) ಅಂದಾಜು 60 ಸಾವಿರ ಮೈಲಿಗಳು

(ಡಿ) ಈವರೆಗೆ 21.60 ಕೋಟಿ ರೂ.ಗಳು

(ಇ) ಕಳೆದ ನಾಲ್ಕು ವರ್ಷಗಳಲ್ಲಿ ಶೇ. 10ಕ್ಕೂ ಹೆಚ್ಚು. ಇದರಲ್ಲಿ ಸರ್ಕಾರವು ಕೊಡುಗೆ ನೀಡಿದ ಬಂಡವಾಳದ ಮೇಲೆ, ಭಾಗವಹಿಸಿರುವ ಸರ್ಕಾರಕ್ಕೆ ಶೇ. 6 1/4 ರಂತೆ ಸಂದಾಯ ಮಾಡಿದ ಬಂಡವಾಳದ ಮೇಲಿನ ಬಡ್ಡಿಯೂ ಸೇರುತ್ತದೆ.

**ಶ್ರೀ ಮಲ್ಲಪ್ಪ**– ದಾವಣಗೆರೆ ಮತ್ತು ಚಿತ್ರದುರ್ಗನಡುವಿನ ಮಾರ್ಗವನ್ನು ಕೂಡಲೇ ರಾಷ್ಟ್ರೀಕರಣಗೊಳಿಸುತ್ತೀರಾ ತಿಳಿಸಿ. ಈ ಮಟ್ಟಿಗೆ ಈ ಸದನದಲ್ಲಿ ಒಂದು ಭರವಸೆಯನ್ನು ನೀಡಲಾಗಿತ್ತು. ಈ ರಸ್ತೆಯನ್ನು ಇಲ್ಲಿಯವರೆಗೆ ರಾಷ್ಟ್ರೀಕರಣಗೊಳಿಸದಿರುವುದಕ್ಕೆ ಇರುವ ವಿಶೇಷ ಕಾರಣಗಳೇನು? ಈ ಮಾರ್ಗದಲ್ಲಿ ಓಡಾಡುವುದಕ್ಕೆ ಖಾಸಗಿ ಬಸ್ಸುಗಳಿಗೆ ಏಕೆ ಅನುಮತಿ ನೀಡಲಾಗಿದೆ. ಇದರಿಂದ ರಸ್ತೆ ಸಾರಿಗೆ ನಿಗಮಕ್ಕೆ ಭಾರಿನಷ್ಟ ಉಂಟಾಗುತ್ತಿದೆ.

**ಶ್ರೀ ಮೊಹಮದ್ ಅಲಿ** – ಯಾವುದೇ ಸ್ಪಷ್ಟ ಭರವಸೆ ನೀಡಿದ್ದಂತೆನನಗನ್ನಿಸುವುದಿಲ್ಲ. ರಸ್ತೆ ಸಾರಿಗೆ ನಿಗಮವು ಅಕ್ಕಪಕ್ಕದಲ್ಲಿರುವ ಎಲ್ಲ ಪ್ರದೇಶವನ್ನು ರಾಷ್ಟ್ರೀಕರಣಗೊಳಿಸುವ ಬಗ್ಗೆ ವಿಚಾರ ಮಾಡುತ್ತಿದೆ.

**ಶ್ರೀ ಹೆಚ್.ಬಿ. ಜ್ವಾಲನಯ್ಯ** – ಮೈಸೂರು ರಾಜ್ಯದಲ್ಲಿ ರಾಷ್ಟ್ರೀಕರಣ ಮಾಡುವುದಕ್ಕೆ ಸಾಧ್ಯವಿರುವ ರಸ್ತೆಯ ಒಟ್ಟು ಉದ್ದವೆಷ್ಟು? (ಇ) ಪ್ರಶ್ನೆಗೆ ಉತ್ತರ ಕೊಟ್ಟಿರುವುದರಲ್ಲಿ 10 ಪರ್ಸೆಂಟ್ ಹೆಚ್ಚಿಗೆ ಬಂದಿದೆ ಎಂದು ಹೇಳಿರುವುದು ನೆಟ್ ಪ್ರಾಫಿಟ್ ಅಥವಾ ಗ್ರಾಸ್ ಪ್ರಾಫಿಟ್ ರಾಷ್ಟ್ರೀಕರಣ ಮಾಡಿರುವ ಕಡೆ ಖಾಸಗಿ ಬಸ್ಸು ಮಾಲೀಕರ ಖಾಸಗಿ ಬಸ್ಸುಗಳನ್ನು ಸರ್ಕಾರ ತೆಗೆದುಕೊಳ್ಳುವುದಕ್ಕೆ ಪ್ರಯತ್ನ ಮಾಡುವುದೇ?

**ಶ್ರೀ ಮೊಹಮದ್ ಅಲಿ** – ಸ್ವಾಮಿ, ಶೇಕಡಾ 10ಕ್ಕೆ ಸಂಬಂಧಿಸಿದಂತೆ ನೀಡಿರುವಂತಹ ಅಂಕಿಗಳು ಆದಾಯಕ್ಕೆ ಮಾತ್ರವಲ್ಲದೆ ರಸ್ತೆ ಸಾರಿಗೆ ನಿಗಮದಲ್ಲಿ ಹೂಡಿರುವ ಬಂಡವಾಳದ ಮೇಲೆ ಸರ್ಕಾರಕ್ಕೆ ನಾವು ಪಾವತಿ ಮಾಡಬೇಕಾದ ಬಡ್ಡಿಯನ್ನು ಒಳಗೊಂಡಿವೆ. ಬಸ್ ಮಾರ್ಗಗಳನ್ನು ರಾಷ್ಟ್ರೀಕರಣಗೊಳಿಸಲಾಗಿರುವ ಕಡೆಗಳಲ್ಲಿ ಖಾಸಗೀ ಅಪರೇಟರ್‌ಗಳ ಬಸ್‌ಗಳನ್ನು ಖರೀದಿ ಮಾಡುವ ಪ್ರಸ್ತಾವ ಇಲ್ಲ ಮತ್ತು ಈಗ ರಾಜ್ಯ ರಸ್ತೆ ಸಾರಿಗೆ ನಿಗಮವು ಸುಮಾರು 75,000 ಮೈಲಿಗಳಷ್ಟು ಉದ್ದದ ಮಾರ್ಗಗಳನ್ನು ರಾಷ್ಟ್ರೀಕರಣಗೊಳಿಸಿದೆ.

**ಶ್ರೀ ಸಿದ್ದಯ್ಯ ಕಾಶಿಮಠ**– ರಾಜ್ಯದಲ್ಲಿರುವ ಎಲ್ಲಾ ಮಾರ್ಗಗಳನ್ನು ರಾಷ್ಟ್ರೀಕರಣಗೊಳಿಸಲು ಬೇಕಾಗುವ ಸಮಯವನ್ನು ತಿಳಿಸುವಿರಾ?

**ಶ್ರೀ ಮೊಹಮದ್ ಅಲಿ** – 4ನೇ ಪಂಚವಾರ್ಷಿಕ ಯೋಜನೆಯ ಯೋಜನಾ ಹಂಚಿಕೆಗಳಲ್ಲಿ ಒದಗಿಸುವ ಹಣವನ್ನು ಇದು ಅವಲಂಬಿಸಿರುತ್ತದೆ.

**ಶ್ರೀ ಹೆಚ್. ಸಿದ್ದವೀರಪ್ಪ** – ಬೆಂಗಳೂರಿನಿಂದ ಬೆಳಗಾಂವರೆಗಿನ ಇಡೀ ಮಾರ್ಗವನ್ನು, ಚಿತ್ರದುರ್ಗ ಮತ್ತು ಹರಿಹರನಡುವಿನ ಭಾಗವನ್ನು ಹೊರತುಪಡಿಸಿ ರಾಷ್ಟ್ರೀಕರಣಗೊಳಿಸಿರುವ ವಿಷಯ ನಿಮಗೆ ತಿಳಿದಿದೆಯೇ, ಮತ್ತೆ ಮತ್ತೆ ಬೇಡಿಕೆ ಮತ್ತು ಕೋರಿಕೆಗಳನ್ನು ಸಲ್ಲಿಸಿದರೂ ಆ ಮಾರ್ಗದ ಭಾಗವನ್ನು ಸರ್ಕಾರ ರಾಷ್ಟ್ರೀಕರಣಗೊಳಿಸಲು ತೆಗೆದುಕೊಳ್ಳುತ್ತಿಲ್ಲವೇಕೆ, ಆ ಭಾಗವನ್ನು ತೆಗೆದುಕೊಳ್ಳಲು ಇರುವ ಅಡ್ಡಿಯಾದರೂ ಏನು?

**ಶ್ರೀ ಮೊಹಮದ್ ಅಲಿ** – ಬೆಳಗಾಂವರೆಗಿನ ಮಾರ್ಗಗಳನ್ನು ರಾಷ್ಟ್ರೀಕರಣಗೊಳಿಸಲಾಗಿದೆ. ಆದರೆ ಚಿತ್ರದುರ್ಗ ಜಿಲ್ಲೆಯಲ್ಲಿನ ಎಲ್ಲಾ ರಸ್ತೆಗಳನ್ನು ರಾಷ್ಟ್ರೀಕರಣಗೊಳಿಸಿಲ್ಲ ಎಂಬುದು ನಿಜ. ಚಿತ್ರದುರ್ಗ ಹರಿಹರನಡುವಿನ ರಸ್ತೆಯಲ್ಲಿ ಫೀಡರ್ ರಸ್ತೆಗಳಿಗೆ ಓವರ್ ಲ್ಯಾಪಿಂಗ್‌ಗೆ ನಾವು ಅವಕಾಶ

ನೀಡಬೇಕಾಗುತ್ತದೆ. ಆದ್ದರಿಂದ ಆ ಮಾರ್ಗವನ್ನು ರಸ್ತೆ ಸಾರಿಗೆ ನಿಗಮವು ರಾಷ್ಟ್ರೀಕರಣಗೊಳಿಸಿದರೂ ಅದು ಏಕಸ್ವಾಮ್ಯ ರಸ್ತೆಯಾಗುವುದಿಲ್ಲ.

**ಶ್ರೀ ಸಿದ್ದವೀರಪ್ಪ** – ಸ್ವಾಮಿ, ನೀವುನೂರಾರು ಸಾರಿಗೆ ಆಪರೇಟರ್‌ಗಳನ್ನು ಸ್ಥಳಾಂತರಿಸಿ ಶಿವಮೊಗ್ಗದಿಂದ ಹರಿಹರಕ್ಕೆ ಒಂದು ಹೆಚ್ಚುವರಿ ಹೊಸ ಮಾರ್ಗವನ್ನು ಕೈಗೆತ್ತಿಕೊಂಡಿದ್ದೀರಿ. ಇಲ್ಲಿ ಅದೇ ಕ್ರಮವನ್ನು ಕೈಗೊಳ್ಳುವುದಕ್ಕೆ ನಿಮಗೆ ಇರುವ ಅಡ್ಡಿಯಾದರೂ ಏನು? ದಯವಿಟ್ಟು ತಿಳಿಸುತ್ತೀರಾ. ಅವರಿಗೆ 1956ರನವೆಂಬರ್ 1ರವರೆಗೆ ಸಮಯ ನೀಡಿದ್ದುದು ಸಹಾ ತಿಳಿದ ವಿಷಯವೇ. 12 ವರ್ಷ ಕಳೆದರೂ ಸರ್ಕಾರ ಇನ್ನೂ ನಿದ್ದೆ ಮಾಡುತ್ತಿದೆ. ಇದಕ್ಕೆ ಕಾರಣ ಮಾರ್ಗದ ಆ ಭಾಗವನ್ನು ಕೈಗೆತ್ತಿಕೊಳ್ಳಲು ಕಾಂಗ್ರೆಸ್ ಪಕ್ಷದ ಪ್ರಬಲವಾದ ವಿರೋಧವೇ ಅಥವಾ ನಿಮಗೆ ಅಡ್ಡಿಯುಂಟು ಮಾಡುತ್ತಿರುವುದು ಯಾವುದು?

**ಶ್ರೀ ಮೊಹಮದ್ ಅಲಿ** – ಆ ಮಾರ್ಗವನ್ನು ರಾಷ್ಟ್ರಿಕರಣಗೊಳಿಸಲಿಲ್ಲವೇಕೆ ಎಂಬುದಕ್ಕೆ ಕಾರಣಗಳನ್ನು ನೀಡಲು ಇಷ್ಟು ಕಡಿಮೆ ಅವಧಿಯಲ್ಲಿ ನನಗೆ ಕಷ್ಟವಾಗುತ್ತದೆ. ಮಾನ್ಯ ಸದಸ್ಯರು ಸಾರಿಗೆ ಖಾತೆಯ ಪ್ರಭಾರದಲ್ಲಿದ್ದಾಗ ಹನ್ನೆರಡು ವರ್ಷಗಳ ಹಿಂದೆ ಈ ರಸ್ತೆಯನ್ನು ರಾಷ್ಟ್ರೀಕರಣಗೊಳಿಸಲಾಯಿತು.

**ಶ್ರೀ ಹೆಚ್. ಸಿದ್ಧವೀರಪ್ಪ** – ನಾವು ಅವರಿಗೆ ಕೇವಲ 3 ತಿಂಗಳು ಸಮಯ ನೀಡಿದ್ದೆವು.

**ಶ್ರೀ ಮೊಹಮದ್ ಅಲಿ** – ಕಾಗದ ಪತ್ರಗಳನ್ನು ಪತ್ತೆ ಹಚ್ಚಲು ನಾವು ಎಷ್ಟೇ ಪ್ರಯತ್ನ ಮಾಡಿದಾಗ್ಯೂ ಆ ಕಾಗದ ಪತ್ರಗಳು ನನಗೆ ಸಿಗಲಿಲ್ಲ. ಅದಕ್ಕೆ ಯಾವುದೇ ಕಾರಣ ನೀಡಲು ನನಗೆ ಕಷ್ಟವಾಗುತ್ತದೆ.

**ಡಾ. ಆರ್. ನಾಗನಗೌಡ** – ಸ್ವಾಮಿ ಬಳ್ಳಾರಿ ಜಿಲ್ಲೆಯಲ್ಲಿ 3 ವರ್ಷಗಳ ಹಿಂದೆ ಸರ್ಕಾರ ಬಸ್‌ಗಳನ್ನು ವಶಕ್ಕೆ ತೆಗೆದುಕೊಂಡಿತು. ನಾವು ಬಸ್‌ಗಳಲ್ಲಿ ಪ್ರಯಾಣ ಮಾಡುತ್ತಿದ್ದೇವೆ. ಈ ಬಸ್‌ಗಳು ನಿಯತವಾಗಿ ಸಮಯಕ್ಕೆ ಸರಿಯಾಗಿ ಬರುತ್ತಿವೆ ಮತ್ತು ಬಸ್‌ಗಳ ಮೇಲೆ ಫಲಕಗಳನ್ನು ಹಾಕಲು ಕೂಡ ಅವರಿಗೆ ಸಮಯಾವಕಾಶವಿಲ್ಲ. ಈ ರೀತಿಯ ಅದಕ್ಷತೆಯನ್ನು ಹೋಗಲಾಡಿಸಲು ನೀವು ಯಾವ ಕ್ರಮ ತೆಗೆದುಕೊಳ್ಳುತ್ತೀರಿ?

**ಶ್ರೀ ಮೊಹಮದ್ ಅಲಿ** – ನಿರ್ದಿಷ್ಟ ನಿದರ್ಶನವನ್ನು ಸರ್ಕಾರದ ಅಥವಾ ರಸ್ತೆ ಸಾರಿಗೆ ನಿಗಮದ ಗಮನಕ್ಕೆ ತಂದರೆ ಈ ವಿಷಯದಲ್ಲಿ ತುರ್ತು ಕ್ರಮ ತೆಗೆದುಕೊಳ್ಳಲು ಸುಲಭವಾಗುತ್ತದೆ. ಆದರೆ ವೇಳಾಪಟ್ಟಿಯನ್ನು ಪಾಲಿಸುವುದಕ್ಕೆ ಅಥವಾ ಈ ಬಸ್ಸುಗಳಿಗೆ ಸಂಬಂಧಿಸಿದಂತೆ ಹೇಳುವುದಾದರೆ ಸುಮಾರು ಶೇಕಡಾ 85ರಷ್ಟು ನಿಯತತೆ ಇದೆ ಎಂದು ವರದಿ ಮಾಡಲಾಗಿದೆ.

**ಶ್ರೀ ಎಸ್. ಗೋಪಾಲಗೌಡ** – ಚಿತ್ರದುರ್ಗ ಮತ್ತು ಹರಿಹರ ಭಾಗ ರಾಷ್ಟ್ರೀಕರಣ ಮಾಡಿದ ರಸ್ತೆ ಇದ್ದರೂ ಖಾಸಗಿ ಬಸ್ಸುಗಳನ್ನು ಓಡಿಸುವುದಕ್ಕೆ ಅವಕಾಶ ಕೊಟ್ಟಿದ್ದೀರಿ. ಈಗಲಾದರೂ ಅದನ್ನು ರಾಷ್ಟ್ರೀಕರಣ ಮಾಡುತ್ತೀರಾ ಮತ್ತು ಮಾರ್ಗಗಳನ್ನು ರಾಷ್ಟ್ರೀಕರಣ ಮಾಡುವುದನ್ನು ಹೇಗೆ ಡಿಸೈನ್ ಮಾಡುತ್ತೀರಿ?

**ಶ್ರೀ ಮೊಹಮದ್ ಅಲಿ** – ಮಾರ್ಗಗಳ ರಾಷ್ಟ್ರೀಕರಣದ ಸಲುವಾಗಿ ಅಕ್ಕಪಕ್ಕದ ಪ್ರದೇಶಗಳನ್ನು ವಶಪಡಿಸಿಕೊಳ್ಳುವುದು ನಿಗಮದ ನೀತಿಯೇ ಹೊರತು ಮಾನ್ಯ ಸದಸ್ಯರು ಸೂಚಿಸಿದಂತೆ ಒಂದು ಮಾರ್ಗವನ್ನಲ್ಲ ಎಂದು ಸದನಕ್ಕೆ ನಾನು ಪದೇ ಪದೇ ತಿಳಿಸಿದ್ದೇನೆ.

**ಶ್ರೀ ಎಂ.ಎಸ್. ರಾಮಣ್ಣ** – 1.7.1968ರಿಂದ ಶಿವಮೊಗ್ಗದ ಬಸ್ ಮಾರ್ಗಗಳನ್ನು ರಾಷ್ಟ್ರೀಕರಣ ಮಾಡಿದ್ದಾರೆ. ಆಪತ್ತಿನಿಂದ ಅವರ ಕುಂದುಕೊರತೆಗಳನ್ನು ರೋಡ್ ಟ್ರಾನ್ಸ್‌ಪೋರ್ಟ್ ಡಿಪಾರ್ಟ್‌ಮೆಂಟ್‌ನವರ ಗಮನಕ್ಕೆ ತಂದರೂ ಇದುವರೆಗೂ ಯಾವ ವಿಧವಾದ ಸವಲತ್ತೂ ಕೂಡ ಕೊಡದೇ ಇರುವುದು ತಮ್ಮ ಗಮನಕ್ಕೆ ಬಂದಿದೆಯೇ?

**ಶ್ರೀ ಮೊಹಮದ್ ಅಲಿ** – ಅನಾನುಕೂಲದ ಸಂದರ್ಭಗಳನ್ನು ರಸ್ತೆ ಸಾರಿಗೆ ನಿಗಮದ ಗಮನಕ್ಕೆ ತಂದಿರುವ ಕಡೆಗಳಲ್ಲೆಲ್ಲಾ ಕೂಡಲೇ ಕ್ರಮ ತೆಗೆದುಕೊಳ್ಳಲಾಗಿದೆ.

**ಶ್ರೀ ಎಸ್.ಎಸ್. ಶೆಟ್ಟರ್** – ರಾಷ್ಟ್ರೀಕರಣದ ನೀತಿಯಲ್ಲಿ ರಾಜಕೀಯ ಕಾರಣವೇ ಹೆಚ್ಚಿಗೆ ಇದೆ ಎಂದು ತಿಳಿದು ಬಂದಿದೆ, ಇದಕ್ಕೆ ಏನು ಹೇಳುತ್ತೀರಿ?

**ಶ್ರೀ ಮೊಹಮದ್ ಅಲಿ** – ಇದು ಪರೋಕ್ಷವಾಗಿ ತಿಳಿಸುವ ವಿಷಯದೇ ಹೊರತು ಬೇರೇನು ಅಲ್ಲ.

**ಶ್ರೀಮತಿ ವಿನ್ನಿಫ್ರೆಡ್ ಎಫ್. ಫರ್ನಾಂಡಿಸ್** – (ಎ)ಗೆ ನೀಡಿದ ಉತ್ತರದಲ್ಲಿ ಮಂಗಳೂರು ಯೋಜನೆ ಅಡಿಯಲ್ಲಿ 31 ಮಾರ್ಗಗಳನ್ನು ರಾಷ್ಟ್ರೀಕರಣಗೊಳಿಸಿರುವುದಾಗಿ ನೀವು ತಿಳಿಸಿದ್ದೀರಿ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಉಳಿದ ಮಾರ್ಗಗಳನ್ನು ರಾಷ್ಟ್ರೀಕರಣಗೊಳಿಸದಿರುವುದಕ್ಕೆ ಕಾರಣವೇನು?

**ಶ್ರೀ ಮೊಹಮದ್ ಅಲಿ** – ಒಂದೇ ಒಂದು ಕಾರಣ. ಅದು ಸರಳವಾದದ್ದು. ಅದೆಂದರೆ ಹಣಕಾಸು ಕೊರತೆ.

**ಶ್ರೀ ಎನ್.ಹುಚ್ಚಮಾಸ್ತಿ ಗೌಡ** – ಸ್ವಾಮಿ ರಾಷ್ಟ್ರೀಕರಣವಾಗಿರತಕ್ಕಂಥ ಬಸ್ ಮಾರ್ಗಗಳಲ್ಲಿ ಸರ್ಕಾರದವರು ಅದರಲ್ಲೂ ಕಾರ್ಪೋರೇಷನ್ ಮಾನ್ಯ ಸಭಾಧ್ಯಕ್ಷರು ಬಸ್‌ಗಳನ್ನು ಓಡಿಸಲು ಕೆಲವು ಖಾಸಗಿ ಬಸ್ ಮಾಲೀಕರಿಗೆ ಆ ರೂಟ್‌ಗಳಲ್ಲಿ ಟೂರಿಸ್ಟ್ ಸರ್ವಿಸ್ ಹೆಸರಿನಿಂದ ಪ್ರತಿವರ್ಷವೂ

ಪರ್ಮಿಷನ್ ಕೊಟ್ಟಿರುವುದು ನಿಜವೇ? ಇದರಿಂದ ಉತ್ಪತ್ತಿ ಕಡಿಮೆಯಾಗಿರುವುದಕ್ಕೆ ಸರ್ಕಾರವೇ ಕಾರಣ ಎಂದು ಆರೋಪಣೆ ಮಾಡುತ್ತಾರೆ. ಅದಕ್ಕೆ ಏನು ಹೇಳುತ್ತೀರಿ?

**ಶ್ರೀ ಮೊಹಮದ್ ಅಲಿ** – ಖಾಸಗೀ ಆಪರೇಟರುಗಳಿಗೆ ಪರ್ಮಿಟ್ ನೀಡುವುದಕ್ಕೆ ಸಂಬಂಧಿಸಿದಂತೆ ಆರ್.ಟಿ.ಎ. ಮತ್ತು ಎಸ್.ಟಿ.ಎ.ಗಳಂತಹ ಅರೆ ನ್ಯಾಯಿಕ ಸಂಸ್ಥೆಗಳು ಮತ್ತು ಸರ್ಕಾರ ಇವೆ. ರಸ್ತೆ ಸಾರಿಗೆ ನಿಗಮದ ಮಾನ್ಯ ಸಭಾಧ್ಯಕ್ಷರು ಈ ಬಗ್ಗೆ ಏನೂ ಮಾಡಲಾಗುವುದಿಲ್ಲ. ಹಾಗೂ ಮಾಡಿರುವ ಆರೋಪಗಳೆಲ್ಲಾ ಆಧಾರರಹಿತ ಮತ್ತು ಬೇಜವಾಬ್ದಾರಿತನದವುಗಳಾಗಿವೆ.

**ಶ್ರೀ ಎನ್ ಹುಚ್ಚಮಾಸ್ತಿಗೌಡ** – ಬೆಂಗಳೂರು – ಮಂಗಳೂರು ನೈಟ್ ಸರ್ವಿಸ್ ಒಂದನ್ನು ಎನಾಗುರೇಟ್ ಮಾಡಿದ್ದು ನಿಜವೇ? ಇದರಿಂದ ಕಾರ್ಪೋರೇಷನ್‌ಗೆ ಬರತಕ್ಕ ಉತ್ಪತ್ತಿ ಕಡಿಮೆಯಾಗುತ್ತದಲ್ಲವೇ? ಮತ್ತು ಇದು ಬೇಜವಾಬ್ದಾರಿಯಲ್ಲವೇ?

**ಶ್ರೀ ಮೊಹಮದ್ ಅಲಿ** – ರಸ್ತೆ ಪರ್ಮಿಟ್ ನೀಡುವುದು ಉದ್ಘಾಟನೆಗೆ ಭಿನ್ನವಾದ ವಿಷಯ.

**ಶ್ರೀ ಡಿ.ಎಂ. ಕಲ್ಮಣ್‌ಕರ್** – ಸುಮಾರು 60,000 ಮೈಲಿಗಳಷ್ಟು ಉದ್ದದ ಮಾರ್ಗಗಳನ್ನು ರಾಷ್ಟ್ರೀಕರಣಗೊಳಿಸಲಾಗುವುದೆಂದು ತಿಳಿಸಿದ್ದೀರಿ. ಈ ರೀತಿ ರಾಷ್ಟ್ರೀಕರಣಗೊಳಿಸುವುದಕ್ಕೆ ಎಷ್ಟು ಹಣ ಬೇಕಾಗುತ್ತದೆ ಎಂಬುದನ್ನು ದಯವಿಟ್ಟು ತಿಳಿಸುವಿರಾ?

**ಶ್ರೀ ಮೊಹಮದ್ ಅಲಿ** –ನಮಗೆ ಸುಮಾರು 17ರಿಂದ 18 ಕೋಟಿ ರೂಪಾಯಿಗಳಷ್ಟು ಹಣ ಬೇಕಾಗುತ್ತದೆ.

**ಶ್ರೀ ನಾರಾಯಣ ಗೌಡ**– ಕಳೆದ ಅಧಿವೇಶನದಲ್ಲಿ 1968ರೊಳಗೆ ಕೋಲಾರ ಜಿಲ್ಲೆಯಲ್ಲಿರುವ ಬಸ್ ಮಾರ್ಗಗಳನ್ನು ಸಂಪೂರ್ಣವಾಗಿ ರಾಷ್ಟ್ರೀಕರಣ ಮಾಡುತ್ತೇವೆಂದು ಆಶ್ವಾಸನೆ ಕೊಟ್ಟಿದ್ದೀರಿ. ಆ ವಿಚಾರ ಯಾವ ಮಟ್ಟದಲ್ಲಿ ಇದೆ?

**ಶ್ರೀ ಮೊಹಮದ್ ಅಲಿ** – ಕೋಲಾರ ಮಾರ್ಗವನ್ನು ರಾಷ್ಟ್ರಿಕರಣಗೊಳಿಸುವ ಯೋಜನೆಯನ್ನು ಅನುಮೋದಿಸಲಾಗಿದೆ ಮತ್ತು ಅದಕ್ಕೆ ಉಚ್ಚ ನ್ಯಾಯಾಲಯ ತಡೆಯಾಜ್ಞೆ ನೀಡಿದೆ. ಉಚ್ಚ ನ್ಯಾಯಾಲಯ ತಡೆಯಾಜ್ಞೆಯನ್ನು ಹಿಂದಕ್ಕೆ ಪಡೆದಿದೆ ಎಂದು ನನಗೆ ತಿಳಿಸಲಾಗಿದೆ. ಈಗ ನಾವು ಈ ಯೋಜನೆಯನ್ನು ಅನುಷ್ಠಾನಗೊಳಿಸಲು ವ್ಯವಸ್ಥೆಯನ್ನು ಮಾಡಬೇಕಾಗಿದೆ.

**ಶ್ರೀ ಹೆಚ್.ಬಿ. ಜ್ವಾಲನಯ್ಯ** – ಕಾರ್ಪೋರೇಷನ್‌ನಲ್ಲಿ ಡಿಪ್ರಿಸಿಯೇಷನ್ ಫಂಡ್ ಕೋಟ್ಯಾಂತರ ರೂಪಾಯಿ ಇರುವಾಗ ಆ ಹಣದಿಂದ ಹೊಸ ಬಸ್ಸುಗಳನ್ನು ಹಾಕುವುದಕ್ಕೆ ಬದಲಾಗಿ ಅದನ್ನು ಇತರೇ ಬಾಬುಗಳಿಗೆ ಖರ್ಚು ಮಾಡುತ್ತಿರುವುದು ನಿಜವೇ?

**ಶ್ರೀ ಮೊಹಮದ್ ಅಲಿ** – ಸವಕಳಿ ನಿಧಿಯನ್ನು ಯಾವ ಉದ್ದೇಶಕ್ಕಾಗಿ ಮೀಸಲಿಡಲಾಗಿದೆಯೋ ಆ ಉದ್ದೇಶಕ್ಕಾಗಿ ಅದನ್ನು ನಾವು ಬಳಸಿಕೊಳ್ಳುತ್ತಿದ್ದೇವೆ.

**ಶ್ರೀ ಬಿ.ಪಿ. ಗಂಗಾಧರ್** – ಶೇಕಡಾ 10 ಕೆಳೆದ ನಾಲ್ಕು ವರ್ಷಗಳಲ್ಲಿ ಬಂದ ನಿವ್ವಳ ಆದಾಯ ಎಂದು ನೀವು ಹೇಳಿದ್ದೀರಿ. ಈ ಶೇಕಡಾ 10ನ್ನು ಲೆಕ್ಕಹಾಕುವಾಗ ವಾಹನದ ಮೇಲಿನ ವಾರ್ಷಿಕ ಸವಕಳಿಯನ್ನು ನೀವು ಗಣನೆಗೆ ತೆಗೆದುಕೊಂಡಿದ್ದೀರಾ?

**ಶ್ರೀ ಮೊಹಮದ್ ಅಲಿ** – ಹೌದು ಸ್ವಾಮಿ, ಶೇಕಡಾ 10 ಸವಕಳಿಗೆ ಅವಕಾಶ ಕಲ್ಪಿಸಿದನಂತರ ಸಿಗುವುದೇ ನಿವ್ವಳ ಆದಾಯ.

**ಶ್ರೀ ಎಂ.ಎಂ.ಜೆ. ಸದ್ಯೋಜಾತಾ** – ಸರ್ಕಾರಿ ವಾಹನಗಳು ಓಡದೆ ಇರುವ ಮಾರ್ಗಗಳಲ್ಲಿ ಖಾಸಗೀ ಬಸ್ ಮಾಲೀಕರು ಪರ್ಮಿಷನ್‌ಗೆ ಹಾಕಿದರೆ ಅವರಿಗೆ ಪರ್ಮಿಷನ್ ಕೊಡುತ್ತೀರಾ?

**ಶ್ರೀ ಮೊಹಮದ್ ಅಲಿ** – ರಾಷ್ಟ್ರೀಕರಣಗೊಳಿಸಲಾದ ಮಾರ್ಗಗಳಲ್ಲಿ ಖಾಸಗಿ ಆಪರೇಟರ್‌ಗಳಿಗೆ ಯಾವುದೇ ಪರ್ಮಿಟ್ ನೀಡಲು ಅವಕಾಶ ಇಲ್ಲ.

**ಶ್ರೀ ಸಿ.ಕೆ. ರಾಜಯ್ಯ ಶೆಟ್ಟಿ** – ಹಲವಾರು ಹೊಸ ಅಂತರ್ ಮಾರ್ಗಗಳನ್ನು ಮಂಜೂರು ಮಾಡಲಾಗಿದ್ದು ರಾಜ್ಯದ ಹೊರಗೆ ಅವುಗಳಲ್ಲಿ 10 ರಿಂದ 12 ಮೈಲಿಗಳಷ್ಟು ಸಂಪರ್ಕ ಇದೆ. ಹಾಗೂ ಆ ಮಾರ್ಗಗಳು ಸರ್ಕಾರಿ ಮಾರ್ಗಗಳಿಗೆ ಸಮಾನಾಂತರವಾಗಿ ಇದ್ದು ಇದರಿಂದ ಸರ್ಕಾರಕ್ಕೆನಷ್ಟವುಂಟಾಗುತ್ತಿದೆ ಎಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಮೊಹಮದ್ ಅಲಿ** – ಇದು ಬೇರೆಯ ಪ್ರಶ್ನೆ. ಈ ಪ್ರಶ್ನೆಗೆ ಸಂಬಂಧ ಪಡುವುದಿಲ್ಲ ಸ್ವಾಮಿ.

**ಶ್ರೀ ವಿ.ಎನ್.ಪಾಟೀಲ್** – ಬೀದರ್ ಮತ್ತು ಹುಮುನಾಬಾದ್‌ನಡುವೆ ಕೇವಲ ಒಂದೇ ಒಂದು ಎಂ.ಎಸ್.ಆರ್.ಟಿ.ಸಿ. ಬಸ್ ಇದ್ದರೂ ಈ ಮಾರ್ಗದಲ್ಲಿ ಖಾಸಗೀ ಆಪರೇಟರ್‌ಗಳಿಗೆ 20 ಟ್ರಿಪ್‌ಗಳನ್ನು ಓಡಿಸಲು ಅವಕಾಶ ನೀಡದಿರುವುದಕ್ಕೆ ಕಾರಣ ಏನೆಂಬುದನ್ನು ನನಗೆ ತಿಳಿಸುವಿರಾ ಸ್ವಾಮಿ?

**ಶ್ರೀ ಮೊಹಮದ್ ಅಲಿ** – ಬೀದರ್‌ನಲ್ಲಿ ಒಂದು ಹೊಸ ಮಾರ್ಗವನ್ನು ರಚಿಸಲಾಗಿದ್ದು ಅದನ್ನು ರಾಷ್ಟ್ರೀಕರಣಗೊಳಿಸಲಾಗಿಲ್ಲ. ಇಲ್ಲಿ ಬಸ್ಸುಗಳನ್ನು ಓಡಿಸಲು ಕೆಲವು ಖಾಸಗೀ ಆಪರೇಟರ್‌ಗಳಿಗೆ ಆರ್.ಟಿ.ಓ. ಅವಕಾಶ ನೀಡಿದೆ. ಈ ಮಾರ್ಗವನ್ನು ರಾಷ್ಟ್ರೀಕರಣಗೊಳಿಸುವ ವಿಷಯವನ್ನು ಎಂ.ಎಸ್.ಆರ್.ಟಿ.ಸಿ. ಪರಿಗಣಿಸುತ್ತಿದೆ.

**ಶ್ರೀ ಕೆ. ಪ್ರಭಾಕರ್** – ಸ್ವಾಮಿ ಸರ್ಕಾರಿ ಬಸ್ ಓಡಾಡತಕ್ಕ ಕಡೆ ಪ್ರಯಾಣಿಕರಿಗೆ ಪ್ರೊಟೆಕ್ಷನ್ ಷೆಲ್ಟರ್ ಕುಡಿಯುವ ನೀರಿನ ವ್ಯವಸ್ಥೆ ಮತ್ತು ಬಸ್ ಹೋಗತಕ್ಕ ಕಾಲನಿಯಮಗಳನ್ನೆಲ್ಲಾ ಬರೆದು ಇಡಬೇಕಾಗಿ ಯೋಜನೆ ಎಲ್ಲಾ ಇತ್ತು, ಅದರ ಪ್ರಗತಿ ಏನಾಗಿದೆ ಸ್ವಾಮಿ?

**ಶ್ರೀ ಮೊಹಮದ್ ಅಲಿ** – ಬಸ್ ಷೆಲ್ಟರ್‌ಗಳನ್ನು ಮತ್ತು ರಸ್ತೆ ಬದಿ ಷೆಲ್ಟರ್‌ಗಳನ್ನು ಒದಗಿಸುವ ಮೂಲಕ ಬಸ್‌ಗಳಲ್ಲಿ ಪ್ರಯಾಣಿಸುವ ಸಾರ್ವಜನಿಕರಿಗೆ ಸೌಕರ್ಯಗಳನ್ನು ಕಲ್ಪಿಸುವ ಹಂತಹಂತವಾದ ಕಾರ್ಯಕ್ರಮಗಳನ್ನು ಎಂ.ಎಸ್.ಆರ್.ಟಿ.ಸಿ. ಹಮ್ಮಿಕೊಂಡಿದೆ. ಇದು ಒಂದು ಹಂತ ಹಂತವಾದ ಕಾರ್ಯಕ್ರಮ.

**ಶ್ರೀ ಜಿ. ಚಂದ್ರಕಾಂತ** – ಬೀದರ್ – ಹುಮನಾಬಾದ್ ಮಾರ್ಗವನ್ನು ರಾಷ್ಟ್ರೀಕರಣಗೊಳಿಸುವ ಪ್ರಸ್ತಾವ ಎಂ.ಎಸ್.ಆರ್.ಟಿ.ಸಿ. ಬಳಿ ಬಾಕಿ ಇದೆ ಎಂದು ಸನ್ಮಾನ್ಯ ಸಚಿವರು ಈಗಷ್ಟೇ ತಿಳಿಸಿದರು. ಅದಕ್ಕೆ ಎಷ್ಟು ಸಮಯ ಬೇಕಾಗುತ್ತದೆ ಎಂಬುದನ್ನು ನನಗೆ ತಿಳಿಸುವಿರಾ?

**ಶ್ರೀ ಮೊಹಮದ್ ಅಲಿ** – 4ನೇ ಪಂಚವಾರ್ಷಿಕ ಯೋಜನೆಯನ್ನು ಅಂತಿಮಗೊಳಿಸಿದ ಕೂಡಲೇ ರಾಷ್ಟ್ರೀಕರಣಗೊಳಿಸಿರುವ ವಲಯಗಳಲ್ಲಿ ರಚಿಸಿರುವಂತಹ ಹೊಸ ಮಾರ್ಗಗಳನ್ನು ವಶಕ್ಕೆ ತೆಗೆದುಕೊಳ್ಳಲು ಎಂ.ಎಸ್.ಆರ್.ಟಿ.ಸಿ. ಉದ್ದೇಶಿಸಿದೆ.

**ಶ್ರೀ ಜಿ. ಚಂದ್ರಕಾಂತ್** – ಬೀದರ್ ಜಿಲ್ಲೆಗೆ ಸಂಬಂಧಿಸಿದ ಯಾವುದಾದರೂ ಪ್ರಸ್ತಾವಗಳು ಸರ್ಕಾರದ ಮುಂದಿವೆಯೇ?

**ಶ್ರೀ ಮೊಹಮದ್ ಅಲಿ** – ಬೀದರ್ ಜಿಲ್ಲೆಯಲ್ಲಿ ರಚಿಸಲಾಗಿರುವ ಎಲ್ಲಾ ಹೊಸ ಮಾರ್ಗಗಳನ್ನು ರಾಷ್ಟ್ರೀಕರಣಗೊಳಿಸಲಾಗುವುದು.

**ಶ್ರೀ ಎಂ.ಜಿ. ಬಣಕಾರ** – ಸ್ವಾಮಿ,ನಮ್ಮ ಮಾನ್ಯ ಸದಸ್ಯರಾಗಿರತಕ್ಕದಂತಹ ಸದ್ಯೋಜಾತಪ್ಪನವರು ಕನ್ನಡದಲ್ಲಿ ಒಂದು ಪ್ರಶ್ನೆ ಕೇಳಿದರು. ಅವರು ನ್ಯಾಷನಲೈಸ್ ಆಗದಿರತಕ್ಕ ರೋಡುಗಳಲ್ಲಿ ಪ್ರೈವೇಟ್ ಬಸ್ಸುಗಳನ್ನು ಓಡಿಸುವುದಕ್ಕೆ ಪರ್ಮಿಶನ್ ಕೊಡುತ್ತೀರಾ ಎಂದು ಕೇಳಿದ್ದಕ್ಕೆ ಮಾನ್ಯ ಮಂತ್ರಿಯವರು ಹೇಳಿದರು. ಸರ್ಕಾರಿ ಬಸ್ಸುಗಳು ಓಡುವ ಕಡೆ ಅಂದರೆ ನ್ಯಾಷನಲೈಸ್ ಆದ ರೋಡುಗಳಲ್ಲಿ ಪ್ರೈವೇಟ್ ಬಸ್ ಓಡಾಡುವುದಕ್ಕೆ ಸ್ಕೋಪ್ ಇಲ್ಲವೆಂದು. ಈ ಉತ್ತರ ಅಸಂಬದ್ಧವಾಗಿದೆ. ಆದ್ದರಿಂದ ಅವರಿಗೆ ಪ್ರಾಯಶ: ಕನ್ನಡ ಸರಿಯಾಗಿ ಬರುವುದಿಲ್ಲ.ದಯವಿಟ್ಟು ಅವರು ಇನ್ನಾದರೂ ಕನ್ನಡವನ್ನು ಕಡ್ಡಾಯವಾಗಿ ಕಲಿಯಲೇಬೇಕೆಂದು ನಾನು ಸಲಹೆ ಮಾಡುತ್ತೇನೆ.

**ಶ್ರೀ ಎಂ.ಎಸ್.ಕೃಷ್ಣನ್** – ತಾವು ರಾಷ್ಟ್ರೀಕರಣ ಮಾಡಿರುವ ರಸ್ತೆಗಳಲ್ಲಿ ಸಹ ಅನೇಕ ಕಡೆ, ರಾಷ್ಟ್ರೀಕರಣ ತತ್ವವನ್ನು ಬುಡಮೇಲು ಮಾಡುವ ರೀತಿಯಲ್ಲಿ ಲಗ್ಸುರಿ ಮತ್ತು ಇತರ ಬಸ್ಸುಗಳನ್ನು ಓಡುಸುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ಹಾಗೆ ಬಂದಿದ್ದರೆ, ಇದರಿಂದನಮಗೆ ಸ್ಪಷ್ಟವಾಗದಿರುವ ಹಾಗೆ ಏನು ಕ್ರಮ ತೆಗೆದುಕೊಂಡಿದ್ದೀರಿ?

**ಉತ್ತರ: ಶ್ರೀ ಮೊಹಮದ್ ಅಲಿ** – ಕಳ್ಳತನದಿಂದ ಬಸ್‌ಗಳನ್ನು ಓಡಿಸುತ್ತಿರುವುದಕ್ಕೆ ಸಂಬಂಧಿಸಿದಂತೆ ಪೊಲೀಸ್ ಇಲಾಖೆ ಮತ್ತು ಇನ್‌ಸ್ಪೆಕ್ಟರುಗಳು ಕ್ರಮ ತೆಗೆದುಕೊಳ್ಳುತ್ತಿದ್ದಾರೆ. ಮಾನ್ಯ ಸದಸ್ಯರು ಪ್ರತ್ಯೇಕ ಪ್ರಶ್ನೆ ಕೇಳಿದರೆ, ನಾನು ವಿವರಗಳನ್ನು ನೀಡುತ್ತೇನೆ.

**ಶ್ರೀ ಎಂ.ನಾಗಪ್ಪ–** ಶ್ರೀಮಾನ್ ವಿ.ಎನ್. ಪಾಟೀಲ್‌ರ ಪ್ರಶ್ನೆಗೆ ಉತ್ತರ ಕೊಡುತ್ತಾ ಆ ರೂಟ್ ನ್ಯಾಷನಲೈಸ್ ಆಗದಿದ್ದರೂ ಆರ್.ಟಿ.ಓ. ಕೆಲವು ಪ್ರೈವೇಟ್ ಆಪರೇಟರ್ಸ್‌ಗೆ ಬಸ್ ಓಡಿಸಬಹುದು ಎಂದು ಅಪ್ಪಣೆ ಕೊಟ್ಟಿದ್ದಾರೆ ಎಂದು ಹೇಳಿದರು. ಅದೇ ಪ್ರಕಾರ ರಾಯಚೂರು ಕಾಲೇಜಿಗೆ ಹೋಗಬೇಕಾದ ಬಸ್ಸಿಗೂ ಕೊಡಬಹುದು. ಅದು ಪ್ರೈವೇಟ್ ರೂಟಾಗಿದೆ. ನ್ಯಾಷನಲೈಸ್ ಆಗಿಲ್ಲ ಆದರೆ ಅದಕ್ಕೆ ಕೊಡುವುದಕ್ಕೆ ಆಗುವುದಿಲ್ಲ ಎಂದು ಬಗವಣಿಗೆಯಲ್ಲಿ ಕೊಟ್ಟಿದ್ದಾರೆ. ಆದ್ದರಿಂದ ಅಲ್ಲಿ ಕಾಲೇಜಿಗೆ ಹೋಗತಕ್ಕ ಹುಡುಗರಿಗೆ ಸೌಲಭ್ಯ ಮಾಡಿಕೊಡುವುದಕ್ಕೋಸ್ಕರ ಕಾಲೇಜು ಬಸ್ಸಿಗೆ ಪರ್ಮಿಶನ್ ಕೊಡುತ್ತೀರಾ?

**ಉತ್ತರ –ಶ್ರೀ ಮೊಹಮದ್ ಅಲಿ** – ಅದನ್ನು ಪರಿಗಣಿಸಲಾಗುವುದು ಸ್ವಾಮಿ.

**ಶ್ರೀ ಎನ್. ಹುಚ್ಚಮಾಸ್ತಿಗೌಡ** – ಮಂತ್ರಿಗಳು ರಾಷ್ಟ್ರೀಕರಣವಾಗಿರತಕ್ಕ ಬಸ್ಸು ಮಾರ್ಗಗಳಲ್ಲಿ ಖಾಸಗಿಯವರಿಗೆ ಯಾವುದೂ ಪರ್ಮಿಷನ್ ಕೊಡುವುದಿಲ್ಲವೆಂದು ಹೇಳಿ ರಾಷ್ಟ್ರೀಕರಣವಾಗಿರುವ ಬಸ್ ಮಾರ್ಗಗಳಲ್ಲಿ ಖಾಸಗಿ ಸಂಸ್ಥೆಯವರಿಗೆ ಟೂರಿಸ್ಟ್ ಸರ್ವಿಸ್ ಎಂದು ಕೊಟ್ಟಿದ್ದಾರೆ, ಇದಕ್ಕೆ ಕಾರಣರು ಯಾರು? ಇದಕ್ಕೆ ಏರ್ಪಾಡು ಮಾಡುವವರು ಯಾರು? ಎಷ್ಟು ಬಸ್ ರೂಟುಗಳಿಗೆ ಈ ರೀತಿ ಪರ್ಮಿಷನ್ ಕೊಟ್ಟಿದ್ದಾರೆ ಎಂಬುವುದನ್ನು ತಿಳಿಸುತ್ತೀರಾ?

**ಉತ್ತರ –ಶ್ರೀ ಮೊಹಮದ್ ಅಲಿ** – ಮಾನ್ಯ ಸದಸ್ಯರು ಪ್ರತ್ಯೇಕ ಪ್ರಶ್ನೆ ಕೇಳಿದರೆ ನಾನು ಸವಿವರವಾದ ಮಾಹಿತಿಯನ್ನು ನೀಡುತ್ತೇನೆ.

**ಸನ್ಮಾನ್ಯ ಸಭಾಧ್ಯಕ್ಷರು** – ಕೇವಲ 20 ನಿಮಿಷ ಮಾತ್ರ ಸಮಯ ಇದೆ. 3 ಪ್ರಶ್ನೆಗಳನ್ನು ಎತ್ತಿಕೊಳ್ಳಲುನಮಗೆ ಸಾಧ್ಯವಾಗುವುದಿಲ್ಲ. ಆದ್ದರಿಂದ ಸಮುಂದಿನ ಪ್ರಶ್ನೆಯೇ ಕೊನೆಯ ಪ್ರಶ್ನೆ.

**ಶ್ರೀ ಕೆ.ಎನ್. ವೀರಪ್ಪಗೌಡ–** ಶಿವಮೊಗ್ಗಾ ಜಿಲ್ಲೆಯಲ್ಲಿ ಕೆಲವು ಪ್ರದೇಶಗಳಲ್ಲಿ ಬಸ್ ರಾಷ್ಟ್ರೀಕರಣ ಮಾಡಬೇಕೆಂದು ಪ್ರಯತ್ನ ಮಾಡಿ ಹಿರಿಯೂರು ಆಗುಂಬಿ ಮತ್ತು ಶೃಂಗೇರಿಯಲ್ಲಿ ಡೈರಕ್ಟಾಗಿ ಬಸ್ ಲೈನ್ ಹಾಕುವಾಗ ಅರ್ಧ ಮಾರ್ಗವನ್ನು ಮಾತ್ರ ರಾಷ್ಟ್ರೀಕರಣ ಮಾಡಿ ಮಿಕ್ಕ ಅರ್ಧಭಾಗವನ್ನು ಹಾಗೆ ಬಿಟ್ಟಿದ್ದಾರೆ. ಅದಕ್ಕೆ ಕಾರಣವೇನು? ಇದರಿಂದ ಜನರಿಗೆ ತೊಂದರೆಯಾಗುವುದು ಸರ್ಕಾರದ ಗಮನಕ್ಕೆ ಬಂದಿದೆಯೆ?

**ಉತ್ತರ –ಶ್ರೀ ಮೊಹಮದ್ ಅಲಿ** – ರಸ್ತೆ ಸಾರಿಗೆ ನಿಗಮದ ಬಳಿ ಲಭ್ಯವಿರುವ ಹಣಕಾಸು ಸಂಪನ್ಮೂಲಗಳನ್ನು ಪರಿಗಣಿಸಿದನಂತರ ರಾಷ್ಟ್ರೀಕರಣ ಯೋಜನೆಗಳಿಗೆ ಅನುಮೋದನೆ ನೀಡಲಾಗಿದೆ.

**ಸನ್ಮಾನ್ಯ ಸಭಾಧ್ಯಕ್ಷರು** ಕೇವಲ 18 ನಿಮಿಷ ಸಮಯವಿದೆ. ಈ ಪ್ರಶ್ನೆಗೆ ಉತ್ತರಿಸಲು ಸಮಯ ಸಾಕಾಗುತ್ತದೆ ಎಂಬುದು ನನ್ನ ಅನಿಸಿಕೆ. ಮುಂದಿನ ಪ್ರಶ್ನೆಗೆ ಹೋಗಬಹುದಲ್ಲವೇ? ನಾನು ಮುಂದಿನ ಪ್ರಶ್ನೆಯನ್ನು ಕರೆಯುತ್ತೇನೆ.

ನಾನು ಆನಂತರ ಪ್ರಶ್ನೆ ಸಂಖ್ಯೆ 50ನ್ನು ತೆಗೆದುಕೊಳ್ಳುತ್ತೇನೆ.

ಶ್ರೀ ನಾಗಪ್ಪ ಅವರ ಪ್ರಶ್ನೆಯನ್ನು ಕೊನೆಯಲ್ಲಿ ತೆಗೆದುಕೊಳ್ಳುತ್ತೇನೆ.

**ಶ್ರೀ ಎಸ್.ಎಸ್.ಶೆಟ್ಟರ್** – ನನ್ನ ಪ್ರಶ್ನೆಗೆ ಬೇರೆ ಯಾರಾದರು ಸಚಿವರು ಉತ್ತರ ಕೊಡಬಹುದು ಇಲ್ಲವಾದಲ್ಲಿ ನಾನು ಕ್ರಿಯಾಲೋಪ ಎತ್ತುತ್ತೇನೆ. ನನ್ನ ಪ್ರಶ್ನೆಗೆ ಉತ್ತರ ನೀಡದಿದ್ದರೆ ನನಗೆ ತೊಂದರೆಯಾಗುತ್ತದೆ.

**ಸನ್ಮಾನ್ಯ ಸಭಾಧ್ಯಕ್ಷರು** – ಮಾನ್ಯ ಸದಸ್ಯರ ವಾದವನ್ನು ನಾನು ಆಲಿಸಿದ್ದೇನೆ. ಆ ಪ್ರಶ್ನೆಯನ್ನು ಸದ್ಯಕ್ಕೆ ತಡೆಹಿಡಿದಿದ್ದು ತರುವಾಯ ತೆಗೆದುಕೊಳ್ಳುತ್ತೇನೆ.

# ಬೆಳಗಾವಿ ನಗರದಲ್ಲಿ ಮರಾಠಿ ಮತ್ತು ಕನ್ನಡ ಪತ್ರಿಕೆಗಳು

**ಶ್ರೀ ಪಿ.ಬಿ.ನಂದಿಹಾಳಿ (ಉಚಗಾಂ)** ವಾರ್ತಾ ಮತ್ತು ಪ್ರಚಾರ, ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಇದನ್ನು ತಿಳಿಸುವರೇ –

(ಎ) ಬೆಳಗಾಂನಗರದಲ್ಲಿ ಪ್ರಸಾರದಲ್ಲಿರುವ (1) ಮರಾಠಿ ದಿನಪತ್ರಿಕೆ, ವಾರ ಪತ್ರಿಕೆಗಳ ಹಾಗೂ (2) ಕನ್ನಡ ದಿನಪತ್ರಿಕೆ, ವಾರಪತ್ರಿಕೆಗಳ ಸಂಖ್ಯೆ;

(ಬಿ) ಮರಾಠಿ ದಿನಪತ್ರಿಕೆ ಮತ್ತು ವಾರಪತ್ರಿಕೆಗಳಿಗೆ ಸರ್ಕಾರ ಜಾಹಿರಾತುಗಳನ್ನು ಪೂರೈಸದಿರುವುದು ನಿಜವೇ;

(ಸಿ) ಹಾಗಾದರೆ ಅದಕ್ಕೆ ಕಾರಣಗಳು;

(ಡಿ) ಸರ್ಕಾರಿ ಜಾಹಿರಾತುಗಳನ್ನು ಮರಾಠಿ ವೃತ್ತ ಪತ್ರಿಕೆಗಳಿಗೆ ಪೂರೈಸುವುದಕ್ಕೆ ಕೋರಿ ಯಾವುದಾದರೂ ಮನವಿ ನಿಮಗೆ ಬಂದಿದೆಯೇ;

(ಇ) ಹಾಗಿದ್ದರೆ, ಈ ವಿಷಯದಲ್ಲಿ ನೀವು ತೆಗೆದುಕೊಂಡಿರುವ ಕ್ರಮ.

**ಶ್ರೀ ಮೊಹಮದ್ ಅಲಿ** – (ವಾರ್ತಾ ಮತ್ತು ಪ್ರಚಾರ ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)

(ಎ) ಲಗತ್ತಿಸುರುವ ಪಟ್ಟಿಯಂತೆ.
(ಬಿ) ಇಲ್ಲ.
(ಸಿ) ಮೇಲಿನ ಬಿ ಖಂಡಕ್ಕೆ ಉತ್ತರ ನೀಡಿರುವುದರಿಂದ ಉದ್ಭವಿಸುವುದಿಲ್ಲ.
(ಡಿ) ಹೌದು.
(ಇ) ಈ ವಿಷಯ ಸರ್ಕಾರದ ಪರಿಗಣನೆಯಲ್ಲಿ ಇದೆ.

**ಶ್ರೀ ಪಿ.ಬಿ.ನಂದಿಹಾಳಿ** – ಈ ಮರಾಠಿ ಪತ್ರಿಕೆಗಳು ಸಾರ್ವಜನಿಕರಿಗೆ ತಮ್ಮಿಂದಾದ ಅತ್ಯುತ್ತಮ ಸೇವೆಯನ್ನು ಸಲ್ಲಿಸುತ್ತಿವೆ. ಜನ ಸಾಮಾನ್ಯರನ್ನು ಮೇಲಕ್ಕೆತ್ತಲು ಮತ್ತು ಅವನ ಬದುಕನ್ನು ಹಸನುಗೊಳಿಸಲು, ಹಾಗೂ ಪ್ರಜಾಪ್ರಭುತ್ವ ತತ್ವಗಳನ್ನು ಸಂರಕ್ಷಿಸಲು ಅವು ಉತ್ತಮ ಸೇವೆ ಸಲ್ಲಿಸುತ್ತಿವೆ. ವಸ್ತುಸ್ಥಿತಿ ಹೀಗುರುವಾಗ ವಿಶಾಲ್ ಮಹಾರಾಷ್ಟ್ರ ಪತ್ರಿಕೆಗೆ ಸರ್ಕಾರ ಜಾಹೀರಾತುಗಳನ್ನು ನೀಡಿ ಉತ್ತೇಜನ ನೀಡುತ್ತಿಲ್ಲ ಏಕೆ ಎಂದು ನನಗೆ ತಿಳಿಸಬಹುದೇ?

**ಶ್ರೀ ಮೊಹಮದ್ ಅಲಿ** – ಈ ಪತ್ರಿಕೆಗಳು ಅಮೂಲ್ಯ ಸೇವೆಯನ್ನು ನೀಡುತ್ತಿರಬಹುದು. ಅವು ಜಾಹೀರಾತುಗಳನ್ನು ನೀಡುವಂತೆ ವಿಧ್ಯುಕ್ತವಾಗಿ ಕೋರಿಕೆ ಸಲ್ಲಿಸಿಲ್ಲ.

**ಶ್ರೀ ಎಂ. ಬಸವರಾಜು** – ಈ ದಿವಸ ಕ್ರೀಡಾಂಗಣಕ್ಕೆ ಅಂತರಾಷ್ಟ್ರೀಯ ಮಟ್ಟದಲ್ಲಿ ಬಹಳ ಮಹತ್ವ ಇರುವುದರಿಂದನಮ್ಮ ತರುಣರಿಗೆ ಇಲ್ಲಿ ಸಾಕಷ್ಟು ತರಬೇತಿ ಕೊಡಲು ಪ್ರತಿಯೊಂದು ಜಿಲ್ಲೆಗಳಲ್ಲೂ ಒಂದೊಂದು ಸ್ಟೇಡಿಯಂ ಕಟ್ಟಿಸುವುದಕ್ಕೆ ಪ್ರಯತ್ನ ಮಾಡುವರೆ?

**ಸನ್ಮಾನ್ಯ ಉಪ ಸಭಾಧ್ಯಕ್ಷರು** – ಅದಕ್ಕೆ ಅನುಮತಿ ನೀಡಿಲ್ಲ. ಆ ಪ್ರಶ್ನೆ ಮುಕ್ತಾಯವಾಗಿದೆ.

**ಶ್ರೀ ಪಿ.ಬಿ.ನಂದಿಹಾಳಿ** – ಜಾಹೀರಾತು ನೀಡುವಂತೆ ಕೋರಿಕೆ ಬಂದಿದೆ ಎಂಬ ಸಂಗತಿಯನ್ನು ಮಾನ್ಯ ಸಚಿವರು ಒಪ್ಪಿಕೊಂಡಿದ್ದಾರೆ. ನಾನು ಖುದ್ದಾಗಿ ಮನವಿ ನೀಡಿರುವ ಸಂಗತಿ ಸಚಿವರಿಗೆ ತಿಳಿದಿದೆಯೇ ಎಂಬುದನ್ನು ನಾನು ತಿಳಿಯಬಯಸುತ್ತೇನೆ.

**ಶ್ರೀ ಮೊಹಮದ್ ಅಲಿ** – ಮಾನ್ಯ ಸದಸ್ಯರು ಕಳೆದ ವರ್ಷದ ಡಿಸೆಂಬರ್‌ನಲ್ಲಿ ಒಂದು ಮನವಿಯನ್ನು ಸಲ್ಲಿಸಿದ್ದು ಅದನ್ನು ಪರಿಶೀಲಿಸಲಾಗುತ್ತಿದೆ.

**ಶ್ರೀ ಎಂ.ಎಸ್. ಕೃಷ್ಣನ್** – ಆ ಬೆಳಗಾಂನಲ್ಲಿ ಸರ್ಕುಲೇಷನ್‌ನಲ್ಲಿರತಕ್ಕ ಮರಾಠಿ ಮತ್ತು ಕನ್ನಡ ಪತ್ರಿಕೆಗಳು ಎಷ್ಟೆಷ್ಟಿವೆ ಎಂಬುದನ್ನು ಒಂದೊಂದನ್ನಾಗಿ ಹೇಳುವುದಕ್ಕೆ ಸಾಧ್ಯವೇ?

**ಶ್ರೀ ಮೊಹಮದ್ ಅಲಿ** – ಪ್ರೆಸ್ ರಿಜಿಸ್ಟ್ರಾರ್‌ರವರ ವರದಿಯ ಅನುಸಾರ ತರುಣ್ ಭಾರತಿ ಪತ್ರಿಕೆಯ ಪ್ರಸಾರ ಸುಮಾರು 5063 ಹಾಗೂ ಬೆಳಗಾಂ ಸಂಚಾರ್ ಪತ್ರಿಕೆಯ ಪ್ರಸಾರ ಸುಮಾರು 1900 ಪ್ರತಿಗಳು. ಇತರ ಪತ್ರಿಕೆಗಳಿಗೆ ಸಂಬಂಧಿಸಿದ ಅಂಕಿಗಳು ಲಭ್ಯವಿಲ್ಲ. ಏಕೆಂದರೆ ಅವರು ತಮ್ಮ ಲೆಕ್ಕವನ್ನು ಪ್ರೆಸ್ ರಿಜಿಸ್ಟ್ರಾರ್‌ಗೆ ನೀಡಿರುವುದಿಲ್ಲ.

**ಶ್ರೀ ವಾಟಾಳ್ ನಾಗರಾಜ್**– ಪತ್ರಿಕೆಗಳಿಗೆ ಜಾಹಿರಾತುಗಳನ್ನು ಕೊಡಬೇಕಾಗಿದ್ದರೆ ಅದನ್ನು ಯಾವ ಆಧಾರದ ಮೇಲೆ ಕೊಡುತ್ತೀರಿ? ತಾವು ಪತ್ರಿಕೆಗಳಿಗೆ ಜಾಹಿರಾತು ನೀಡುವಾಗ ಯಾವ ಆಧಾರದ ಮೇಲೆ ಜಾಹಿರಾತನ್ನು ನೀಡುತ್ತೀರಿ?

**ಶ್ರೀ ಮೊಹಮದ್ ಅಲಿ** – ವರ್ಷದ ಪ್ರಾರಂಭದಲ್ಲಿ ಸರ್ಕಾರವು ಜಾಹಿರಾತು ಬಿಡುಗಡೆ ಮಾಡಲು ತಾನು ಉದ್ದೇಶಿಸಿರುವ ಪತ್ರಿಕೆಗಳ ಪಟ್ಟಿಯನ್ನು ಅನುಮೋದಿಸುತ್ತದೆ ಮತ್ತು ಕನಿಷ್ಠ ಪ್ರಸಾರ 5,000 ಪ್ರತಿಗಳು ಇರಬೇಕಾದದ್ದು ಅವಶ್ಯ.

**ಶ್ರೀ ಸಿದ್ಧಯ್ಯ ಕಾಶಿಮಠ್**– 'ಲೋಕದರ್ಶನ' ದಿನಪತ್ರಿಕೆಗೆ ಯಾವುದಾದರೂ ಜಾಹಿರಾತನ್ನು ನೀಡಲಾಗಿದೆಯೆ ಎಂಬುದನ್ನು ದಯವಿಟ್ಟು ನನಗೆ ತಿಳಿಸುವಿರಾ?

**ಶ್ರೀ ಮೊಹಮದ್ ಅಲಿ** – ಸುಮಾರು 13 ಮರಾಠಿ ದಿನಪತ್ರಿಕೆಗಳಿಗೆ ಹಾಗೂ ವಾರ ಪತ್ರಿಕೆಗಳಿಗೆ ಜಾಹಿರಾತುಗಳನ್ನು ನೀಡುತ್ತಿರುವುದರಿಂದ ಹಾಗೂ ಅವು ಬಾಂಬೆ ಮತ್ತು ಪೂನಾದಿಂದ ಪ್ರಕಟಗೊಳ್ಳುವುದರಿಂದ ಈ ಪ್ರಶ್ನೆಗೆ ಉತ್ತರಿಸಲು ನನಗೆ ಸಾಧ್ಯವಾಗುವುದಿಲ್ಲ.

**ಶ್ರೀ ಎಂ.ಎಸ್.ಕೃಷ್ಣನ್** – ಕನ್ನಡ ಪತ್ರಿಕೆಗಳು ಏನಿವೆ ಅವುಗಳ ಸರ್ಕುಲೇಷನ್ ಏನು ಅವುಗಳಿಗೆ ಅಡ್ವರ್ ಟೈಜಮೆಂಟ್ ಕೊಟ್ಟಿದ್ದೀರಾ?

**ಶ್ರೀ ಮೊಹಮದ್ ಅಲಿ** – ಸ್ವಾಮಿ, ಪ್ರಶ್ನೆ ಮರಾಠಿ ಪತ್ರಿಕೆ ಸಂಬಂಧಪಡುತ್ತದೆ. ಮಾನ್ಯ ಸದಸ್ಯರು ಬೇರೊಂದು ಪ್ರಶ್ನೆ ಕೇಳಿದರೆ  ನನಗೆ ಉತ್ತರ ನೀಡಲು ಸಾಧ್ಯವಾಗುತ್ತದೆ.

**ಶ್ರೀ ಎನ್.ಎ. ಚನ್ನೇಗೌಡ** – ಅಡ್ವರ್‌ಟೈಜ್‌ಮೆಂಟ್ ಕೊಡಬೇಕಾದರೆ 5 ಸಾವಿರ ಸರಕ್ಯೂಲೇಷನ್ ಇರಬೇಕು ಎಂದು ಹೇಳಿದ್ದೀರಿ. ಹಾಗಾದರೆ ತಾವು ಅಡ್ವರ್‌ಟೈಜ್‌ಮೆಂಟ್ ಕೊಟ್ಟಿರತಕ್ಕವುಗಳು 5 ಸಾವಿರ ಸರಕ್ಯೂಲೇಷನ್ ಇದೆಯೇ?

# ಗುಲ್ಬರ್ಗ ವಿಭಾಗದ ವಾಹನಗಳಿಗೆ ಮಾರ್ಗ ತೆರಿಗೆ ವಿನಾಯಿತಿ

**ಶ್ರೀ ಎಲ್. ಶ್ರೀಕಂಠಯ್ಯ (ನಂಜನಗೂಡು)** – ಸಾರಿಗೆ ಸಚಿವರು ದಯವಿಟ್ಟು ಇದನ್ನು ತಿಳಿಸುವರೇ–

(ಎ) ಗುಲ್ಬರ್ಗ ಜಿಲ್ಲೆಯಲ್ಲಿ ಓಡಾಡುತ್ತಿರುವ ವಾಹನಗಳಿಗೆ 1966ರ ಜುಲೈ 8 ಮತ್ತು 1967ರ ಡಿಸೆಂಬರ್ 12ರನಡುವೆ ಹೊರಡಿಸಿದ ಅಧಿಸೂಚನೆಗಳ ಮೂಲಕ ಮಾರ್ಗ ತೆರಿಗೆಗಳನ್ನು ಇಳಿಸುವುದಕ್ಕೆ ಅಥವಾ ವಿನಾಯಿತಿಗೊಳಿಸುವುದಕ್ಕೆ ಸರ್ಕಾರದವರು ಆದೇಶಿಸಿದ್ದಾರೆಯೇ;

(ಬಿ) ಹಾಗಿದ್ದರೆ, ಮೇಲಿನ ಅಧಿಸೂಚನೆ ಅಡಿಯಲ್ಲಿ ಸದರಿ ಪ್ರಯೋಜನ ಪಡೆಯುವಂತಹ ಮಾರ್ಗಗಳ ಸಂಖ್ಯೆ

(ಸಿ) ಮಾರ್ಗ ತೆರಿಗೆಯ ಈ ಇಳಿತಾಯ ಅಥವಾ ವಿನಾಯಿತಿಯಿಂದ ಸರ್ಕಾರಕ್ಕೆ ಆಗಿರುವ ನಿವ್ವಳ ಹಣಕಾಸುನಷ್ಟ.

(ಡಿ) ಯಾರ ಶಿಫಾರಸ್ಸುಗಳ ಮೇಲೆ ಆ ಮಾರ್ಗಗಳಿಗೆ ಈ ಇಳಿತಾಯ ಸೌಲಭ್ಯ ನೀಡಲಾಗಿದೆ.

**ಶ್ರೀ ಮೊಹಮದ್ ಅಲಿ** – (ಸಾರಿಗೆ ಸಚಿವರು)

(ಎ) ಹೌದು, ತೆರಿಗೆ ದರದಲ್ಲಿ ಇಳಿತಾಯಕ್ಕೆ ಅನುಮತಿ ನೀಡಲಾಗಿದೆ.

(ಬಿ) ಮೂರು

(ಸಿ) ಪ್ರತಿ ವರ್ಷಕ್ಕೆ 9845 ರೂಪಾಯಿ.

(ಡಿ) ಮೋಟಾರು ವಾಹನಗಳ ಇಲಾಖೆಯ ಅಧಿಕಾರಿಗಳ ಶಿಫಾರಸ್ಸಿನ ಮೇಲೆ ಮತ್ತು ಲೋಕೋಪಯೋಗಿ ಇಲಾಖೆಯ ಅಧಿಕಾರಿಗಳೊಂದಿಗೆ ಸಂಪರ್ಕಿಸಿ.

**ಶ್ರೀ ಎಂ. ನಾಗಪ್ಪ** – ಸ್ವಾಮಿ 8.7.1966ರಿಂದ 12.12.1967ರ ವರೆಗೆ ಗುಲ್ಬರ್ಗಾ ಜಿಲ್ಲೆಗೆ ವೆಹಿಕಲ್ ತೆರಿಗೆ ವಸೂಲು ಮಾಡುವುದಕ್ಕೆ ವಿನಾಯ್ತಿ ಕೊಟ್ಟಿದ್ದೀರಾ, ಹೀಗೆಯೇ ಇತರ ಜಿಲ್ಲೆಗಳಿಗೂ ವಿನಾಯ್ತಿ ಕೊಟ್ಟಿದ್ದೀರಾ, ಗುಲಬರ್ಗಾ ಜಿಲ್ಲೆಗೆ ವಿನಾಯ್ತಿ ಕೊಡುವುದಕ್ಕೆ ಅಧಿಕಾರಿಗಳಿಂದ ಏನು ವರದಿ ಬಂದಿದೆ?

**ಶ್ರೀ ಮೊಹಮದ್ ಅಲಿ** – ಕೇಳಿದ ಪ್ರಶ್ನೆ ಗುಲ್ಬರ್ಗಾ ಜಿಲ್ಲೆಗೆ ಸಂಬಂಧಪಟ್ಟಿದೆ. ಇತರ ಜಿಲ್ಲೆಗಳಿಗೆ ಸಂಬಂಧಿಸಿದಂತೆ ಮಾನ್ಯ ಸದಸ್ಯರು ಬೇರೊಂದು ಪ್ರಶ್ನೆ ಕೇಳಿದರೆ ಮಾಹಿತಿ ನೀಡಲು ನನಗೆ ಸಾಧ್ಯವಾಗುತ್ತದೆ.

**ಶ್ರೀ ಎ. ಹುಚ್ಚ ಮಾಸ್ತಿಗೌಡ** – ಸ್ವಾಮಿ ಮೋಟಾರು ವಾಹನಗಳ ಇಲಾಖೆಯ ಅಧಿಕಾರಿಗಳ ಶಿಫಾರಸ್ಸುಗಳ ಮೇರೆಗೆ ಲೋಕೋಪಯೋಗಿ ಇಲಾಖೆಯ ಅಧಿಕಾರಿಗಳೊಡನೆ ಸಮಾಲೋಚನೆನಡೆಸಿ ವಾಹನಗಳ ಮಾರ್ಗ ತೆರಿಗೆಯನ್ನು ವಸೂಲು ಮಾಡುವುದಕ್ಕೆ ವಿನಾಯ್ತಿಯನ್ನು ಕೊಟ್ಟಿದ್ದೇವೆ ಎಂದು ಹೇಳಿದ್ದೀರಿ. ಅವರು ಯಾವ ಕಾರಣವನ್ನುನಮೂದು ಮಾಡಿ ಏತಕ್ಕೋಸ್ಕರ ಅದಕ್ಕೆ ವಿನಾಯ್ತಿಯನ್ನು ಕೊಡಬೇಕೆಂದು ಹೇಳಿದ್ದಾರೆ?

**ಶ್ರೀ ಮೊಹಮದ್ ಅಲಿ** – ವಾಸ್ತವವಾಗಿ ಈ ಮಾರ್ಗಗಳು ಬಂಡೀ ಜಾಡುಗಳಾಗಿದ್ದು, ಸಾಕಷ್ಟು ರಸ್ತೆ ಸೌಲಭ್ಯಗಳಿಲ್ಲದ ಹೈದರಾಬಾದ್ ಕರ್ನಾಟಕ ಪ್ರದೇಶದ ಕಪ್ಪು ಮಣ್ಣಿನಲ್ಲಿ ಬಸ್ಸುಗಳನ್ನು ಓಡಿಸಲು ಈ ಜಾಡುಗಳ ಮೇಲೆ ರಸ್ತೆ ಪರ್ಮಿಟ್ ಗಳನ್ನು ಕ್ಯಾರಿಯೇಜ್ ಆಪರೇಟರ್‌ಗಳಿಗೆ ನೀಡಲಾಗಿದೆ. ಈ ಆಪರೇಟರುಗಳು ಬಂಡಿ ಜಾಡುಗಳನ್ನು ಸ್ವತ: ಉತ್ತಮ ಪಡಿಸಿ ಮಳೆಗಾಲದಲ್ಲಿ, ವಿಶೇಷವಾಗಿ ಅವರು ಬಸ್ಸುಗಳನ್ನು ಓಡಿಸುವ ಸ್ಥಿತಿಯಲ್ಲಿ ಇರದಂಥ 4 ರಿಂದ 5 ತಿಂಗಳ ಅವಧಿಯಲ್ಲಿ ಬಸ್ಸುಗಳನ್ನು ಓಡಿಸುವುದಕ್ಕೆ ಆ ರಸ್ತೆಗಳನ್ನು ಅವರೇ ಸ್ವತ: ಉತ್ತಮಪಡಿಸುತ್ತಾರೆ ಮತ್ತು ಸವೆಯುವ ಭಾರೀ ಅಪಾಯವೂ ಅವರಿಗಿದೆ.

**ಶ್ರೀ ಎಲ್. ಶ್ರೀ ಕಂಠಯ್ಯ** – ಪಬ್ಲಿಕ್ ವರ್ಕ್ಸ್ ಇಲಾಖೆಗೆ ಸಂಬಂಧಪಟ್ಟ ವರದಿ ಸಬಾರ್ಡಿನೇಟ್ ಲೆಜಿಸ್ಲೇಷನ್‌ನಲ್ಲಿ ಬಂದಾಗ ನಾವು ನೋಡಿದೆವು. ಅಲ್ಲಿ ಯಾವ ರಸ್ತೆಯನ್ನೂ ರಿಪೇರಿ ಮಾಡಿಲ್ಲ. ಪಬ್ಲಿಕ್ ವರ್ಕ್ಸ್ ಇಲಾಖೆಯ ವರದಿಯನ್ನು ನೋಡಿದರೆ ತಮಗೆ ಗೊತ್ತಾಗುತ್ತದೆ. ಅಲ್ಲಿ ಬಸ್ಸುಗಳನ್ನು ಓಡಿಸತಕ್ಕ ಪ್ರೈವೇಟ್ ಬಸ್ ಮಾಲೀಕರು ಸಾವಿರಾರು ರೂಪಾಯಿಗಳನ್ನು ಗಳಿಸುತ್ತಿದ್ದಾರೆಂಬುದು ತಮ್ಮ ಗಮನಕ್ಕೆ ಬಂದಿದೆಯೇ? ಹೀಗಿದ್ದರೂ ಸಹ ಅವರಿಗೆ ಏತಕ್ಕೆ ತೆರಿಗೆ ವಿನಾಯಿತಿ ಕೊಟ್ಟಿದ್ದೀರಿ?

**ಶ್ರೀ ಮೊಹಮದ್ ಅಲಿ** – ಇವು ಲೋಕೋಪಯೋಗಿ ಇಲಾಖೆ ಅಥವಾ ಸ್ಥಳೀಯ ಸಂಸ್ಥೆಗಳು ನಿರ್ವಹಿಸದ ಇಲ್ಲವೇ ಲೋಕೋಪಯೋಗಿ ಇಲಾಖೆಯು ರೂಪಿಸಿರದ ರಸ್ತೆಗಳಾಗಿವೆ ಇವು ಕಚ್ಚಾ ರಸ್ತೆಗಳಾಗಿವೆ. ಕಾರ್ಯ ನಿರ್ವಾಹಕ ಇಂಜಿನಿಯರ್ ಮತ್ತು ಆರ್. ಟಿ.ಎ. ಅವರ ಶಿಫಾರಸ್ಸಿನ ಮೇಲೆ ನಾವು ತೆರಿಗೆ ರಿಯಾಯಿತಿಗೆ ಅನುಮತಿಸುತ್ತೇವೆ.

**ಶ್ರೀ ಎಂ.ನಾಗಪ್ಪ** ತಾವು ಉತ್ತರವನ್ನು ಕೊಟ್ಟಿರಿ ಆ ರಸ್ತೆಗಳು ಪಿ.ಡಬ್ಲ್ಯೂ.ಡಿ ರಸ್ತೆಯಲ್ಲ ತಾಲ್ಲೂಕ್ ಬೋರ್ಡ್ ರಸ್ತೆಯಲ್ಲ ಎಂದು. ತಾವು ಇದನ್ನು ಜವಾಬ್ದಾರಿಯುತವಾಗಿ ಹೇಳುತ್ತಿದ್ದೀರಾ? ಎರಡನೆಯದು ಅಲ್ಲಿನ ಪ್ರೈವೇಟ್ ಬಸ್ ಮಾಲೀಕರಿಗೆ ಈ ತರಹ ತೆರಿಗೆಯ ವಿನಾಯಿತಿಯನ್ನು 1962 ಮತ್ತು 1967ನೇ ಇಸವಿಯಲ್ಲಿ ಚುನಾವಣೆನಡೆದ ಸಮಯಕ್ಕೆ ಸರಿಯಾಗಿ ಕೊಟ್ಟಿದ್ದೀರಿ ಅಲ್ಲವೆ?

**ಶ್ರೀ ಮೊಹಮದ್ ಅಲಿ** – ಈ ರಿಯಾಯಿತಿಗಳನ್ನು ಕಾರ್ಯ ನಿರ್ವಾಹಕ ಇಂಜಿನಿಯರ್ ಮತ್ತು ಆರ್. ಟಿ.ಎ. ಅವರ ವರದಿಯ ಮೇಲೆ ಮಂಜೂರು ಮಾಡಲಾಗಿದೆ. ತಪ್ಪು ವರದಿಯನ್ನು

ಸರ್ಕಾರಕ್ಕೆ ನೀಡಿರುವಂತಹ ಯಾವುದೇ ನಿರ್ದಿಷ್ಟ ಸಂದರ್ಭ ಇದ್ದರೆ ವಿಚಾರಣೆನಡೆಸಲಾಗುವುದು. ಚುನಾವಣೆಗೆ ಮುಂಚೆ ನೀಡಿರುವುದಕ್ಕೆ ಮಂಜೂರಾತಿಗೆ ಸಂಬಂಧಿಸಿದಂತೆ ಇದು ಸರಿಯಲ್ಲ.

**ಶ್ರೀ ಎಸ್. ಶಿವಪ್ಪ** – ಯಾವ ಕಾನೂನಿನ ಉಪಬಂಧದ ಅಡಿಯಲ್ಲಿ ಸರ್ಕಾರ ವಿನಾಯಿತಿ ನೀಡಬಹುದು.

**ಶ್ರೀ ಮೊಹಮದ್ ಅಲಿ** – ಮೋಟಾರು ವಾಹನ ತೆರಿಗೆಯ ಅಧಿನಿಯಮದ 16ನೇ ಪ್ರಕರಣದ ಅಡಿ ಸರ್ಕಾರವು ವಿನಾಯಿತಿ ನೀಡಬಹುದು.

**ಶ್ರೀ ಎಚ್. ಸಿದ್ಧವೀರಪ್ಪ** – ಅಧಿನಿಯಮದ 16ನೇ ಪ್ರಕರಣದ ಅಡಿ ನೀವು ಉತ್ತರ ನೀಡುವಾಗ ತಿಳಿಸಿದ ಪ್ರಕರಣಗಳಿಗೆ ವಿನಾಯಿತಿ ನೀಡಲು ಅವಕಾಶವಿದೆಯೇ ಅಥವಾ ಆ ನಿರ್ದಿಷ್ಟ ಪ್ರದೇಶದಲ್ಲಿ ಓಡುತ್ತಿರುವಂತಹ ವಾಹನಗಳಿಗೆ ಮಾತ್ರ ವಿನಾಯಿತಿ ನೀಡಲು ಅವಕಾಶವಿದೆಯೇ?

**ಶ್ರೀ ಮೊಹಮದ್ ಅಲಿ** – ಪ್ರಕರಣಗಳ ಅರ್ಹತೆ ಆಧಾರದ ಮೇಲೆ ತೆರಿಗೆಯನ್ನು ಇಳಿಸುವ ಅಥವಾ ತೆರಿಗೆ ಪಾವತಿಯಿಂದ ವಿನಾಯಿತಿ ನೀಡುವ ಅಧಿಕಾರ ಸರ್ಕಾರಕ್ಕೆ ಇದೆ.

**ಶ್ರೀ ವಿ.ಎನ್. ಪಾಟೀಲ್** – ಬೀದರ್ ಮತ್ತು ಗುಲ್ಬರ್ಗ ಜಿಲ್ಲೆಗಳಲ್ಲಿ ಪ್ರಯಾಣಿಕರು ಖಾಸಗೀ ಬಸ್ಸುಗಳಲ್ಲಿ ಪ್ರಯಾಣಿಸುವುದು ತುಂಬಾ ಅಪಾಯಕರ ಮತ್ತು ಪ್ರತಿವರ್ಷ 10 ರಿಂದ 20 ಅಪಘಾತಗಳು ಉಂಟಾಗುತ್ತಿವೆ ಎಂಬುದು ನಿಜವೇ.

**ಶ್ರೀ ಮೊಹಮದ್ ಅಲಿ** – ಇದು ಅಪಾಯಕರ ಎಂದು ನನಗೆ ಅನ್ನಿಸುವುದಿಲ್ಲ.

## ಎಂ.ಎಸ್.ಆರ್.ಟಿ.ಸಿ.ಗೆ ಕಂಡಕ್ಟರ್‌ಗಳ ನೇಮಕಾತಿ

**ಶ್ರೀ ಸಿದ್ಧಯ್ಯ ಕಾಶಿಮಠ್** (ಶಿರಹಟ್ಟಿ) ಸಾರಿಗೆ ಸಚಿವರು ದಯವಿಟ್ಟು ಇದನ್ನು ತಿಳಿಸುವರೇ:

ಎ) ಎಂ.ಎಸ್.ಆರ್.ಟಿ.ಸಿ.ಯು ಈ ವರೆಗೆ ಕೆಲಸದಿಂದ ತೆಗೆದುಹಾಕಿದ ಬಸ್ ಕಂಡಕ್ಟರ್‌ಗಳ ಸಂಖ್ಯೆ; (ವಿಭಾಗವಾರು ಸಂಖ್ಯೆಯನ್ನು ನೀಡುವುದು)

(ಬಿ) ಅವರಲ್ಲಿ ಪುನ: ಕೆಲಸಕ್ಕೆ ತೆಗೆದುಕೊಂಡವರ ಸಂಖ್ಯೆ (ವಿಭಾಗಾವಾರು ಅಂಕಿಗಳನ್ನು ಒದಗಿಸಬಹುದು);

(ಸಿ) ಈ ಸಂಬಂಧದಲ್ಲಿ ಯಾವುದಾದರೂ ರಿಟ್ ಅರ್ಜಿಗಳು ಉಚ್ಛ ನ್ಯಾಯಾಲಯದಲ್ಲಿ ಬಾಕಿ ಉ॰ಿದಿವೆಯೇ?

**ಶ್ರೀ ಮೊಹಮದ್ ಅಲಿ** – (ಸಾರಿಗೆ ಸಚಿವರು)

(ಎ) 946.

(ಸಿ) ಹೌದು, 20 ರಿಟ್ ಅರ್ಜಿಗಳು ಬಾಕಿ ಇವೆ.

**ಶ್ರೀ ಸಿದ್ಧಯ್ಯ ಕಾಶೀಮಠ್** – ಸ್ವಾಮಿ ಈಗ ಮೈಸೂರು ರಾಜ್ಯದ ರಸ್ತೆ ಸಾರಿಗೆ ಸಂಸ್ಥೆಯಲ್ಲಿ ಕಂಡಕ್ಟರುಗಳನ್ನು ರೀ ಇನ್‌ಸ್ಟೇಟ್ ಮಾಡುವಾಗ ಯಾವ ಅಂಶವನ್ನು ಗಣನೆಗೆ ತೆಗೆದುಕೊಂಡು ರೀ ಇನ್ ಸ್ಟೇಟ್ ಮಾಡುತ್ತಿದ್ದೀರಿ?

**ಶ್ರೀ ಮೊಹಮದ್ ಅಲಿ** – ಅದು ಒಂದೊಂದು ಪ್ರಕರಣದ ಅರ್ಹತೆಯನ್ನು ಅವಲಂಬಿಸಿರುತ್ತದೆ.

**ಶ್ರೀ ಸಿದ್ಧಯ್ಯ ಕಾಶೀಮಠ್** – ಹುಬ್ಬಳ್ಳಿ ಡಿವಿಜನ್‌ನಲ್ಲಿ 182 ಜನ ಕಂಡಕ್ಟರನ್ನು ಕೆಲಸದಿಂದ ವಜಾ ಮಾಡಲಾಗಿದೆ ಎಂದು ತಿಳಿಸಿದ್ದೀರಿ,ನಮಗೆ ತಿಳಿದಿರುವ ಹಾಗೆ ಅವರು ಕಷ್ಟದಲ್ಲಿದ್ದಾರೆ, ಅವರು ನಿಮ್ಮ ಕಾಯಿದೆಗನುಗುಣವಾಗಿ ಬರುವುದಾದರೆ ಅವರನ್ನು ರೀಇನ್‌ಸ್ಟೇಟ್ ಮಾಡುವುದಕ್ಕೆ ಪ್ರಯತ್ನ ಮಾಡುತ್ತೀರಾ?

**ಶ್ರೀ ಮೊಹಮದ್ ಅಲಿ** – ಎಲ್ಲವೂ ಪ್ರಕರಣದ ಅರ್ಹತೆಯನ್ನು ಅವಲಂಬಿಸಿರುತ್ತದೆ. ಕೆಲವೊಮ್ಮೆ ಅನುಕಂಪದ ಆಧಾರದ ಮೇಲೆ ರಸ್ತೆ ಸಾರಿಗೆ ನಿಗಮವು ಈ ಜನರನ್ನು ಪುನರ್ ನೇಮಕ ಮಾಡಿಕೊಳ್ಳುತ್ತದೆ.

**ಶ್ರೀ ಎನ್. ಚನ್ನೇಗೌಡ** – ಈಗ ಒಟ್ಟು 946 ಜನಗಳನ್ನು ಕೆಲಸದಿಂದ ತೆಗೆದುಹಾಕಿದ್ದೇವೆಂದು ಹೇಳಿದ್ದೀರಿ, ಆ ಪೈಕಿ ಎಷ್ಟು ಜನಗಳನ್ನು ಹಣದುರುಪಯೋಗದ ಅಪಾದನೆಗಳ ಮೇಲೆ ತೆಗೆದುಹಾಕಿದ್ದೀರಿ? ಈ ಸಂಬಂಧದಲ್ಲಿ 20 ರಿಟ್ ಪಿಟಿಷನ್‌ಗಳು ಇತ್ಯರ್ಥವಾಗದೇ ಉಳಿದಿವೆ ಎಂದು ಹೇಳಿದ್ದೀರಿ, ಸರ್ಕಾರದ ಇಂಟರೆಸ್ಟ್‌ನಿಂದ ಅವುಗಳನ್ನು ಕಾಂಪೌಂಡ್ ಮಾಡಿಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತೀರಾ?

**ಶ್ರೀ ಮೊಹಮದ್ ಅಲಿ** – ಈ 946 ಪ್ರಕರಣಗಳ ವಿವರಗಳನ್ನು ನೀಡುವುದು ತುಂಬಾ ಕಷ್ಟ. ಆದರೆ ಅವುಗಳಲ್ಲಿ ಹೆಚ್ಚಿನವು ತೀರ್ಥಯಾತ್ರೆಯಲ್ಲಿ ಒಳಗೊಳ್ಳುತ್ತವೆ.

**ಶ್ರೀ ಬಿ.ಎಂ.ಇದಿನಬ್ಬ** – ಬಸ್ ರೂಟ್ ನ್ಯಾಷನಲೈಜ್ ಆಗುವುದಕ್ಕಿಂತ ಮೊದಲು ಬೇರೆ ಬೇರೆ ಕಂಪೆನಿಗಳಲ್ಲಿದ್ದಂತಹ ಕಂಡಕ್ಟರುಗಳು ಮತ್ತು ಡ್ರೈವರುಗಳನ್ನು ಕೆಲಸ ಇಲ್ಲದೆ ಇರುವವರನ್ನು ಕೆಲಸಕ್ಕೆ ಏರ್ಪಾಡು ಸರ್ಕಾರದ ಕೃತಿಯಲ್ಲಿ ಇದೆಯೇ?

**ಶ್ರೀ ಮೊಹಮದ್ ಅಲಿ** – ರಸ್ತೆ ಸಾರಿಗೆ ನಿಗಮಕ್ಕೆ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರೂಪಿಸಲಾಗಿದ್ದು ಹಿಂದಿನ ಸಾರಿಗೆ ಉದ್ಯಮದ ನೌಕರರು ಕೆಲವು ಷರತ್ತುಗಳನ್ನು ಪೂರೈಸಬೇಕಾಗುತ್ತದೆ. ಆದರೆ ಯಾವುದೇ ನಿರ್ದಿಷ್ಟ ಪ್ರಸ್ತಾವಗಳನ್ನು ಸರ್ಕಾರಕ್ಕೆ ಮತ್ತು ರಸ್ತೆ ಸಾರಿಗೆ ನಿಗಮಕ್ಕೆ ಸಲ್ಲಿಸಿದರೆ ಖಂಡಿತ ಕೆಲಮಟ್ಟಿನ ರಿಯಾಯಿತಿಯನ್ನು ತೋರಿಸಬಹುದು.

**ಶ್ರೀ ಎಂ.ಎಸ್.ಕೃಷ್ಣನ್** – ಶಿಸ್ತು ಕ್ರಮ ತೆಗೆದುಕೊಳ್ಳುವುದಕ್ಕೆ ಸಂಬಂಧಿಸಿದಂತೆ ಸಾಕಷ್ಟು ಪ್ರಕರಣಗಳಲ್ಲಿ ಈ ನಿಯಮಗಳನ್ನು ಮತ್ತು ಸ್ಥಾಯೀ ಆದೇಶಗಳನ್ನು ಉಲ್ಲಂಘಿಸಿರುವುದು ಮತ್ತು ಆದ್ದರಿಂದಾಗಿ ಭಾರೀ ಸಂಖ್ಯೆಯ ರಿಟ್ ಅರ್ಜಿಗಳು ಬಾಕಿ ಉಳಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಮೊಹಮದ್ ಅಲಿ** – ಬಾರೀ ಸಂಖ್ಯೆಯ ರಿಟ್ ಅರ್ಜಿಗಳು ಬಾಕಿ ಇಲ್ಲ, ಕೇವಲ 20 ಬಾಕಿ ಇವೆ. ಇತರ ಇಲಾಖೆಗಳ ವಿರುದ್ಧ ಸಲ್ಲಿಸಿರುವ ರಿಟ್ ಅರ್ಜಿಗಳಿಗೆ ಹೋಲಿಸಿದರೆ ರಸ್ತೆ ಸಾರಿಗೆ ನಿಗಮದ ವಿರುದ್ಧ ಸಲ್ಲಿಸಿರುವ ರಿಟ್ ಅರ್ಜಿಗಳ ಸಂಖ್ಯೆ ತುಂಬಾ ಕಡಿಮೆ ಎಂದು ನಾನು ಹೇಳಬಲ್ಲೆ.

**ಶ್ರೀಮತಿ ಕೆ.ಲೀಲಾವತಿ ರೈ** – ಸ್ವಾಮಿ ಬಸ್ ರೂಟನ್ನು ನ್ಯಾಷನಲೈಜ್ ಮಾಡುವುದಕ್ಕಿಂತ ಮುಂಚೆ ಪ್ರೈವೇಟ್ ಬಸ್ಸುಗಳಲ್ಲಿ ಕೆಲಸ ಮಾಡಿಕೊಂಡು ಇದ್ದಂತಹ ಡ್ರೈವರುಗಳು ಮತ್ತು ಕಂಡಕ್ಟರುಗಳು ಕೆಲಸಕ್ಕೆ ತೆಗೆದುಕೊಳ್ಳುವ ಬಗ್ಗೆ ರೂಲ್ಸ್ ಪ್ರೇಮ್ ಮಾಡುತ್ತಿದ್ದೇವೆ ಎಂದು ಹೇಳಿದ್ದರು. ಈಗ ಅವರನ್ನು ಕೆಲಸಕ್ಕೆ ತೆಗೆದುಕೊಳ್ಳುವುದಕ್ಕೆ ಸರ್ಕಾರದವರು ಪ್ರಯತ್ನ ಮಾಡುತ್ತೀರಾ?

**ಶ್ರೀ ಮೊಹಮದ್ ಅಲಿ** – ಕೆಲಸದಿಂದ ತೆಗೆದುಹಾಕಲಾದ ಖಾಸಗೀ ಉದ್ಯಮಗಳ ಎಲ್ಲಾ ನೌಕಕರರುಗಳನ್ನು ಅಂಗೀಕರಿಸುವುದು ತುಂಬಾ ಕಷ್ಟ.

## ಬೆಂಗಳೂರಿನಲ್ಲಿ ಎಂ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣ ನಿರ್ಮಾಣ

**ಶ್ರೀ ಎಚ್.ಎನ್.ನಂಜೇಗೌಡ (ಅರಕಲಗೂಡು) ಶ್ರೀಕಂಠಯ್ಯ (ನಂಜನಗೂಡು)** ಇವರ ಪರವಾಗಿ – ವಾರ್ತಾ ಮತ್ತು ಪ್ರಸಾರ, ಸಾರಿಗೆ ಮತ್ತು ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಇದನ್ನು ತಿಳಿಸುವರೇ –

(ಎ) ನಗರ ರೈಲು ನಿಲ್ದಾಣಕ್ಕೆ ಹೊಂದಿಕೊಂಡಿರುವ ಸುಭಾಷ್ ಮೈದಾನದಲ್ಲಿ ಎಂ.ಎಸ್.ಆರ್.ಟಿ.ಸಿ ಹೊಸ ಬಸ್ ನಿಲ್ದಾಣದ ನಿರ್ಮಾಣ ಕಾರ್ಯವನ್ನು ಇದ್ದಕ್ಕಿದಂತೆ ಸ್ಥಗಿತಗೊಳಿಸಲಾಗಿದೆಯೇ;

(ಬಿ) ಹಾಗಾದರೆ ಅದಕ್ಕೆ ಕಾರಣಗಳು ಮತ್ತು ಹೆಸೂಸ ಬಸ್ ನಿಲ್ದಾಣದ ಕಾಮಗಾರಿ ಯಾವಾಗ ಮತ್ತೆ ಪ್ರಾರಂಭವಾಗುತ್ತದೆ;

(ಸಿ) ಈ ನಿಟ್ಟಿನಲ್ಲಿ ಈಗಾಗಲೇ ಯಾವುದೇ ವೆಚ್ಚ ಮಾಡಲಾಗಿದೆಯೇ; ಹಾಗಿದ್ದರೆ ಖರ್ಚು ಮಾಡಿರುವ ಹಣ ಎಷ್ಟು;

(ಡಿ) ಹೊಸ ಬಸ್ ನಿಲ್ದಾಣದಲ್ಲಿ ಖಾಸಗೀ ಬಸ್‌ಗಳಿಗೂ ಸಹಾ ಸ್ಥಳಾವಕಾಸ ಕಲ್ಪಿಸಲಾಗುವುದೇ?

**ಶ್ರೀ ಮೊಹಮದ್ ಅಲಿ** – (ವಾರ್ತಾ ಮತ್ತು ಪ್ರಚಾರ, ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)

(ಎ) ಹೊಸ ಬಸ್ ನಿಲ್ದಾಣದ ನಿರ್ಮಾಣ ಕಾರ್ಯವನ್ನು ಇನ್ನೂ ಕೈಗೆತ್ತಿಕೊಂಡಿಲ್ಲ. 2 ಡಿಪೋಗಳ ನಿರ್ಮಾಣ ಕಾರ್ಯವನ್ನು ಕೈಗೆತ್ತಿಕೊಂಡಿದ್ದು ವಿನ್ಯಾಸದಲ್ಲಿನ ಬದಲಾವಣೆ ಹಾಗೂ ಗುತ್ತಿಗೆದಾರನೊಂದಿಗಿನ ವಿವಾದದ ಕಾರಣದಿಂದಾಗಿ ಕೆಲ ಸಮಯದಿಂದ ಈ ಕೆಲಸವನ್ನು ನಿಲ್ಲಿಸಲಾಗಿತ್ತು.

(ಬಿ) ಇತ್ತೀಚೆಗೆ ಈ ಕೆಲಸವನ್ನು ಪುನ: ಪ್ರಾರಂಭಿಸಲಾಗಿದೆ.

(ಸಿ) ಕಟ್ಟಡದ ಮೇಲೆ ಒಟ್ಟು 3 ಲಕ್ಷ 50 ಸಾವಿರ ರೂಪಾಯಿಗಳನ್ನು ಖರ್ಚು ಮಾಡಲಾಗಿದೆ. ವಾಹನ ನಿಲುಗಡೆ ಪ್ರಾಂಗಣಗಳನ್ನು ಧಮ್ಮಸ್ಸು ಮಾಡುವುದೇ ಮುಂತಾದ ಇತರ ಉಪ ಕಾಮಗಾರಿಗಳಿಗಾಗಿ ಇನ್ನೂ 3 ಲಕ್ಷ 42 ಸಾವಿರ ರೂಪಾಯಿಗಳನ್ನು ಖರ್ಚು ಮಾಡಲಾಗಿದೆ.

(ಡಿ) ಇಲ್ಲ.

**ಶ್ರೀ ಹೆಚ್.ಎನ್‌ನಂಜೇಗೌಡ – ಸ್ವಾಮಿ** ವಿನ್ಯಾಸದಲ್ಲಿನ ಬದಲಾವಣೆ ಹಾಗೂ ಗುತ್ತಿಗೆದಾರನೊಂದಿಗಿನ ವಿವಾದದಿಂದಾಗಿ ಸಮಯದಿಂದ ಕೆಲಸವನ್ನು ಸ್ಥಗಿತಗೊಳಿಸಲಾಗಿದೆ ಕಾಮಗಾರಿಗಳನ್ನು ಸ್ಥಗಿತಗೊಳಿಸಲಾಗಿದೆ ಎಂದು ಮಾನ್ಯ ಸಚಿವರು ತಿಳಿಸಿದರು. ಆ ವಿವಾದದ ಸ್ವರೂಪವೇನು? ಗುತ್ತಿಗೆದಾರನು ಹೆಚ್ಚಿನ ದರಗಳಿಗೆ ತಗಾದೆ ಮಾಡಿದ್ದಾನೆಯೇ ಮತ್ತು ಆತ ತಗಾದೆ ಮಾಡಿದ ಹೆಚ್ಚಿನ ದರಗಳನ್ನು ಸರ್ಕಾರ ಆತನಿಗೆ ನೀಡಿದೆಯೇ? ಎಂಬುದನ್ನು ನಾನು ತಿಳಿಯಬಯಸುತ್ತೇನೆ.

**ಶ್ರೀ ಮೊಹಮದ್ ಅಲಿ** – ಕಬ್ಬಿಣ, ಉಕ್ಕು ಹಾಗೂ ಸಿಮೆಂಟನ್ನು ಪೂರೈಸುವಂತೆ ಆ ಗುತ್ತಿಗೆದಾರ ತಗಾದೆ ಮಾಡಿದ ಈ ವಿಷಯವನ್ನು ತೀರ್ಮಾನಿಸಲು ಸ್ವಲ್ಪ ಸಮಯ ಹಿಡಿಯಿತು.

**ಶ್ರೀ ಹೆಚ್.ಎನ್‌ನಂಜೇಗೌಡ** – ಅವುಗಳನ್ನು ಸರ್ಕಾರದವರು ಪೂರೈಸಿದ್ದಾರೆಯೇ ಎಂಬುದನ್ನು ನಾನು ತಿಳಿಯಬಯಸುತ್ತೇನೆ.

**ಶ್ರೀ ಮೊಹಮದ್ ಅಲಿ** – ಕಬ್ಬಿಣ ಮತ್ತು ಉಕ್ಕಿನ ಸಾಮಗ್ರಿಗಳು ಹಾಗೂ ಸಿಮೆಂಟನ್ನು ಪೂರೈಸುವಂತೆ ಗುತ್ತಿಗೆದಾರನು ರಸ್ತೆ ಸಾರಿಗೆ ನಿಗಮವನ್ನು ಒತ್ತಾಯಿಸಿದ ಈ ವಿಷಯ ಕೆಲ ಸಮಯ ವಿವಾದಕ್ಕೆ ಒಳಗಾಗಿತ್ತು.

**ಶ್ರೀ ಎಸ್ ಶಿವಪ್ಪ**– ಕಬ್ಬಿಣ, ಉಕ್ಕು ಮತ್ತು ಸಿಮೆಂಟ್ ಅನ್ನು ಮಾತ್ರ ಪೂರೈಸದಿರುವುದಕ್ಕಾಗಿ ಎಷ್ಟು ಸಮಯ ಕೆಲಸವನ್ನು ಮುಂದೂಡಲಾಗಿತ್ತು?

**ಶ್ರೀ ಮೊಹಮದ್ ಅಲಿ** – ವಿನ್ಯಾಸನವನ್ನು ಬದಲಾವಣೆ ಮಾಡುವ ವಿಷಯವೂ ಇದ್ದುದರಿಂದ ನಿಖರವಾದ ಅವಧಿಯನ್ನು ತಿಳಿಸುವುದು ಕಷ್ಟ.

**ಶ್ರೀ ಶಿವಪ್ಪ** – ನಿಖರವಾದ ಕಾರಣ ಏನು? ವಿನ್ಯಾಸದಲ್ಲಿನ ಬದಲಾವಣೆಯಿಂದಾಗಿ ಅಥವಾ ಕಬ್ಬಿಣ, ಉಕ್ಕು ಮತ್ತು ಸಿಮೆಂಟ್‌ನ ಪೂರೈಕೆಗಾಗಿಯೇ? ಎಷ್ಟು ವಿಳಂಬವಾಯಿತು?

**ಶ್ರೀ ಮೊಹಮದ್ ಅಲಿ** – ಈ ಎರಡು ಕಾರಣಗಳಿಂದ ಸುಮಾರು ಎರಡು ವರ್ಷ ವಿಳಂಬವಾಯಿತು.

**ಶ್ರೀ ಹೆಚ್.ಎನ್‌ನಂಜೇಗೌಡ** – ಗುತ್ತಿಗೆಯನ್ನು ವಹಿಸಿಕೊಡುವಾಗ ಗುತ್ತಿಗೆದಾರರಿಗೆ ಕಬ್ಬಿಣ, ಉಕ್ಕು ಮತ್ತು ಸಿಮೆಂಟನ್ನು ಪೂರೈಸುವುದಕ್ಕೆ ಸರ್ಕಾರ ಅಥವಾ ಇಲಾಖೆ ಒಪ್ಪಿಕೊಂಡಿತ್ತೇ? ಹಾಗೆ ಅವರು ಒಪ್ಪಿಕೊಳ್ಳದಿದ್ದರೆ ಈ ಸಾಮಗ್ರಿಗಳನ್ನು ಕೇಳುವ ಧೈರ್ಯ ಗುತ್ತಿಗೆದಾರನಿಗೆ ಹೇಗೆ ಬಂತು? ತರುವಾಯ ಒಪ್ಪಂದ ಪತ್ರದಲ್ಲಿ ಯಾವುದಾದರೂ ಪರಿಷ್ಕರಣೆ ಮಾಡಲಾಗಿತ್ತೇ ಎಂಬುದನ್ನು ನನಗೆ ತಿಳಿಸುತ್ತೀರಾ?

**ಶ್ರೀ ಮೊಹಮದ್ ಅಲಿ** – ಅದು ಗುತ್ತಿಗೆದಾರ ಮತ್ತು ರಸ್ತೆ ಸಾರಿಗೆ ನಿಗಮದನಡುವಿನ ವಿವಾದ

**ಶ್ರೀ ಹೆಚ್. ಸಿದ್ಧವೀರಪ್ಪ** – ವಿವಾದ ಹೇಗೆ ಹುಟ್ಟಿಕೊಂಡಿತು? ಸರ್ಕಾರವು ಮಾಡಿಕೊಂಡ ಕರಾರು ಕಬ್ಬಿಣ, ಉಕ್ಕು ಮತ್ತು ಸಿಮೆಂಟ್‌ನಂತಹ ಹಲವಾರು ವಸ್ತುಗಳನ್ನು ಒದಗಿಸುವಂತೆ ತಗಾದೆ ಮಾಡುವುದಕ್ಕೆ ಆತನಿಗೆ ಅವಕಾಶ ಮಾಡಿಕೊಡುವ ಹಾಗೆ ಸಂದಿಗ್ಧತೆಯಿಂದ ಕೂಡಿತ್ತೇ?

**ಶ್ರೀ ಮೊಹಮದ್ ಅಲಿ** – ಗುತ್ತಿಗೆದಾರ ಆ ರೀತಿ ಅರ್ಥೈಸುವುದಕ್ಕೆ ಯಾವುದೇ ಅವಕಾಶ ಇಲ್ಲ.

**ಶ್ರೀ ಹೆಚ್. ಸಿದ್ಧವೀರಪ್ಪ** – ಅಂತಹ ಸಂದಿಗ್ಧ ಕರಾರನ್ನು ಮಾಡಿಕೊಳ್ಳುವುದಕ್ಕೆ ಕಾರಣ ಯಾರು? ಅದನ್ನು ಸರ್ಕಾರ ಪರಿಶೀಲಿಸಿದೆಯೇ?

**ಶ್ರೀ ಮೊಹಮದ್ ಅಲಿ** – ಅದನ್ನು ಪರಿಶೀಲಿಸಲಾಗುತ್ತಿದೆ.

**ಶ್ರೀ ಎನ್. ಹುಚ್ಚಮಾಸ್ತಿಗೌಡ** – ಡಿಜೈನ್ ಬದಲಾವಣೆ ಮಾಡಬೇಕು ಎಂದು ಹೇಳಿದ್ದು ಆ ಕಂಟ್ರಾಕ್ಟರ್‌ಗೆ ಹೆಚ್ಚು ರೇಟನ್ನು ಕೊಡಬೇಕು ಎನ್ನುವ ಉದ್ದೇಶದಿಂದ ಅಲ್ಲವೆ?

**ಶ್ರೀ ಮೊಹಮದ್ ಅಲಿ** – ಆದರೆ, ನಾವು ಹೆಚ್ಚಿಸಿದ ದರಗಳನ್ನು ನೀಡಿಲ್ಲ.

**ಶ್ರೀ ಎಸ್. ಶಿವಪ್ಪ** – ಮೂಲ ಅಂದಾಜು ಎಷ್ಟು ಮತ್ತು ಪರಿಷ್ಕೃತ ಅಂದಾಜು ಎಷ್ಟು?

**ಶ್ರೀ ಮೊಹಮದ್ ಅಲಿ** – ನಾವು 2 ಡಿಪೋಗಳಿಗೆ ಮೇಲ್‌ಛಾವಣಿ ಹಾಕಲು ಬಯಸಿದ್ದೆವು. ಈಗ ಅದನ್ನು ಬದಲಾಯಿಸಲಾಗಿದೆ. ಪಕ್ಕ ಆರ್.ಸಿಸಿ.ಛಾವಣಿ ಹಾಕಲು ಮತ್ತು ಮೊದಲ ಮಹಡಿ ಕಟ್ಟಲು ನಾವು ಬಯಸಿದ್ದೇವೆ.

**ಶ್ರೀ ಎಸ್. ಶಿವಪ್ಪ** – ಈ ಬದಲಾವಣೆಯಿಂದ ವೆಚ್ಚದಲ್ಲಾಗುವ ಬದಲಾವಣೆ ಏನು? ಮೂಲ ವೆಚ್ಚ ಎಷ್ಟು ಮತ್ತು ಪರಿಷ್ಕೃತ ಅಂದಾಜು ವೆಚ್ಚ ಎಷ್ಟು?

**ಶ್ರೀ ಮೊಹಮದ್ ಅಲಿ** – ಈ ಕ್ಷಣಕ್ಕೆ ಆ ಮಾಹಿತಿ ನನ್ನಲ್ಲಿಲ್ಲ, ಸ್ವಾಮಿ.

**ಶ್ರೀ ಹೆಚ್.ಸಿದ್ಧವೀರಪ್ಪ** – ಸ್ವಾಮಿ, ಈ ಜಾಗ ಈಗಾಗಲೇ 2 ಅಮೂಲ್ಯ ಜೀವಗಳನ್ನು ಬಲಿತೆಗೆದುಕೊಂಡಿದೆ. ಈ ಕೆಲಸ ಪೂರ್ಣಗೊಳ್ಳುವ ಮೊದಲು ಇನ್ನೆಷ್ಟು ಜೀವಗಳು ಬಲಿಯಾಗುತ್ತವೆಯೋ

**ಶ್ರೀ ಮೊಹಮದ್ ಅಲಿ** – ಇದು ಯಾವುದೇ ಜೀವಗಳನ್ನು ಬಲಿತೆಗೆದುಕೊಳ್ಳುತ್ತದೆ ಎಂದು ನನಗೆ ಅನ್ನಿಸುವುದಿಲ್ಲ.

**ಶ್ರೀ ಹೆಚ್.ಎನ್‌ನಂಜೇಗೌಡ** – ಮೂಲ ಅಂದಾಜಿನ ಮೊತ್ತ ಎಷ್ಟು ಮತ್ತು ಗುತ್ತಿಗೆದಾರರು ಟೆಂಡರ್‌ನಲ್ಲಿ ಸೂಚಿಸಿರುವ ಮೊತ್ತ ಎಷ್ಟು?

**ಶ್ರೀ ಮೊಹಮದ್ ಅಲಿ** – 2 ಡಿಪೋಗಳು ಮತ್ತು ಪಾರ್ಕಿಂಗ್ ಮುಂತಾದವುಗಳ ಅಂದಾಜು ವೆಚ್ಚ 30,73,000/– ರೂಪಾಯಿಗಳು. ಪರಿಷ್ಕೃತ ಅಂದಾಜಿಗೆ ಸಂಬಂಧಿಸಿದಂತೆ ಹೇಳುವುದಾದರೆ ಈ ಕೆಲಸವನ್ನು ಯಾರಿಗೂ ನೀಡಿಲ್ಲ ಇದನ್ನು ಇನ್ನೂ ತೀರ್ಮಾನಿಸಿಲ್ಲ.

**ಶ್ರೀ ಎಸ್. ಶಿವಪ್ಪ** – ವಿನ್ಯಾಸದಿಂದಾಗಿ ವಿವಾದ ಹುಟ್ಟಿಕೊಂಡಿತು ಎಂದು ಸಚಿವರು ಹೇಳಿದರು.

**ಶ್ರೀ ಮೊಹಮದ್ ಅಲಿ** – ಪರಿಷ್ಕೃತ ವಿನ್ಯಾಸದ ಕಾರಣದಿಂದಾಗಿ ವಿಳಂಬವಾಯಿತು ಎಂದು ನಾನು ಹೇಳಿದೆ.

**ಶ್ರೀ ಎಸ್. ಶಿವಪ್ಪ** – ಅದರ ಅರ್ಥ ಹೊಸ ವಿನ್ಯಾಸ ಇದೆ ಎಂದು. ಹೊಸ ವಿನ್ಯಾಸದ ಅಂದಾಜು ವೆಚ್ಚವನ್ನು ನಾವು ತಿಳಿಯಬಯಸುತ್ತೇವೆ.

**ಶ್ರೀ ಮೊಹಮದ್ ಅಲಿ** – ಆ ಅಂಕಿ ಅಂಶ ನನ್ನ ಬಳಿ ಇಲ್ಲ ಹಾಗೂ ವಿನ್ಯಾಸದ ಮತ್ತು ಹೊಸ ಅಂದಾಜಿನ ಪ್ರಕಾರ ಕೆಲಸವನ್ನು ನೀಡಿಲ್ಲ.

**ಶ್ರೀ ಎಸ್. ಶಿವಪ್ಪ** – ಅಂದರೆ ಕಟ್ಟಡದ ಕೆಲಸ ಈಗಲೂ ನೆನೆಗುದಿಗೆ ಬಿದ್ದಿದೆ. ಯಾವಾಗ ಕೆಲಸವನ್ನು ಕೈಗೆತ್ತಿಕೊಳ್ಳುತ್ತೀರಿ ಎಂಬುದನ್ನು ತಿಳಿಸುತ್ತೀರಾ?

**ಶ್ರೀ ಮೊಹಮದ್ ಅಲಿ** – ಮೂಲ ಅಂದಾಜಿನ ಪ್ರಕಾರ ಕೆಲಸ ಪ್ರಗತಿಯಲ್ಲಿದೆ.

**ಶ್ರೀ ಎಂ.ಎಸ್.ಕೃಷ್ಣನ್** – ಕಟ್ಟಡ ಪಾರ್ಕಿಂಗ್ ಮುಂತಾದವುಗಳಿಗಾಗಿ ಈ ಹಣದ ಪೈಕಿ ಇಡೀ ಹಣವನ್ನು ಗುತ್ತಿಗೆದಾರನಿಗೆ ಪಾವತಿಸಲಾಗಿದೆಯೇ, ಪಾವತಿಸಿದರೆ, ನೀವು ಮಾಡಿಕೊಂಡಿರುವ ಕರಾರಿನ ನಿಬಂಧನೆಗಳಿಗೆ ಇದು ಅನುಸಾರವಾಗಿದೆಯೇ?

**ಶ್ರೀ ಮೊಹಮದ್ ಅಲಿ** – ಸರಿ ಸ್ವಾಮಿ, ಗುತ್ತಿಗೆದಾರನಿಗೆ ಹಣ ಪಾವತಿ ಮಾಡಲಾಗಿದೆ.

**ಶ್ರೀ ಎನ್. ಹುಚ್ಚಮಾಸ್ತಿಗೌಡ** – ಡಿಸೈನ್ ಬದಲಾವಣೆ ಮಾಡಬೇಕಾದ್ದರಿಂದ ಕೆಲಸ ನಿಧಾನವಾಗುತ್ತಿದೆಯೆಂದು ಹೇಳಿದಿರಿ. ಈಗ ಹಿಂದಿನ ಎಸ್ಟಿಮೇಟ್ ಪ್ರಕಾರ ಕೆಲಸನಡೆಯುತ್ತಿದೆಯೆಂದು ಹೇಳಿದರೆ ಒಂದಕ್ಕೊಂದು ಸಮಂಜಸವಾಗುವುದಿಲ್ಲ. ಹೊಸ ಡಿಸೈನ್ ತಯಾರಾಗುತ್ತಿದ್ದರೆ ಹಿಂದಿನ ಡಿಸೈನ್ ಪ್ರಕಾರ ಈಗ ಕೆಲಸನಡೆಯುತ್ತಿದೆ ಎಂದು ಹೇಳುತ್ತಿರುವುದು ಉದ್ದೇಶವಾದರೂ ಏನು?

**ಶ್ರೀ ಮೊಹಮದ್ ಅಲಿ** – ಸ್ಥಳವನ್ನು ಉತ್ತಮವಾಗಿ ಉಪಯೋಗಿಸಿಕೊಳ್ಳುವುದಕ್ಕಾಗಿ ವಿನ್ಯಾಸದಲ್ಲಿ ಬದಲಾವಣೆ ಮಾಡಲಾಗಿದೆ ಎಂದು ನಾನು ಹೇಳಿದೆ. ವಿನ್ಯಾಸವನ್ನು ಪರಿಷ್ಕರಿಸಿ ಮೊದಲ ಮಹಡಿ ನಿರ್ಮಿಸಲು ನಿಗಮವು ಅಪೇಕ್ಷೆ ಪಟ್ಟಿದೆ.

**ಶ್ರೀ ಎಚ್.ಬಿ. ಜ್ವಾಲನಯ್ಯ** – ಹೊಸ ಡಿಸೈನ್ ಪ್ರಕಾರ ಹೊಸ ಕಾಂಟ್ರಾಕ್ಟರ್ ಗಳಿಗೆ ಕೆಲಸ ವಹಿಸುತ್ತಿರೋ ಅಥವಾ ಹಳೆಯ ಕಂಟ್ರಾಕ್ಟರ್ ಕೈಯಲ್ಲಿಯೇ ಕೆಲಸ ಮಾಡಿಸುತ್ತಿರೋ?

**ಶ್ರೀ ಮೊಹಮದ್ ಅಲಿ** – ನಿಯಮದ ಪ್ರಕಾರ ನಾವು ಕ್ರಮ ಕೈಗೊಳ್ಳುತ್ತೇವೆ.

**ಶ್ರೀ ಎಸ್.ಶಿವಪ್ಪ** – ಬದಲಾವಣೆ ಏನು ಮತ್ತು ಹೊಸ ಡಿಸೈನ್‌ನ ಖರ್ಚು ಎಷ್ಟು ಎಂದು ನಾನು ತಿಳಿಯಬಯಸುತ್ತೇನೆ. ಡಿಸೈನ್‌ನಲ್ಲಿ ಬದಲಾವಣೆಯಿಂದಾಗಿ ಕೆಲಸ ಸ್ಥಗಿತಗೊಂಡಿತು ಎಂದು ಸರ್ಕಾರದವರು ಉತ್ತರಿಸಿದ್ದಾರೆ. ಈಗ ಸಚಿವರು ಬೇರೊಂದು ರೀತಿ ಹೇಳುತ್ತಿದ್ದಾರೆ. ಅವರು ಹಳೇ ಡಿಸೈನ್ ಪ್ರಕಾರ ಕೆಲಸ ಮುಂದುವರಿಸಲಾಗುತ್ತಿದೆ ಎಂದು ಹೇಳುತ್ತಾರೆ. ಇವುಗಳಲ್ಲಿ ಯಾವುದು ಸರಿ. ಹಳೆ ಡಿಸೈನ್ ಪ್ರಕಾರ ಕೆಲಸ ಮುಂದುವರೆಯುತ್ತಿದೆಯೇ ಅಥವಾ ಕೆಲಸವನ್ನು ಸ್ಥಗಿತಗೊಳಿಸಲಾಗಿದೆಯೇ?

**ಶ್ರೀ ಮೊಹಮದ್ ಅಲಿ** – ಗುತ್ತಿಗೆದಾರನೊಂದಿಗಿನ ವಿವಾದದಿಂದಾಗಿ ಕೆಲಸವನ್ನು ಸ್ಥಗಿತಗೊಳಿಸಲಾಗಿತ್ತು ಮತ್ತು ಇತ್ತೀಚೆಗೆ ಡಿಸೈನನ್ನು ಪರಿಷ್ಕರಿಸುವ ವಿಷಯವನ್ನು ನಿಗಮವು ಕೈಗೆತ್ತಿಕೊಂಡಿದೆ.

**ಶ್ರೀ ಎಸ್.ಶಿವಪ್ಪ** – ಡಿಸೈನನ್ನು ಪರಿಷ್ಕರಿಸಿದನಂತರ ಅಥವಾ ಹಳೆ ಡಿಸೈನ್ ಪ್ರಕಾರ ನೀವು ಕೆಲಸವನ್ನು ಕೈಗೊಂಡಿದ್ದೀರಾ ಎಂಬುದನ್ನು ತಿಳಿಸಿ?

**ಶ್ರೀ ಮೊಹಮದ್ ಅಲಿ** – ಹಳೆ ವಿನ್ಯಾಸದ ಪ್ರಕಾರ ಕೆಲಸ ಪ್ರಗತಿಯಲ್ಲಿದೆ.

**ಶ್ರೀ ಎಸ್.ಶಿವಪ್ಪ** – ಅಂದ ಮೇಲೆ ಡಿಸೈನ್ ಬದಲಾವಣೆಯ ಪ್ರಶ್ನೆ ಹೇಗೆ ಉದ್ಭವಿಸುತ್ತದೆ.

**ಶ್ರೀ ಮೊಹಮದ್ ಅಲಿ** – ಡಿಸೈನ್‌ನಲ್ಲಿ ಬದಲಾವಣೆ ಮಾಡುವ ವಿಷಯ ನಿಗಮದ ಕ್ರಿಯಾಶೀಲ ಪರಿಗಣೆಯಲ್ಲಿದೆ.

**ಶ್ರೀ ಎಸ್.ಶಿವಪ್ಪ** – ಕಂಟ್ರಾಕ್ಟರ್ ಯಾರು?

**ಶ್ರೀ ಮೊಹಮದ್ ಅಲಿ** – ಅವರ ಹೆಸರು ನನ್ನ ಬಳಿ ಇಲ್ಲ.

**ಶ್ರೀ ಹೆಚ್.ಎನ್.ನಂಜೇಗೌಡ** – ಡಿಸೈನ್‌ನಲ್ಲಿ ಬದಲಾವಣೆಯಿಂದಾಗಿ ಕೆಲಸ ಸ್ಥಗಿತಗೊಂಡಿತ್ತು ಎಂಬ ತೀರ್ಮಾನಕ್ಕೆ ನಾವು ಬರಬಹುದೆ?

**ಸನ್ಮಾನ್ಯ ಉಪ ಸಭಾಧ್ಯಕ್ಷರು** – ಅದು ವಿವಾದಕ್ಕೆ ಒಳಗಾಗಿತ್ತು ಎಂದು ಅವರು ಹೇಳಿದರು.

**ಶ್ರೀ ಹೆಚ್.ಎನ್.ನಂಜೇಗೌಡ** – ಏಕೈಕ ಕಾರಣವೆಂದರೆ ಕಂಟ್ರಾಕ್ಟರ್‌ನೊಂದಿಗಿನ ವಿವಾದ. ನಾವು ಹಾಗೆ ಭಾವಿಸಬಹುದೇ? ಅದು ಒಂದೇ ಕಾರಣವೇ?

**ಶ್ರೀ ಮೊಹಮದ್ ಅಲಿ** – ಮಾನ್ಯ ಸದಸ್ಯರು ತಮಗೆ ಹೇಗೆ ಬೇಕೋ ಹಾಗೆ ಭಾವಿಸಿಕೊಳ್ಳಬಹುದು.

**ಶ್ರೀ ಎಸ್.ಶಿವಪ್ಪ** – ಡಿಸೈನ್‌ನಲ್ಲಿ ಬದಲಾವಣೆಯಿಂದಾಗಿ ಕೆಲಸವನ್ನು ಸ್ಥಗಿತಗೊಳಿಸಲಾಗಿತ್ತು ಎಂಬುದು ಉತ್ತರದಿಂದ ಸ್ಪಷ್ಟವಾಗುತ್ತದೆ. ಈಗ ನೀವು ಹೇಳುತ್ತಾ ಇದ್ದೀರಿ ಹಳೆಯ ಡಿಸೈನ್ ಪ್ರಕಾರ ಕೆಲಸವನ್ನು ಮತ್ತೆ ಪ್ರಾರಂಭಿಸಲಾಗಿದೆ ಎಂದು

**ಸನ್ಮಾನ್ಯ ಉಪ ಸಭಾಧ್ಯಕ್ಷರು – ಅದು** ವಿವಾದಕ್ಕೆ ಒಳಗಾಗಿದೆ ಮತ್ತು ಅದೇ ಸಮಯದಲ್ಲಿ ಸರ್ಕಾರ ವಿನ್ಯಾಸದಲ್ಲಿ ಬದಲಾವಣೆ ಮಾಡುವ ವಿಷಯವನ್ನು ಪರಿಶೀಲಿಸುತ್ತಿದೆ ಎಂದು ಅವರು ಹೇಳಿದರು.

**ಶ್ರೀ ಹೆಚ್.** ಸಿದ್ಧವೀರಪ್ಪ – ಕಂಟ್ರಾಕ್ಟರ್‌ನೊಂದಿಗಿನ ವಿವಾದವು ಬಗೆ ಹರಿದಿದೆಯೇ ಮತ್ತು ಕಬ್ಬಿಣ, ಉಕ್ಕು ಮತ್ತು ಸಿಮೆಂಟನ್ನು ಒಪ್ಪಂದದ ಪ್ರಕಾರ ಪೂರೈಸಲು ನಿಗಮವು ನಿರ್ಧರಿಸಿದೆಯೇ.

**ಸನ್ಮಾನ್ಯ ಸಭಾಧ್ಯಕ್ಷರು**– ಈ ಪ್ರಶ್ನೆ ಈಗ ಮುಕ್ತಾಯ ಗೊಂಡಿದೆ.

## ಅಂತರ ರಾಜ್ಯ ಬಸ್ಸುಗಳು

**ಶ್ರೀ ಡಿ.ಬಿ. ಕಲ್ಮಣ್‌ಕರ್ (ಆಳಂದ)** – ಮಾನ್ಯ ಸಾರಿಗೆ ಸಚಿವರು ದಯವಿಟ್ಟು ಇದನ್ನು ತಿಳಿಸುವರೆ –

(ಎ) ಸರ್ಕಾರದವರು ಗುಲ್ಬರ್ಗ ಜಿಲ್ಲೆಯಲ್ಲಿ ಮೈಸೂರು ಮಹಾರಾಷ್ಟ್ರ ಗಡಿಯಲ್ಲಿ ಅಂತರ ರಾಜ್ಯ ಬಸ್ಸುಗಳನ್ನು ಓಡಿಸಲು ನಿರ್ಧರಿಸಿದ್ದಾರೆಯೇ? ಮತ್ತು ಹಾಗಿದ್ದರೆ ಅವರು ಅದಕ್ಕೆ ಮಂಜೂರಾತಿ ನೀಡಿದ್ದಾರೆಯೇ;

(ಬಿ) ಇಲ್ಲದಿದ್ದರೆ, ಅದನ್ನು ಪ್ರಾರಂಭಿಸಲು ತ್ವರಿತ ಕ್ರಮಗಳನ್ನು ಸರ್ಕಾರದವರು ತೆಗೆದುಕೊಳ್ಳುತ್ತಾರೆಯೆ?

**ಶ್ರೀ ಮೊಹಮದ್ ಅಲಿ** – (ಸಾರಿಗೆ ಸಚಿವರು)

(ಎ) ಹೌದು. ಗುಲ್ಬರ್ಗ ಜಿಲ್ಲೆಯಲ್ಲಿ ಮೈಸೂರು ಮಹಾರಾಷ್ಟ್ರ ಗಡಿಯಲ್ಲಿ ಅಂತರ್ ರಾಜ್ಯ ಬಸ್ಸುಗಳನ್ನು ಓಡಿಸಲು ಸರ್ಕಾರ ನಿರ್ಧರಿಸಿದೆ. ಯಾವುದೇ ಪರ್ಮಿಟ್ಟುಗಳನ್ನು ಇನ್ನೂ ಮಂಜೂರು ಮಾಡಿಲ್ಲ.

(ಬಿ) ಹೌದು.

ರಿಯಾಯಿತಿ ಬಾಡಿಗೆ ಗೃಹ ನಿರ್ಮಾಣ ಯೋಜನೆ ಅಡಿಯಲ್ಲಿ 14 ಮನೆಗಳ ನಿರ್ಮಾಣ ಕಾರ್ಯಕ್ಕೆ ಸಂಬಂಧಿಸಿದ ಅಂದಾಜನ್ನು 1968ರ ಜನವರಿಯಲ್ಲಿ ಮಂಜೂರು ಮಾಡಲಾಗಿದೆ.

(ಸಿ) ಈ ತನಕ ನಿರ್ಮಾಣ ಮಾಡಿರುವ ಮನೆಗಳ ಸಂಖ್ಯೆ – ಇಲ್ಲ

ನಾಲ್ಕನೆ ಬಾರಿಗೆ ಟೆಂಡರ್‌ಗಳನ್ನು ಕರೆಯಲಾಯಿತು. ಹೆಚ್ಚಿನ ಟೆಂಡರ್ ಶೇಖಡಾವಾರಿನಿಂದ ಕೂಡಿದ ಪ್ರತಿಕ್ರಿಯೆ ನೀರಸವಾಗಿದ್ದುದರಿಂದ, ಅವುಗಳನ್ನು ಅಂಗೀಕರಿಸಲಾಗಲಿಲ್ಲ.

(ಡಿ) ಗೃಹ ನಿರ್ಮಾಣ ಮಂಡಳಿಯು ಕಾಮಗಾರಿ ಅನುಷ್ಠಾನಕ್ಕಾಗಿ ಏಜೆನ್ಸಿ ಗೊತ್ತುಪಡಿಸಲು ಸ್ಥಳೀಯ ಲೋಕೋಪಯೋಗಿ ಇಲಾಖೆಯನ್ನು ಸಂಪರ್ಕಿಸುತ್ತಿದೆ.

## ಕೆ.ಆರ್.ನಗರದಲ್ಲಿ ಮನೆಗಳ ನಿರ್ಮಾಣ

**ಶ್ರೀ ಎಂ.ಬಸವರಾಜು (ಕೆ.ಆರ್.ನಗರ) – ಸಾರಿಗೆ ಸಚಿವರು ದಯವಿಟ್ಟು ಇದನ್ನು ತಿಳಿಸುವರೆ –**

(ಎ) ಕೆ.ಆರ್.ನಗರ ತಾಲೂಕಿನಲ್ಲಿ ಮೈಸೂರು ಗೃಹ ನಿರ್ಮಾಣ ಮಂಡಳಿಯವರು ನಿರ್ಮಾಣ ಮಾಡಲು ಉದ್ದೇಶಿಸಿರುವ ಮನೆಗಳ ಸಂಖ್ಯೆ;

(ಬಿ) ಪ್ರಸ್ತಾವವನ್ನು ಮಂಜೂರು ಮಾಡಿದ್ದು ಯಾವಾಗ;

(ಸಿ) ಈ ವರೆಗೆ ಪೂರ್ಣಗೊಂಡಿರುವ ಮನೆಗಳ ಸಂಖ್ಯೆ, ಇತರ ಮನೆಗಳ ಸಂಬಂಧದಲ್ಲಿ ಕೆಲಸವನ್ನು ಪ್ರಾರಂಭಿಸಲು ಮಂಡಳಿ ಏಕೆ ವಿಫಲವಾಗಿದೆ;

(ಡಿ) ಕೆ.ಆರ್.ನಗರ ತಾಲೂಕಿನಲ್ಲಿ ಮಂಡಳಿಯವರಿಂದ ಮನೆಗಳ ನಿಮರ್ಸಾಣವನ್ನು ತ್ವರಿತಗೊಳಿಸಲು ಸರ್ಕಾರದವರು ತೆಗೆದುಕೊಳ್ಳಲು ಉದ್ದೇಶಿಸಿರುವ ಕ್ರಮಗಳು?

**ಶ್ರೀ ಮೊಹಮದ್ ಅಲಿ** – (ಸಾರಿಗೆ ಸಚಿವರು)

(ಎ) ಕೆಲಸಗಳ ಕಾರ್ಯಕ್ರಮದ ಪ್ರಕಾರ ಕೆ.ಆರ್.ನಗರ ತಾಲೂಕಿನಲ್ಲಿ ಈ ಮುಂದಿನ ಕೆಲಸಗಳನ್ನು ಕೈಗೊಳ್ಳಲು ಉದ್ದೇಶಿಸಲಾಗಿದೆ –

1. ಕೆ.ಆರ್.ನಗರ ಪಟ್ಟಣ – ಮಧ್ಯಮ ಆದಾಯ ಗುಂಪಿನ ಗೃಹ ನಿರ್ಮಾಣ ಯೋಜನೆಯ ಅಡಿಯಲ್ಲಿ 6 ಕಟ್ಟಡಗಳು, ಕಡಿಮೆ ಆದಾಯ ಗುಂಪಿನ ಗೃಹ ನಿರ್ಮಾಣ ಯೋಜನೆಯ ಅಡಿಯಲ್ಲಿ 37 ಕಟ್ಟಡಗಳು ಮತ್ತು ರಿಯಾಯಿತಿ ಬಾಡಿಗೆ ಗೃಹ ನಿರ್ಮಾಣ ಯೋಜನೆಯ ಅಡಿಯಲ್ಲಿ 40 ಜೋಡಿ ಮನೆಗಳು.

2. ಸಾಲಿಗ್ರಾಮ ಪಟ್ಟಣ – ರಿಯಾಯಿತಿ ಬಾಡಿಗೆ ಯೋಜನೆ ಅಡಿಯಲ್ಲಿ 14 ಜೋಡಿ ಮನೆಗಳು.

3. ಮಿರ್ಲೆ – ಕಡಿಮೆ ಆದಾಯ ಗೃಹ ನಿರ್ಮಾಣ ಯೋಜನೆ ಅಡಿಯಲ್ಲಿ 3 ಕಟ್ಟಡಗಳು, ರಿಯಾಯಿತಿ ಬಾಡಿಗೆ ಗೃಹ ನಿರ್ಮಾಣ ಯೋಜನೆಗಳಡಿಯಲ್ಲಿ 14 ಮನೆಗಳು.

(ಬಿ) **1. ಕೆ.ಆರ್.ನಗರ ಪಟ್ಟಣ** – ಮಧ್ಯಮ ಆದಾಯ ಗುಂಪಿನ ಅಡಿಯಲ್ಲಿ 6 ಕಟ್ಟಡಗಳ ಅಂದಾಜನ್ನು 1965ರ ಜೂನ್‌ನಲ್ಲಿ ಮಂಜೂರು ಮಾಡಲಾಗಿದೆ. ಕಡಿಮೆ ಆದಾಯ ಗುಂಪಿನ ಗೃಹ ನಿರ್ಮಾಣ ಯೋಜನೆಯಡಿಯಲ್ಲಿ 22 ಕಟ್ಟಡಗಳ ಅಂದಾಜನ್ನು 1966ರ ಜನವರಿಯಲ್ಲಿ ಮತ್ತು ಕಡಿಮೆ ಆದಾಯ ಗುಂಪಿನ ಅಡಿಯಲ್ಲಿ 15 ಕಟ್ಟಡಗಳ ಅಂದಾಜನ್ನು 1965ರನವೆಂಬರ್‌ನಲ್ಲಿ ಮಂಜೂರು ಮಾಡಲಾಗಿದೆ. ರಿಯಾಯಿತಿ ಬಾಡಿಗೆ ಗೃಹ ನಿರ್ಮಾಣ ಯೋಜನೆಯಡಿಯಲ್ಲಿ 24 ಜೋಡಿ ಮನೆಗಳ ಅಂದಾಜನ್ನು, 1965ರನವೆಂಬರ್‌ನಲ್ಲಿ ಉಳಿದ 8 ಜೋಡಿ ಮನೆಗಳ ಅಂದಾಜನ್ನು 1966ರ ಫೆಬ್ರವರಿಯಲ್ಲಿ ಮಂಜೂರು ಮಾಡಲಾಗಿದೆ.

2. ಸಾಲಿಗ್ರಾಮ ಪಟ್ಟಣ– ರಿಯಾಯಿತಿ ಬಾಡಿಗೆ ಗೃಹ ನಿರ್ಮಾಣ ಯೋಜನೆಯಡಿಯಲ್ಲಿ 14 ಜೋಡಿ ಮನೆಗಳ ನಿರ್ಮಾಣದ ಅಂದಾಜನ್ನು 1968ರ ಜನವರಿಯಲ್ಲಿ ಮಂಜೂರು ಮಾಡಲಾಗಿದೆ.

3. ಮಿರ್ಲೆ – ಕಡಿಮೆ ಆದಾಯ ಗುಂಪಿನ ಅಡಿಯಲ್ಲಿ 3 ಕಟ್ಟಡಗಳ ನಿರ್ಮಾಣ ಕೆಲಸದ ಅಂದಾಜನ್ನು 1968ರ ಜನವರಿಯಲ್ಲಿ ಮಂಜೂರು ಮಾಡಲಾಗಿದೆ.

## ರಾಯಚೂರಿನಲ್ಲಿ ಆರ್.ಟಿ.ಡಿ ವಿಭಾಗೀಯ ಕಚೇರಿ

**ಶ್ರೀ ಎನ್. ನಾಗಪ್ಪ (ರಾಯಚೂರು)** ವಾರ್ತಾ ಮತ್ತು ಪ್ರಚಾರ, ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಇದನ್ನು ತಿಳಿಸುವರೆ –

(ಎ) ರಾಯಚೂರಿನಲ್ಲಿ ಆರ್.ಟಿ.ಡಿ. ವಿಭಾಗೀಯ ಕಚೇರಿಯನ್ನು ತೆರೆಯುವುದಕ್ಕೆ ಯಾವುದಾದರೂ ಯೋಜನೆ ಹಾಕಿಕೊಳ್ಳಲಾಗಿದೆಯೆ;

(ಬಿ) ರಾಯಚೂರಿನಲ್ಲಿ ವಿಭಾಗೀಯ ಕಚೇರಿಯೊಂದಿಗೆ ವಿಭಾಗೀಯ ಕಾರ್ಯಾಗಾರವನ್ನು ತೆರೆಯಲಾಗುತ್ತಿದೆಯೆ;

(ಸಿ) ಈ ಯೋಜನೆ ಯಾವಾಗ ಕಾರ್ಯರೂಪಕ್ಕೆ ಬರುತ್ತದೆ?

**ಶ್ರೀ ಮೊಹಮದ್ ಅಲಿ** – (ವಾರ್ತಾ ಮತ್ತು ಪ್ರಚಾರ, ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)

(ಎ), (ಬಿ) ಮತ್ತು (ಸಿ) ಈ ವಿಷಯವು ಮೈಸೂರು ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಪರಿಶೀಲನೆಯಲ್ಲಿದೆ.

**ಶ್ರೀ ಎಂ.ನಾಗಪ್ಪ** – ಸ್ವಾಮಿ ನನ್ನ ಪ್ರಶ್ನೆಗೆ ಉತ್ತರವಾಗಿ ರಾಜ್ಯದ ರಸ್ತೆ ಸಾರಿಗೆ ಸಂಸ್ಥೆಯವರುಪರಿಶೀಲಿಸಿದ್ದಾರೆಂದು ಹೇಳಿದ್ದೀರಿ. ಅದರಂತೆ ಈ ಕೆಲಸ ಯಾವಾಗ ಕಾರ್ಯಗತವಾಗಬಹುದೆಂದು ಹೇಳುತ್ತೀರಾ?

**ಶ್ರೀ ಮೊಹಮದ್ ಅಲಿ** – ಈ ಸದನದ ಸದಸ್ಯರು ಒಂದು ತಿಂಗಳ ಹಿಂದೆ ಮನವಿಯನ್ನು ಸಲ್ಲಿಸಿದ್ದು, ಇಡೀ ವಿಷಯ ಪರಿಶೀಲನೆಯಲ್ಲಿದೆ.

**ಶ್ರೀ ಎಂ.ನಾಗಪ್ಪ**– ಮೊದಲು ಡಿವಿಜನಲ್ ಆಫೀಸ್ ರಾಯಚೂರಿನಲ್ಲಿ ಇತ್ತು ಅದಕ್ಕಾಗಿ ಇಲಾಖೆಯ ವಿಭಾಗ ಕಚೇರಿಯನ್ನು ಪ್ರಾರಂಭಿಸುವುದರಲ್ಲಿ ಯಾವ ತೊಂದರೆಯೂ ಇಲ್ಲವೆಂಬುದನ್ನು ಯೋಚನೆ ಮಾಡಿದ್ದೀರಾ?

**ಶ್ರೀ ಮೊಹಮದ್ ಅಲಿ** – ಸ್ವಾಮಿ ರಾಯಚೂರಿನಲ್ಲಿ ಡಿವಿಜನಲ್ ಆಫೀಸ್ ಇತ್ತು ಎಂಬುದು ನನಗೆ ಗೊತ್ತಿಲ್ಲ. ಆದರೆ ಪರಿಶೀಲನೆಯು ಆಡಳಿತಾತ್ಮಕ ಅನುಕೂಲ ಮತ್ತು ಕಾರ್ಯಾಚರಣೆ ಸಾಮರ್ಥ್ಯವನ್ನು ಅವಲಂಭಿಸಿದೆ.

**ಶ್ರೀ ಎಂ.ನಾಗಪ್ಪ** – ಬಳ್ಳಾರಿ ಮತ್ತು ಡಿವಿಜನ್‌ಗಳಿಗಿಂತ ರಾಯಚೂರು ಜಿಲ್ಲೆಯಿಂದ ಆದಾಯ ಬರುತ್ತಿದೆಯೆಂದು ಸರ್ಕಾರಕ್ಕೆ ಗೊತ್ತಿದೆಯೇ?

**ಶ್ರೀ ಮೊಹಮದ್ ಅಲಿ** – ಸ್ವಾಮಿ ಈ ವಿಷಯ ಆದಾಯಕ್ಕೆ ಸಂಬಂಧಪಡುವುದಿಲ್ಲ. ಆದ್ದರಿಂದ ರಾಯಚೂರು ಜಿಲ್ಲೆಯಿಂದ ನಮಗೆ ಎಷ್ಟು ಆದಾಯ ಬರುತ್ತಿದೆ ಎಂದು ಹೇಳುವುದು

ಕಷ್ಟ. ಆದರೆ ವಿಭಾಗದ ರಚನೆಯು ಯಾವ ಷೆಡ್ಯೂಲ್‌ಗಳನ್ನು ಆಧರಿಸಿದೆಯೋ ಆ ಷೆಡ್ಯೂಲ್‌ಗಳ ಸಂಖ್ಯೆಯನ್ನು ಇದು ಅವಲಂಬಿಸಿರುತ್ತದೆ.

**ಶ್ರೀ ಎಂ.ನಾಗಪ್ಪ** – ಗುಲ್ಬರ್ಗ ಡಿವಿಜನ್ ಯಾವಾಗ ಫಾರಂ ಆಯಿತು? ಅದು ಫಾರಂ ಆಗುವುದಕ್ಕೆ ಮೊದಲು ಎಲ್ಲಿತ್ತು ಎಂಬುದನ್ನು ಹೇಳುತ್ತೀರಾ?

**ಶ್ರೀ ಮೊಹಮದ್ ಅಲಿ** – ಅದೊಂದು ಹಳೆಯ ಕಥೆ. ಅದರ ಬಗ್ಗೆ ನನಗೆ ಗೊತ್ತಿಲ್ಲ. ಮಾನ್ಯ ಸದಸ್ಯರು ಪ್ರಶ್ನೆ ಕೇಳಿದರೆ ನಾನು ಉತ್ತರಿಸಬಲ್ಲೆ.

**ಶ್ರೀ ಎಂ. ನಾಗಪ್ಪ** – ಅದಕ್ಕಾಗಿ ಹೇಳುತ್ತಿರುವುದು, 10–12 ವರ್ಷಗಳ ಕೆಳಗೆ ರಾಯಚೂರಿನಲ್ಲಿಯೇ ಇತ್ತು. ಈಗ ಗುಲ್ಬರ್ಗಕ್ಕೆ ಷಿಫ್ಟ್ ಆಗಿದೆಯಲ್ಲವೆ ಎಂದು ಕೇಳಿದ್ದು?

**ಶ್ರೀ ಮೊಹಮದ್ ಅಲಿ** – ರಾಯಚೂರಿನಲ್ಲಿ ಈಗಾಗಲೇ ಡಿಪೋ ಇದೆ. ವಿಭಾಗವನ್ನು ರಚಿಸುವಂಥ ವಿಷಯ ಹಲವಾರು ಅಂಶಗಳನ್ನು ಆದರಿಸಿದ್ದು ಆ ಅಂಶಗಳನ್ನು ಪರಿಶೀಲಿಸಲಾಗುತ್ತಿದೆ.

**ಶ್ರೀ ಎಂ. ನಾಗಪ್ಪ** – ಕನಿಷ್ಠ ಈ ವರ್ಷದಲ್ಲಿಯಾದರೂ ಸಹ ರಾಯಚೂರಿನಲ್ಲಿ ವಿಭಾಗ ಕಚೇರಿಯನ್ನು ಮತ್ತು ವಿಭಾಗ ವರ್ಕ್ ಶಾಪನ್ನು ತೆರೆಯುವ ಬಗ್ಗೆ ಏರ್ಪಾಡು ಮಾಡುತ್ತೀರಾ?

## ಎಂ.ಎಸ್.ಆರ್.ಟಿ.ಸಿ ಬಸ್ ಡಿಪೋ ಲಿಂಗಸುಗೂರು

**ಶ್ರೀ ಕೆ.ಎಸ್. ಸಂಗನ ಗೌಡ (ಲಿಂಗಸುಗೂರು)**–ವಾರ್ತಾ ಮತ್ತು ಪ್ರಚಾರ, ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಇದನ್ನು ತಿಳಿಸುವರೆ –

(ಎ) ಮೈಸೂರು ರಾಜ್ಯ ರಸ್ತೆ ಸಾರಿಗೆ ನಿಗಮದ ಬಸ್ಸುಗಳು ರಾಯಚೂರು ಜಿಲ್ಲೆಯ ಲಿಂಗಸುಗೂರು ಬಸ್ ಡಿಪೋದಿಂದ ಅನುಸೂಚಿತ ವೇಳೆಯಲ್ಲಿ ಕಾಲಕ್ಕೆ ಸರಿಯಾಗಿ ಓಡುತ್ತಿವೆಯೆ;

(ಬಿ) 1965 – 66, 1966–67 ಮತ್ತು 1967–68ರಲ್ಲಿ ಸದರಿ ಡಿಪೋದಿಂದ ಆದ ಸರಾಸರಿ ದೈನಂದಿನ ಸಂಗ್ರಹ;

(ಸಿ) ರಸ್ತೆ ಬದಿ ಶೆಲ್ಟರ್‌ಗಳು, ಬಸ್ ನಿಲ್ದಾಣಗಳು ಮುಂತಾದಂಥ ಪ್ರಯಾಣಿಕರ ಸೌಕರ್ಯಗಳಿಗಾಗಿ ಯಾವುದಾದರೂ ಹಣ ಖರ್ಚು ಮಾಡಲಾಗಿದೆಯೇ; ಮಾಡಿದ್ದರೆ ಎಷ್ಟು ಮಾಡಲಾಗಿದೆ;–

(ಡಿ) ಪ್ರತಿ ವರ್ಷ ಬದಲಾಯಿಸಲಾದ ಹಳೆಯ ಬಸ್ಸುಗಳ ಸಂಖ್ಯೆ;

(ಇ) ಭಾರಿ ಜನ ಸಂಚಾರದ ಒತ್ತಡದಿಂದಾಗಿ ಬಸ್ಸುಗಳ ಸಂಖ್ಯೆಯನ್ನು ಹೆಚ್ಚಿಸಲು ಸರ್ಕಾರದವರು ಉದ್ದೇಶಿಸಿದ್ದಾರೆಯೇ?

**ಶ್ರೀ ಮೊಹಮದ್ ಅಲಿ** – (ವಾರ್ತಾ ಮತ್ತು ಪ್ರಚಾರ, ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)

(ಎ) ಬಸ್ಸುಗಳು ಬಿಡುವುದಕ್ಕೆ ಸಂಬಂಧಿಸಿದ ನಿಯತತೆಯ ಶೇಕಡಾ ಪ್ರಮಾಣ 91.03 ಮತ್ತು ಬಂದು ಸೇರುವುದಕ್ಕೆ ಸಂಬಂಧಿಸಿದ ಶೇಕಡ ಪ್ರಮಾಣ 89.5.

(ಬಿ)

| ಅವಧಿ | ಮೊಬಲಗು |
|---|---|
| | ರೂ. |
| 1965 – 66 | 5,431.00 |
| 1960 – 67 | 6,739.69 |
| 1967 – 68 | 7,251.04 |
| | (1968ರ ಜನವರಿಯವರೆಗೆ) |

(ಸಿ) ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲೂಕಿನಲ್ಲಿ ಬಸ್ ನಿಲ್ದಾಣಗಳ ನಿರ್ಮಾಣಕ್ಕೆ 23,400 ರೂಪಾಯಿ ಮೊತ್ತವನ್ನು ಖರ್ಚು ಮಾಡಲಾಗಿದೆ.

(ಡಿ) ಕಳೆದ ಮೂರು ವರ್ಷಗಳಲ್ಲಿ ಲಿಂಗಸುಗೂರು ಡಿಪೋನಲ್ಲಿ 31 ವಾಹನಗಳನ್ನು ಬದಲಾಯಿಸಲಾಗಿದೆ.

(ಇ) ಬಸ್ಸುಗಳಿಗಿರುವ ಬೇಡಿಕೆಯನ್ನು ಅನುಸರಿಸಿ ಹೆಚ್ಚಿನ ಬಸ್ಸುಗಳನ್ನು ಒದಗಿಸಲಾಗುವುದು.

**ಶ್ರೀ ಸಂಗನಗೌಡ** – ಈ ಪ್ರಶ್ನೆಗೆ ಒದಗಿಸಿದಂಥ ಉತ್ತರವನ್ನು ಸಮರ್ಥಿಸುವ ಸಲುವಾಗಿ ನೀವು ಕಂಟ್ರೋಲ್ ಚಾರ್ಟ್ ಮತ್ತು ಸಮಯ ಪಾಲನೆ ತಃಖ್ತೆಯನ್ನು ಪ್ರತೀ ದಿನ ಪರಿಶೀಲಿಸುತ್ತಿದ್ದೀರಾ?

**ಶ್ರೀ ಮೊಹಮದ್ ಅಲಿ** – ಪ್ರತಿ ದಿನ ಬಸ್ಸುಗಳು ಬಿಡುವ ಮತ್ತು ಬಂದು ಸೇರುವ ಸಮಯವನ್ನು ನಾವು ಗುರುತು ಮಾಡಿಕೊಳ್ಳುತ್ತೇವೆ. ಅದರ ಆಧಾರದ ಮೇಲೆ ಸಮಯ ಪಾಲನೆಯ ಶೇಕಡ ಪ್ರಮಾಣವನ್ನು ಲೆಕ್ಕ ಹಾಕುತ್ತೇವೆ.

**ಶ್ರೀ ಹೆಚ್.ಬಿ. ಜ್ವಾಲನಯ್ಯ** – ಡಿಪಿ ಸಿಯೇಷನ್ ಪ್ರತಿ ವರ್ಷ ಶೇಕಡಾ 20 ರಂತೆ ಲೆಕ್ಕ ಹಾಕಿ 5 ವರ್ಷವಾದ ಮೇಲೆ ಬಸ್ಸುಗಳನ್ನು ಕಂಡೆಮ್ ಮಾಡುತ್ತೀರಾ ಅಥವಾ ಹಳೆಯದನ್ನೇ ರಿಪೇರಿ ಮಾಡಿ ಓಡಿಸುತ್ತೀರಾ?

**ಶ್ರೀ ಮೊಹಮದ್ ಅಲಿ** – ನಾವು ಶೇ.10ರಷ್ಟು ಸವಕಳಿಗೆ ಅವಕಾಶ ಕಲ್ಪಿಸುತ್ತೇವೆ. ಒಂದು ಬಸ್‌ನ ಆಯಸ್ಸು 9–10 ವರ್ಷಗಳು. ರಸ್ತೆಯಲ್ಲಿ ಅದನ್ನು ಓಡಿಸಲು ಸಾಧ್ಯವಿಲ್ಲವೆಂದು ಕಂಡು ಬಂದಾಗ ನಾವು ಅದನ್ನು ಬದಲಾಯಿಸುತ್ತೇವೆ.

**ಶ್ರೀ ರಾಜ ಪಿಡ್ ನಾಯಕ್** – ಲಿಂಗಸುಗೂರಿನಿಂದ ಹೈದರಾಬಾದಿಗೆ ಬಸ್ ಮಾರ್ಗ ಪ್ರಾರಂಭಿಸಲು ನಿಮಗೆ ಮನವಿಯೇನಾದರೂ ಬಂದಿದೆಯೆ ತಿಳಿಸಿ?

**ಶ್ರೀ ಮೊಹಮದ್ ಅಲಿ** – ಈ ಪ್ರಶ್ನೆಯು ಬಸ್ಸುಗಳ ಸಮಯ ಪಾಲನೆಗೆ ಸಂಬಂಧಿಸಿದುದಾಗಿದೆಯೇ ಹೊರತು ಬಸ್ ಮಾರ್ಗ ಪ್ರಾರಂಭಿಸುವುದಕ್ಕಲ್ಲ.

**ಶ್ರೀ ಎಂ. ನಾಗಪ್ಪ** – ದಿನವಹಿ ವಸೂಲಾತಿ ನೋಡಿದರೆ 67–68ರಲ್ಲಿ 2 ಸಾವಿರ ರೂಪಾಯಿ ಜಾಸ್ತಿ ಇದ್ದು ಹೀಗೆ ವ್ಯತ್ಯಾಸವಿದೆ. ಇದಕ್ಕೆ ಮಿಸ್ ಅಪ್ರೋಪ್ರಿಯೇಷನ್ ಅಥವಾ ಬೇರೆ ಕಾರಣ ಏನಾದರೂ ಇದೆಯೇ ಎಂದು ತಿಳಿದುಕೊಳ್ಳುವುದಕ್ಕೆ ಪ್ರಯತ್ನ ಮಾಡಿದ್ದೀರಾ?

**ಶ್ರೀ ಮೊಹಮದ್ ಅಲಿ** – 1966–67 ರಲ್ಲಿ ಬಸ್ ದರಗಳನ್ನು ಪರಿಷ್ಕರಿಸಲಾಗಿದೆ. ಬಸ್ ದರದ ಪರಿಷ್ಕರಣೆ ಹಾಗೂ ಷೆಡ್ಯೂಲ್‌ನಲ್ಲಿ ಹೆಚ್ಚಳ ಇವು ಗಳಿಕೆಯಲ್ಲಿ ಹೆಚ್ಚಳ ವಾಗುವುದಕ್ಕೆ ಕಾರಣಗಳು.

## ಗುಲ್ಬರ್ಗದಲ್ಲಿ ಕಟ್ಟಲಾದ ಬಸ್ ನಿಲ್ದಾಣಗಳು ಮತ್ತು ಷೆಲ್ಟರ್‌ಗಳು

**ಶ್ರೀ ಜೆ.ಪಿ. ಸರ್ವೇಸ್ (ಸೇಡಂ)** ವಾರ್ತಾ ಮತ್ತು ಪ್ರಚಾರ, ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಇದನ್ನು ತಿಳಿಸುವರೆ –

(ಎ) ಕಳೆದ 3 ವರ್ಷಗಳಲ್ಲಿ ಗುಲ್ಬರ್ಗಾ ಜಿಲ್ಲೆಯಲ್ಲಿ ನಿರ್ಮಿಸಲಾದ ಸಣ್ಣ ಮತ್ತು ದೊಡ್ಡ ಗಾತ್ರದ ಬಸ್ ನಿಲ್ದಾಣಗಳ ಮತ್ತು ಬಸ್ ಷೆಲ್ಟರ್‌ಗಳ ಸಂಖ್ಯೆ ;

(ಬಿ) ಗುಲ್ಬರ್ಗಾ ಜಿಲ್ಲೆಯ ಪ್ರತಿಯೊಂದು ತಾಲೂಕಿನಲ್ಲಿ ನಿತ್ಯ ಆಪರೇಟ್ ಮಾಡುತ್ತಿರುವ ಬಸ್ಸುಗಳ ಸಂಖ್ಯೆ;

(ಸಿ) ಸೇಡಂ ತಾಲೂಕಿನಲ್ಲಿ ಬಸ್ ಷೆಡ್ಯೂಲ್ ಗಳ ಸಂಖ್ಯೆಯನ್ನು ಹೆಚ್ಚಿಸದಿರುವುದಕ್ಕೆ ಕಾರಣಗಳು;

(ಡಿ) ಸೇಡಂ ರಸ್ತೆಯಲ್ಲಿ ಜನ ಸಂಚಾರದ ಒತ್ತಡ ತುಂಬಾ ಜಾಸ್ತಿ ಇರುವುದು ಸರ್ಕಾರಕ್ಕೆ ತಿಳಿದಿದೆಯೇ?

**ಶ್ರೀ ಮೊಹಮದ್ ಅಲಿ (ವಾರ್ತಾ ಮತ್ತು ಪ್ರಚಾರ, ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)** –

(ಎ) I ದೊಡ್ಡ ಬಸ್ ನಿಲ್ದಾಣ 4
II ಪಿಕ್ –ಅಪ್ ಷೆಲ್ಟರ್‌ಗಳು 2
(i) ರಸ್ತೆ ಬದಿ ಷೆಲ್ಟರ್‌ಗಳು 2
(ii) ಗುಲ್ಬರ್ಗದಲ್ಲಿ ಸಿಟಿ ಷೆಲ್ಟರ್‌ಗಳು 8

(ಬಿ) ತಾಲೂಕುವಾರಾಗಿ ಬಸ್ಸುಗಳನ್ನು ಹಂಚಿಕೆ ಮಾಡಿಲ್ಲ.

(i) ಗುಲ್ಬರ್ಗ ಜಿಲ್ಲೆಯಲ್ಲಿ ಡಿಪೋವಾರು ಬಸ್ಸುಗಳ ಹಂಚಿಕೆ ಇಂತಿದೆ:

| | | |
|---|---|---|
| ಗುಲ್ಬರ್ಗ – ಗ್ರಾಮಾಂತರ | – | 73 |
| ನಗರ | – | 16 |
| ಒಟ್ಟು | | 89 |
| ಯಾದ್ಗೀರ್ | – | 42 |

(2) ಇದರ ಜೊತೆಗೆ ಎಂ.ಎಸ್.ಆರ್.ಟಿ.ಸಿಯ ನೆರೆಹೊರೆಯ ಡಿಪೋಗಳ ಬಸ್ಸುಗಳು ಕೂಡ ಈ ಮುಂದೆ ವಿವರಿಸಿರುವಂತೆ ಗುಲ್ಬರ್ಗ ಜಿಲ್ಲೆಯ ತಾಲ್ಲೂಕುಗಳ ಬಸ್ ಸಂಚಾರ ಅಗತ್ಯತೆಯನ್ನು ಪೂರೈಸುತ್ತವೆ.

| | | |
|---|---|---|
| ರಾಯಚೂರು | – | 2 |
| ಲಿಂಗಸುಗೂರು | – | 3 |
| ಹುಮ್ನಾಬಾದ್ | – | 26 |

(ಸಿ) ಹಾಲಿ ಇರುವ ಸೇವೆಗಳು ಸಧ್ಯಕ್ಕೆ ಸಾಕಷ್ಟಿರುವುದಾಗಿ ಕಂಡು ಬಂದಿದೆ. ಅಗತ್ಯವುಂಟಾದಾಗ ಸಂಖ್ಯೆಯನ್ನು ಹೆಚ್ಚಿಸಲಾಗುವುದು.

(ಡಿ) ಇಲ್ಲ

**ಶ್ರೀ ಜೆ.ಪಿ.ಸರ್ವೇಶ್** – ಸೇಡಂ ರಸ್ತೆಯ ಜನ ಅನಿವಾರ್ಯವಾಗಿ ಟ್ರಕ್‌ಗಳಲ್ಲಿ ಮತ್ತು ಇತರ ವಾಹನಗಳಲ್ಲಿ ಸಂಚರಿಸುತ್ತಿರುವುದು ಸರ್ಕಾರಕ್ಕೆ ತಿಳಿದಿದೆಯೇ ಮತ್ತು ಅಲ್ಲಿ ಮತ್ತೊಂದು ಬಸ್ ತಾಣವನ್ನು ನಿರ್ಮಿಸುವ ವಿಷಯವನ್ನು ಸರ್ಕಾರ ಪರಿಶೀಲಿಸುತ್ತದೆಯೇ?

**ಶ್ರೀ ಮೊಹಮದ್ ಅಲಿ** – ಅದನ್ನು ಪರಿಶೀಲಿಸಲಾಗುವುದು. ಆದರೆ ವರದಿಗಳ ಪ್ರಕಾರ ಈಗ ಗುಲ್ಬರ್ಗ ಜಿಲ್ಲೆಯಲ್ಲಿ ವೃತ್ತಿ ಅನುಪಾತದಲ್ಲಿನ ಹೆಚ್ಚಳ ಅತ್ಯಂತ ಕಡಿಮೆ ಇದೆ.

**ಶ್ರೀ ರಾಜಾ ಪಿಡ್ ನಾಯಕ್** – ಎಷ್ಟು ತಾಲೂಕು ಕೇಂದ್ರ ಸ್ಥಳಗಳಲ್ಲಿ ಬಸ್ ನಿಲ್ದಾಣಗಳಿವೆ ಮತ್ತು ಇನ್ನೆಷ್ಟು ಬಸ್ ನಿಲ್ದಾಣಗಳನ್ನು ನಿರ್ಮಾಣ ಮಾಡಬೇಕು ತಿಳಿಸುತ್ತೀರಾ?

**ಶ್ರೀ ಮೊಹಮದ್ ಅಲಿ** – ನಾನು ವಿವರಗಳನ್ನು ನೀಡಿದ್ದೇನೆ. ಯಾದ್ಗೀರ್‌ನಲ್ಲಿ ಮಾತ್ರ ಬಸ್ ನಿಲ್ದಾಣವಿಲ್ಲ. ಬಹುತೇಕ ಎಲ್ಲಾ ತಾಲೂಕು ಕೇಂದ್ರ ಸ್ಥಳಗಳಲ್ಲಿ ಬಸ್ ನಿಲ್ದಾಣಗಳನ್ನು ನಿರ್ಮಾಣ ಮಾಡಲು ರಸ್ತೆ ಸಾರಿಗೆ ನಿಗಮವು ವಿಚಾರ ಮಾಡುತ್ತಿದೆ.

**ಶ್ರೀ ಅಜೀಜ್ ಸೇಠ್ – (ಉರ್ದು)**

**ಶ್ರೀ ಮೊಹಮದ್ ಅಲಿ** – ಮನವಿ ಬಂದಿಲ್ಲ. ಎಲ್ಲ ಜಿಲ್ಲೆಗಳಲ್ಲಿ ವೃತ್ತಿ ಅನುಪಾತದ ಬಗ್ಗೆ ಸಮೀಕ್ಷೆನಡೆಸಲಾಗಿದೆ. ಅದರ ಆಧಾರದ ಮೇಲೆ ಗುಲ್ಬರ್ಗಾ ರಾಜ್ಯದಲ್ಲಿ ಅತ್ಯಂತ ಕೆಳ ಸ್ಥಾನದಲ್ಲಿದೆ.

**ಶ್ರೀ ದಿಗಂಬರ ರಾವ್ ಬಿ. ಕಲ್ಮಣ್‌ಕರ್**– (ಉರ್ದು)

**ಶ್ರೀ ಮೊಹಮದ್ ಅಲಿ** – ಆದಷ್ಟು ಬೇಗನೆ

## ಹುಬ್ಬಳ್ಳಿ–ಸಾಗರ ನಡುವೆ ಬಸ್ಸುಗಳನ್ನು ಓಡಿಸುವುದು

**ಶ್ರೀ ಎಸ್. ಬಂಗಾರಪ್ಪ (ಸೊರಬ) – ಸಾರಿಗೆ ಸಚಿವರು** ದಯವಿಟ್ಟು ಇದನ್ನು ತಿಳಿಸುವರೆ –

ಜನ ಸಂಚಾರ ಹೆಚ್ಚಾಗಿರುವುದರಿಂದ ಹಾನಗಲ್, ಜಡೆ ಮತ್ತು ಸೊರಬ ಮಾರ್ಗವಾಗಿ ಹುಬ್ಬಳ್ಳಿಯಿಂದ ಸಾಗರ್‌ಗೆ ಎರಡು ಎಂ.ಎಸ್.ಆರ್.ಟಿ.ಸಿ ಬಸ್ಸುಗಳನ್ನು ಮತ್ತು ಆನವಟ್ಟಿ ಮಾರ್ಗವಾಗಿ ಹುಬ್ಬಳ್ಳಿಯಿಂದ ಸಾಗರಕ್ಕೆ ಎರಡು ಬಸ್ಸುಗಳನ್ನು ಓಡಿಸುವ ಪ್ರಸ್ತಾವವೇನಾದರೂ ಇದೆಯೆ?

**ಶ್ರೀ ಮೊಹಮದ್ ಅಲಿ** – (ಸಾರಿಗೆ ಸಚಿವರು) –

ಇಲ್ಲ

**ಶ್ರೀ ಎಸ್. ಬಂಗಾರಪ್ಪ** – ನನ್ನ ಪ್ರಶ್ನೆಗೆ ಉತ್ತರವಾಗಿ ' ಇಲ್ಲ ' ಎಂಬುದಾಗಿ ಹೇಳಿರುವುದರಿಂದ ಅಲ್ಲಿ ಅಧಿಕವಾಗಿ ಜನಸಂಚಾರ ಇಲ್ಲವೆಂದು ಅರ್ಥವೋ ಅಥವಾ ಬಸ್ಸುಗಳು ನಿಮ್ಮಲ್ಲಿಲ್ಲವೆಂದು ಅರ್ಥವೋ ಅಥವಾ ಅದು ನಿಮಗೆ ಸಾಧ್ಯವಿಲ್ಲವೆಂದು ಅರ್ಥವೋ?

**ಶ್ರೀ ಮೊಹಮದ್ ಅಲಿ** – ಎರಡು ಮಾರ್ಗಗಳಿವೆ ಎರಡೂ ಮಾರ್ಗಗಳ ಪ್ರಮುಖ ಭಾಗವು ಏಕಸ್ವಾಮ್ಯಕ್ಕೊಳಪಡದ ವಲಯದಲ್ಲಿದೆ. ಆದ್ದರಿಂದ ರಸ್ತೆ ಸಾರಿಗೆ ನಿಗಮವು ಈ ಮಾರ್ಗಗಳಲ್ಲಿ ಬಸ್ಸುಗಳನ್ನು ಪ್ರಾರಂಭಿಸಲು ಉದ್ದೇಶಿಸಿಲ್ಲ. ಆದರೆ ಸಾಗರ ಮತ್ತು ಸೊರಬದ ಪ್ರಯಾಣಿಕರಿಗೆ ಸಾರಿಗೆ ಸೌಲಭ್ಯಗಳನ್ನು ಒದಗಿಸುವ ಸಲುವಾಗಿ ಎಂ.ಎಸ್.ಆರ್.ಟಿ.ಸಿ.ಯು ಹುಬ್ಬಳ್ಳಿಯಿಂದ ಆನವಟ್ಟಿಗೆ ಓಡಿಸುತ್ತಿರುವ ಬಸ್ಸನ್ನು ಸಾಗರದ ವರೆಗೆ ವಿಸ್ತರಿಸಲಾಗಿದ್ದು, ಇದು ಸಾಗರ ಮತ್ತು ಬ್ಯಾಡಿಗೆನಡುವೆ ಸಂಪರ್ಕ ಕಲ್ಪಿಸುತ್ತದೆ.

**ಶ್ರೀ ಎಸ್. ಬಂಗಾರಪ್ಪ** – ಈಗಿರತಕ್ಕ ಮಾರ್ಗವನ್ನು ಇನ್ನೂ ಎಕ್ಸ್‌ಟೆಂಡ್ ಮಾಡುವುದಕ್ಕೆ ಸಾಧ್ಯವಿದೆಯೇ? ಈ ಮಾರ್ಗದಲ್ಲಿ ಎಕ್ಸ್ ಪ್ರೆಸ್ ಸರ್ವೀಸನ್ನು ಹಾಕುತ್ತೀರಾ?

**ಶ್ರೀ ಮೊಹಮದ್ ಅಲಿ** – ಅದನ್ನು ವಿಸ್ತರಿಸಲಾಗಿದೆ. ಎಕ್ಸ್‌ಪ್ರೆಸ್ ಸರ್ವೀಸನ್ನು ಪ್ರಾರಂಭಿಸುವ ವಿಷಯ ಪರಿಶೀಲನೆಯಲ್ಲಿದೆ.

## ಎಂ.ಎಸ್.ಆರ್.ಟಿ.ಸಿ ಯಿಂದ ಆದಾಯ ತೆರಿಗೆಯ ಸಂದಾಯ

**ಶ್ರೀ ಎಂ.ಕೆ.ಬೊಮ್ಮೇಗೌಡ (ಕೆ.ಆರ್.ಪೇಟೆ)**–ಸಾರಿಗೆ ಸಚಿವರು ದಯವಿಟ್ಟು ಇದನ್ನು ತಿಳಿಸುವರೆ–

(ಎ) ಕೇಂದ್ರ ಸರ್ಕಾರಕ್ಕೆ ಮೈಸೂರು ರಾಜ್ಯ ರಸ್ತೆ ಸಾರಿಗೆ ನಿಗಮವು ಸಂದಾಯ ಮಾಡುತ್ತಿರುವ ಆದಾಯ ತೆರಿಗೆಯ ಮೊತ್ತ;

(ಬಿ) ಸದರಿ ನಿಗಮವನ್ನು ಕೇಂದ್ರ ಸರ್ಕಾರಕ್ಕೆ ವಹಿಸಿಕೊಡುವ ಪ್ರಸ್ತಾವ ಏನಾದರೂ ಇದೆಯೇ;

(ಸಿ) ಎಂ.ಎಸ್.ಆರ್.ಟಿ.ಸಿ ಬಸ್ಸುಗಳು ಅನುಸೂಚಿತ ವೇಳೆಗಳನ್ನು ಪಾಲಿಸದಿರುವುದರಿಂದ ಪ್ರಯಾಣಿಕರಿಗೆ ಅನಾನುಕೂಲವಾಗುತ್ತಿರುವುದು ತಮಗೆ ತಿಳಿದಿದೆಯೆ?

**ಶ್ರೀ ಮೊಹಮದ್ ಅಲಿ –**

ಎ) ವರ್ಷಕ್ಕೆ ಸುಮಾರು 37 ಲಕ್ಷ ರೂಪಾಯಿ.

ಬಿ) ಇಲ್ಲ

ಸಿ) ಇಲ್ಲ

## ಬೆಟಗೇರಿಯಲ್ಲಿ ಉಪ ಬಸ್ ನಿಲ್ದಾಣ

**ಶ್ರೀ ಕೆ.ಹೆಚ್. ಪಾಟೀಲ್ (ಗದಗ್).**– ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಇದನ್ನು ತಿಳಿಸುವರೆ –

ಎ) ಮೈಸೂರು ರಾಜ್ಯ ರಸ್ತೆ ಸಾರಿಗೆ ನಿಗಮವು ಬೆಟಗೇರಿಯಲ್ಲಿ ಉಪ ಬಸ್ ನಿಲ್ದಾಣವನ್ನು ಒದಗಿಸುವ ಅವಶ್ಯಕತೆ ತುಂಬಾ ಇರುವುದು ಸರ್ಕಾರಕ್ಕೆ ತಿಳಿದಿದೆಯೇ;

ಬಿ) ಸರ್ಕಾರದ ಮುಂದೆ ಯಾವುದಾದರೂ ಪ್ರಸ್ತಾವ ಇದೆಯೇ. ಈ ಕೆಲಸವನ್ನು ಸರ್ಕಾರ ಯಾವಾಗ ತೆಗೆದುಕೊಳ್ಳಲು ಉದ್ದೇಶಿಸಿದೆ?

**ಶ್ರೀ ಮೊಹಮದ್ ಅಲಿ (ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)** –

ಎ. ಇಲ್ಲ

ಬಿ. ಇಲ್ಲ. ಆದರೂ ಪ್ರಯಾಣಿಕರ ಪಿಕ್ ಅಪ್ ಷೆಲ್ಟರ್ ನಿರ್ಮಾಣದ ಬಗ್ಗೆ ಎಂ.ಎಸ್.ಆರ್.ಟಿ.ಸಿ. ಪರಿಶೀಲಿಸುತ್ತಿದೆ. ಭೂಮಿ ದೊರೆತ ಕೂಡಲೆ ಈ ಕೆಲಸವನ್ನು ಪ್ರಾರಂಭಿಸಲಾಗುವುದು.

## ಅಧ್ಯಾಯ - 5

# ಮೈಸೂರು ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯಲ್ಲಿರುವ ಚಾಲಕರು ಮತ್ತು ನಿರ್ವಾಹಕರಿಗೆ ಸಂದಾಯ ಮಾಡಿರುವ ತುಟ್ಟಿಭತ್ಯೆ

**ಶ್ರೀ. ಎಚ್.ಬಿ. ಜ್ವಾಲನಯ್ಯ (ಹಾಸನ)**– ಸಾರಿಗೆ ಸಚಿವರು

ಮೈಸೂರು ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯಲ್ಲಿರುವ ಚಾಲಕರು ಮತ್ತು ನಿರ್ವಾಹಕರಿಗೆ ಸಂದಾಯ ಮಾಡುತ್ತಿರುವ ತುಟ್ಟಿಭತ್ಯೆ ಪ್ರಮಾಣವನ್ನು ದಯವಿಟ್ಟು ತಿಳಿಸುವಿರಾ?

**ಶ್ರೀ ಮೊಹಮ್ಮದ್ ಅಲಿ (ಸಾರಿಗೆ ಸಚಿವರು)**

ತುಟ್ಟಿಭತ್ಯೆಯನ್ನು ಕೆಳಗೆ ಸೂಚಿಸಲಾದಂತೆ ಶ್ರೇಣಿ ಆಧಾರದ ಮೇಲೆ ಸಂದಾಯ ಮಾಡಿರುತ್ತದೆ–

(ಮಾನ್ಯ ಉಪಾಧ್ಯಕ್ಷರ ಅಧ್ಯಕ್ಷತೆಯಲ್ಲಿ)

**ಶ್ರೀ. ಎಚ್.ಬಿ. ಜ್ವಾಲನಯ್ಯ** – ಸ್ವಾಮಿ, ಡ್ರೈವರ್ ಮತ್ತು ಕಂಡಕ್ಟರುಗಳಿಗೆ ಸುಮಾರು 65 ರೂಪಾಯಿ ತಿಂಗಳಿಗೆ ಡಿ.ಎ. ಕೊಡುತ್ತಿದ್ದಿರಿ. ದಿವಸಕ್ಕೆ ಅವರಿಗೆ ಕೊಡುವುದು. ಒಂದೂವರೆ ರೂಪಾಯಿಯಾಗುತ್ತದೆ. ಬೆಳಿಗ್ಗೆ ಬೆಂಗಳೂರಿನಿಂದ ಹೊರಟು ರಾತ್ರಿ ಮಂಗಳೂರಿಗೆ ಹೋಗುವ ಬಸ್ಸುಗಳ ಕಂಡಕ್ಟರುಗಳಿಗೆ ಒಂದೂವರೆ ರೂಪಾಯಿ ಕೊಟ್ಟರೆ, ಅವರು ಬೇರೆ ರೀತಿಯಲ್ಲಿ ಹಣ ಸಂಪಾದನೆ ಮಾಡುವುದಕ್ಕೆ ಮನಸ್ಸು ಹರಿಸುವುದಿಲ್ಲವೇ?

**ಶ್ರೀ ಮೊಹಮ್ಮದ್ ಅಲಿ** – 1968ರಲ್ಲಿ ಪೂರ್ವಾನ್ವಯವಾಗಿ ಜಾರಿಯಾಗುವಂತೆ ಸರ್ಕಾರದ ದರಗಳನ್ನು ರಸ್ತೆ ಸಾರಿಗೆ ಸಂಸ್ಥೆಯ ನೌಕರರಿಗೂ ಅನ್ವಯಗೊಳಿಸಲಾಗಿರುತ್ತದೆ. ತುಟ್ಟಿಭತ್ಯೆಯಲ್ಲಿ ಏರಿಕೆಯಾಗಿರುವ ರೂಪದಲ್ಲಿ ಮಾತ್ರ ನೌಕರರು ಪ್ರತಿವರ್ಷವು ಸುಮಾರು 50 ಲಕ್ಷಕ್ಕಿಂತಲೂ ಹೆಚ್ಚು ಪಡೆಯುತ್ತಾರೆ.

**ಶ್ರೀ. ಎಚ್.ಬಿ. ಜ್ವಾಲನಯ್ಯ** – ಸ್ವಾಮಿ ಇದು ಡ್ರೈವರ್ಸ್ ಕಂಡಕ್ಟರ್ಸ್ ಮಾಡುತ್ತಿರುವ ಕೆಲಸ ಅದಕ್ಕೆ ಸಂಬಂಧಪಟ್ಟ ಡಿ.ಎ.ಯನ್ನು ಬಿಟ್ಟು ಇಲ್ಲಿ ಬೆಂಗಳೂರಿನಲ್ಲಿ ಇತರ ಕಾರ್ಮಿಕರ ಎಲ್ಲಾ ಇರುವಂತಹ ನೀತಿಯನ್ನು ಅವರಿಗೂ ಅಪ್ಲೈ ಮಾಡಿದರೆ ಅದು ಸರಿಯಾಗುವುದಿಲ್ಲವೆಂಬುದು ತಮಗೆ ಗೊತ್ತಿಲ್ಲವೇ?

**ಶ್ರೀ ಮೊಹಮ್ಮದ್ ಅಲಿ** – ಪ್ರಶ್ನೆಯು ತುಟ್ಟಿಭತ್ಯೆಗೆ ಸಂಬಂಧಿಸಿರುವುದಾಗಿತ್ತು. ಆದರೆ ಮಾನ್ಯ ಸದಸ್ಯರು ದೈನಂದಿನ ಬಾಟದ ಬಗ್ಗೆ ಕೇಳುತ್ತಿದ್ದು, ಈ ಬಗ್ಗೆ ಗೊಂದಲವಾಗಿರುವುದಾಗಿ ಕಾಣುತ್ತದೆ.

**ಶ್ರೀ ಎಂ.ಎಸ್. ಕೃಷ್ಣನ್‌ಸ್ವಾಮಿ**– ತಮ್ಮ ಸರ್ಕಾರದ ನೀತಿಯಿಂದ ಆಹಾರ ಪದಾರ್ಥಗಳು ಮತ್ತು ಇತರ ವಸ್ತುಗಳ ಬೆಲೆಗಳು ಗಗನಕ್ಕೆ ಏರುತ್ತಾ ಇರುವುದರಿಂದ ಆ ಬೆಲೆಗಳಿಗೆ ಅನುಸಾರವಾಗಿ ತುಟ್ಟಿಭತ್ಯವನ್ನು ಜಾಸ್ತಿ ಮಾಡಬೇಕು ಎಂದು ರೋಡ್ ಟ್ರಾನ್ಸ್‌ಪೋರ್ಟ್ ಇಲಾಖೆಯ ಕೆಲಸಗಾರರು ಏನಾದರು ತಮ್ಮನ್ನು ಕೇಳಿದ್ದಾರೆಯೇ ಹಾಗೆ ಒಂದುವೇಳೆ ಅವರು ಆ ರೀತಿ ಕೇಳಿದ್ದರೆ ಆ ಬಗ್ಗೆ ಏನು ಕ್ರಮ ತೆಗೆದುಕೊಳ್ಳಬೇಕೆಂದು ತೀರ್ಮಾನ ಮಾಡಿದ್ದಿರಿ? ಆ ಬಗ್ಗೆ ತೀರ್ಮಾನ ತೆಗೆದುಕೊಳ್ಳುವುದಕ್ಕೆ ಎಷ್ಟು ದಿವಸಗಳು ಬೇಕಾಗುತ್ತವೆ.

**ಶ್ರೀ ಮೊಹಮ್ಮದ್ ಅಲಿ** – 1ನೇ ಏಪ್ರಿಲ್, 1969ರಂದು ಇದ್ದಂತೆ ಸರ್ಕಾರದ ಪರಿಷ್ಕೃತ ದರದ ಪ್ರಕಾರವಾಗಿ ತುಟ್ಟಿಭತ್ಯೆಯನ್ನು ಪರಿಷ್ಕರಿಸುವಂತೆ ಸಂಸ್ಥೆಯ ನೌಕರರು ಮತ್ತು ಇವರ ಸಂಘಗಳಿಂದ ಮನವಿಪತ್ರವನ್ನು ಸಲ್ಲಿಸಲಾಗಿದ್ದು ಈ ವಿಷಯವನ್ನು ಪರಿಶೀಲಿಸಲಾಗುತ್ತಿದೆ.

**ಶ್ರೀ ಸದಾಶಿವಪ್ಪ ಪಾಟೀಲ್** – ಈ ರೋಡ್ ಟ್ರಾನ್ಸ್‌ಪೋರ್ಟ್ ಇಲಾಖೆಯಲ್ಲಿ ಕೆಲಸ ಮಾಡತಕ್ಕ ಡ್ರೈವರ್ ಮತ್ತು ಕಂಡಕ್ಟರಗಳಿಗೆ ತುಟ್ಟಿಭತ್ಯವನ್ನು ಕೊಡುವ ಸಂಬಂಧದಲ್ಲಿ ಹಗಲು ಹೊತ್ತಿನಲ್ಲಿ ಕೆಲಸ ಮಾಡತಕ್ಕದ್ದಂಥ ಡ್ರೈವರುಗಳು ಮತ್ತು ಕಂಡಕ್ಟರುಗಳಿಗೆ ರಾತ್ರಿ ಹೊತ್ತಿನಲ್ಲಿ ಕೆಲಸ ಮಾಡತಕ್ಕ ಡ್ರೈವರುಗಳು ಮತ್ತು ಕಂಡಕ್ಟರುಗಳಿಗೆ ಹೆಚ್ಚಿಗೆ ಒಂದು ಸ್ಪೆಷಲ್ ಅಲೋಯನ್ಸ್ ಕೊಟ್ಟರೆ ರಾತ್ರಿ ವೇಳೆ ಪ್ರಯಾಣ ಮಾಡತಕ್ಕದವರಿಗೆ ಸೇಫ್ಟಿ ಇರುತ್ತದೆ. ಇಲ್ಲದಿದ್ದರೆ ಸೇಫ್ಟಿ ಇರುವುದಿಲ್ಲ. ಆದ್ದರಿಂದ ಇದನ್ನು ಕನ್‌ಸಿಡರ್ ಮಾಡುತ್ತೀರಾ?

**ಶ್ರೀ ಮೊಹಮ್ಮದ್ ಅಲಿ** – ಕ್ರಮ ಕೈಗೊಳ್ಳುವುದಕ್ಕಾಗಿ ಸೂಚಿಸಲಾಗಿದೆ.

**ಶ್ರೀ ಜಯಪ್ರಕಾಶ ನಾರಾಯಣ ಎಂ.ಎಸ್.**– ಆರ್.ಟಿ.ಸಿ. ಬಸ್‌ಗಳಲ್ಲಿ ಕೆಲಸ ಮಾಡತಕ್ಕ ಡ್ರೈವರುಗಳು ಮತ್ತು ಕಂಡ್ರಕ್ಟರುಗಳು 8 ಗಂಟೆಗಿಂತ ಹೆಚ್ಚು ಕೆಲಸ ಮಾಡುತ್ತಾರೆ. ಆದರೆ ಅವರಿಗೆ ಕೊಡತಕ್ಕಂಥ ಅಲೋಯನ್ಸ್ ನೋಡಿದರೆ ಕಡಿಮೆ ಇದೆ. ಆದ್ದರಿಂದ ಅದನ್ನು ಆದಷ್ಟು ಜಾಗ್ರತೆ ಏರಿಸುವುದಕ್ಕೆ ಪ್ರಯತ್ನ ಮಾಡುತ್ತೀರಾ?

**ಶ್ರೀ ಮೊಹಮ್ಮದ್ ಅಲಿ** – ಸರ್ಕಾರಿ ನೌಕರರಿಗೆ ತುಟ್ಟಿಭತ್ಯೆಯನ್ನು ನೀಡಲಾಗಿದೆ. ಸರ್ಕಾರವು ದರಗಳನ್ನು ಮತ್ತಷ್ಟು ಪರಿಷ್ಕರಿಸಿರುವುದರಿಂದ ಈ ವಿಷಯವು ಸಂಸ್ಥೆಗೆ ಪರಿಣಾಮಕಾರಿಯಾಗಿದ್ದು ಇದನ್ನು ವಿಚಾರ ಮಾಡಬೇಕಾಗಿರುತ್ತದೆ. ಇದರಲ್ಲಿ ಹಣಕಾಸಿನ ತೊಡಕು ಇರುವುದರಿಂದ ಆಡಳಿತ ವರ್ಗ ಮತ್ತು ಸಂಘಗಳು ವಿರಾಮ ಒಪ್ಪಂದಕ್ಕಾಗಿ ಸಂಧಾನವನ್ನುನಡೆಸುತ್ತಿದ್ದಾರೆ. ಇದು ಆಡಳಿತವರ್ಗದ ಮುಂದೆ ಮಂಡಿಸಿರುವ ಒಂದು ಪ್ರಶ್ನೆಯಾಗಿದ್ದು, ಇನ್ನೂ ಇತರ ಬೇಡಿಕೆಗಳನ್ನು ಮಾಡಲಾಗಿದೆ. ಆದ್ದರಿಂದ ಈ ಸಂಬಳ ಸಾರಿಗೆಯ ಪ್ರಶ್ನೆಯ ಬಗ್ಗೆ ಮತ್ತು ಇನ್ನೂ ಹೆಚ್ಚಿನ ಸೌಲಭ್ಯಗಳನ್ನು ನೀಡುವ ಪ್ರಶ್ನೆಯ ಬಗ್ಗೆ ಸಂಸ್ಥೆಯು ಪರಿಶೀಲನೆ ಮಾಡಬೇಕಾಗುತ್ತದೆ. ಆಡಳಿತ ವರ್ಗ ಮತ್ತು ಸಂಘವು ಸಂಧಾನವನ್ನುನಡೆಸುತ್ತಿವೆ.

**ಶ್ರೀ. ಡಿ.ಬಿ. ಕಲ್ಮಣ್‌ಕರ್** – ಮೈಸೂರು ರಾಜ್ಯದಲ್ಲಿ ನೀಡಲಾಗಿರುವ ಭತ್ಯೆಯ ದರಗಳು ಮಹಾರಾಷ್ಟ್ರ ದಲ್ಲಿರುವ ಭತ್ಯೆಗಿಂತಲೂ ಉತ್ತಮವಾಗಿರುತ್ತದೆಯೇ ಎಂಬುದನ್ನು ನಾನು ತಿಳಿದುಕೊಳ್ಳಬಹುದೇ?

**ಶ್ರೀ ಮೊಹಮ್ಮದ್ ಅಲಿ** – ಸಂಬಳ ಮತ್ತು ಭತ್ಯಗಳಿಗೆ ಸಂಬಂಧಪಡುವಷ್ಟರಮಟ್ಟಿಗೆನಮ್ಮ ಸಂಬಳ ಮತ್ತು ಭತ್ಯೆಗಳ ದರವು ದೇಶದಲ್ಲಿರುವ ಯಾವುದೇ ಇತರ ಸಾರಿಗೆ ಉದ್ಯಮಗಳಿಗೆ ಹೋಲಿಸಿದರೆ ಸ್ವಲ್ಪಮಟ್ಟಿಗೆ ಹೆಚ್ಚಾಗಿರುತ್ತದೆ.

**ಶ್ರೀ ಚಂದ್ರಕಾಂತ್** – ನಿದ್ರಿಸುವ ಕೋಣೆಯ ಸೌಲಭ್ಯವನ್ನು ನೀಡುವುದಕ್ಕಾಗಿ, ಬಾಟ ಇತ್ಯಾದಿಗಳನ್ನು ಹೆಚ್ಚಿಸುವುದಕ್ಕಾಗಿ ವಿನಂತಿಸಿರುವ ಮೂಲಕ ಬೆಂಗಳೂರಿನಿಂದ ಗುಲ್ಬರ್ಗಾ, ಮಂಗಳೂರಿಗೆ ರಾತ್ರಿ ಸೇವೆಯಲ್ಲಿ ಹೋಗುತ್ತಿರುವ ಚಾಲಕರು ಮತ್ತು ನಿರ್ವಾಹಕರು ಇವರುಗಳಿಂದ ಯಾವುದೇ ಮನವಿಯನ್ನು ನೀವು ಸ್ವೀಕರಿಸಿದ್ದೀರಾ?

**ಶ್ರೀ ಮೊಹಮ್ಮದ್ ಅಲಿ** – ಇವರುಗಳು ನಿಗದಿತ ಸಮಯಕ್ಕಿಂತ ಹೆಚ್ಚುಕಾಲ ಕೆಲಸಮಾಡಿದ್ದರೆ ಇವರು ಮೋಟಾರು ಸಾರಿಗೆ ಕೆಲಸಗಾರರ ಅಧಿನಿಯಮದ ಅಡಿಯಲ್ಲಿ ಹೆಚ್ಚುಕಾಲದ ಭತ್ಯೆಗೆ ಹಕ್ಕುಳ್ಳವರಾಗಿರುತ್ತಾರೆ ಹಾಗೂ ಇವರು ಇದನ್ನು ಪಡೆಯುತ್ತಾರೆ ಎಂದು ಭರವಸೆ ನೀಡುತ್ತೇನೆ. ಅವರಿಗೆ ಅಗತ್ಯವಾಗಿರಬಹುದಾದ ಯಾವುದೇ ಇತರ ಸೌಲಭ್ಯದ ಸಂಬಂಧವಾಗಿ ಇದನ್ನು ನನ್ನ ಗಮನಕ್ಕೆ ತಂದಿದ್ದಾದರೆ ನಿಶ್ಚಿತವಾಗಿ ಅದರ ಬಗ್ಗೆ ನಾನು ಸಹಾನುಭೂತಿ ಕ್ರಮವನ್ನು ಕೈಗೊಳ್ಳುತ್ತೇನೆ.

**ಶ್ರೀ ಜಿ. ಚಂದ್ರಕಾಂತ್** – ಅವರು 8 ಗಂಟೆಗಳವರೆಗೆ ನಿರಂತರವಾಗಿ ಕೆಲಸ ಮಾಡುತ್ತಿದ್ದಾರೆ.

**ಶ್ರೀ ಮೊಹಮ್ಮದ್ ಅಲಿ** – ಚಾಲಕರು ನಿರಂತರವಾಗಿ ಕೆಲಸ ಮಾಡುತ್ತಿದ್ದು ಅವರು 8 ಗಂಟೆಗಳಿಗಿಂತ ಹೆಚ್ಚು ಕೆಲಸ ಮಾಡಿದರೆ ಅವರು ಹೆಚ್ಚುಕಾಲದ ಭತ್ಯೆಯನ್ನು ಪಡೆಯುತ್ತಾರೆ.

**ಶ್ರೀ ಎಂ.ಕೆ. ಬೊಮ್ಮೆಗೌಡ**– 90 ರೂಪಾಯಿಗಳಿಗಿಂತ ಕಡಿಮೆ ಮೂಲವೇತನ ಪಡೆಯುತ್ತಿರುವವರಿಗೆ 65 ರೂಪಾಯಿ ತುಟ್ಟಿಭತ್ಯೆ ಸಿಗುತ್ತದೆ. 90 ರೂಪಾಯಿಗಳಿಗಿಂತ ಹೆಚ್ಚು ಮೂಲವೇತನ ಪಡೆಯುವವರಿಗೆ 80 ರೂಪಾಯಿ ತುಟ್ಟಿಭತ್ಯೆ ಸಿಗುತ್ತದೆ. ಮೂಲವೇತನ ಜಾಸ್ತಿಯಾದಂತೆ ತುಟ್ಟಿಭತ್ಯೆ ಜಾಸ್ತಿಯಾಗುತ್ತದೆ. ಇದಕ್ಕೆ ಬದಲು ಕಡಿಮೆ ಮೂಲವೇತನ ಬರುವವರಿಗೆ ಹೆಚ್ಚಿನ ತುಟ್ಟಿಭತ್ಯೆ ಕೊಡುವುದಕ್ಕೆ ಏರ್ಪಾಡು ಮಾಡುತ್ತೀರಾ?

**ಉಪಾಧ್ಯಕ್ಷರು**– ಅದಕ್ಕೆ ಉತ್ತರ ಹೇಳಿದ್ದಾರೆ.

**ಶ್ರೀ ಸಿ.ಎಂ.ಎಸ್. ಶಾಸ್ತ್ರಿ**– ತಾವು ಡ್ರೈವರುಗಳಿಗೆ ಮತ್ತು ಕಂಡ್ರಕ್ಟರುಗಳಿಗೆ ಕೊಡುತ್ತಿರುವ ಸಂಬಳ ಕಡಿಮೆಯಗಿರುವುದರಿಂದ ಕಲಕ್ಷನ್ ಕೂಡ ಕಡಿಮೆಯಾಗಿವೆ ಎಂಬುದು ತಮ್ಮ ಗಮನಕ್ಕೆ ಬಂದಿದೆಯೇ?

**ಶ್ರೀ ಮೊಹಮ್ಮದ್ ಅಲಿ** – ಚಿಲ್ಲರೆ ಕಳ್ಳತನ ಮಾಡುತ್ತಿರುವುದಕ್ಕಾಗಿ ಹಲವಾರು ಕಾರಣಗಳಿದ್ದು ಬಾಟದಲ್ಲಿ, ಏರಿಕೆ ಮಾಡುವುದರಿಂದ ಸಂಪೂರ್ಣವಾಗಿ ಚಿಲ್ಲರೆಕಳ್ಳತನವನ್ನು ತೊಲಗಿಸುವಲ್ಲಿ ಇದು ಸಹಾಯವಾಗುವುದಿಲ್ಲ.

## ಕುಂದಾಪುರದಲ್ಲಿ ಮೈ.ರಾ.ರ.ಸಾ.ಸಂಸ್ಥೆಯಿಂದ ಜಮೀನಿನ ಖರೀದಿ

**ಶ್ರೀಮತಿ ಡಬ್ಲ್ಯೂ ಪರ್ನಾಂಡಿಸ್ (ಕುಂದಾಪುರ)**– ಮಾನ್ಯ ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಈ ಮುಂದಿನವುಗಳ ಬಗ್ಗೆ ಹೇಳುವರೆ–

(ಎ) ಮೈಸೂರು ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು ಸುಮಾರು 4 ವರ್ಷಗಳ ಹಿಂದೆ ಕುಂದಾಪುರದಲ್ಲಿ ಜಮೀನನ್ನು ಖರೀದಿಸಿದೆಯೇ?

(ಬಿ) ಹಾಗಿದ್ದರೆ:

ಖರೀದಿಯ ದಿನಾಂಕ ಮತ್ತು

ಸಂದಾಯ ಮಾಡಿರುವ ಬೆಲೆ,

ಸ್ವತ್ತಿನ ವಿವರಣೆ, ಮತ್ತು

ಖರೀದಿಸಿದಂದಿನಿಂದ ಪ್ರತಿವರ್ಷವು ಈ ಸ್ವತ್ತಿನಿಂದ ಬರುತ್ತಿರುವ ವಾರ್ಷಿಕ ವರಮಾನ;

(ಸಿ) ಜಮೀನನ್ನು ಖರೀದಿಸಲಾಗಿರುವ ಉದ್ದೇಶ ಮತ್ತು ಜಮೀನನ್ನು ಆ ಉದ್ದೇಶಕ್ಕಾಗಿ ಬಳಸಲಾಗಿದೆಯೇ;

(ಡಿ) ಇಲ್ಲದಿದ್ದರೆ ಈ ಉದ್ದೇಶಕ್ಕಾಗಿ ಜಮೀನನ್ನು ಬಳಸದಿರುವುದಕ್ಕಾಗಿನ ಕಾರಣ ಹಾಗೂ ಖರೀದಿಸಿದ ಜಮೀನನ್ನು ಏನು ಮಾಡಲಾಗಿದೆ ಮತ್ತು ಖರೀದಿಸಿದಂದಿನಿಂದ ಪ್ರತಿವರ್ಷವು ಅದರ ಮೇಲೆ ಮಾಡಿರುವ ವಾರ್ಷಿಕ ವೆಚ್ಚ;

(ಇ) ಈ ಸ್ವತ್ತನ್ನು ಮೈಸೂರು ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯಿಂದ ಸರಿಯಾಗಿ ಉಪಯೋಗಿಸಲಾಗಿದೆಯೇ ಮತ್ತು ಯಾವಾಗ?

**ಶ್ರೀ ಮೊಹಮ್ಮದ್ ಅಲಿ (ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)**

(ಎ) ಹೌದು

(ಬಿ) **ಖರೀದಿ ದಿನಾಂಕ:** 6ನೇ ಅಕ್ಟೋಬರ್ 1962

**ಸಂದಾಯ ಮಾಡಿದ ಬೆಲೆ:** ರೂ.46,465–12 ಪೈಸೆ

**ಸ್ವತ್ತಿನ ವಿವರಣೆ** : ಜಮೀನಿನ ಅಳತೆಯು 1.39 ಎಕರೆಯಷ್ಟಿದ್ದು ಇದರಲ್ಲಿ ಕಟ್ಟಡ, ಗ್ಯಾರೇಜ್, ದನದ ಕೊಟ್ಟಿಗೆ, ಶೌಚಾಲಯ ಹಾಗೂ ಬಾವಿಯು ಇರುತ್ತವೆ.

**ಖರೀದಿಸಿದಂದಿನಿಂದ ಪ್ರತಿವರ್ಷವು ಸ್ವತ್ತಿನಿಂದ ಬರುವ ವಾರ್ಷಿಕ ವರಮಾನ:**

ವಾರ್ಷಿಕ ವರಮಾನವು ಈ ಮುಂದಿನ ದರದಲ್ಲಿರುತ್ತದೆ:

(ಎ) 6ನೇ ಅಕ್ಟೋಬರ್ 1962ರಿಂದ ಪ್ರತಿ ತಿಂಗಳು ಗ್ಯಾರೇಜ್‌ನಿಂದ 50–00 ರೂಪಾಯಿಗಳು.

(ಬಿ) ಈ ಕೆಳಗೆ ವಿವರಿಸಿರುವಂತೆ 1ನೇ ಜೂನ್ 1965ರಿಂದ ಪ್ರತಿತಿಂಗಳು ಕಟ್ಟಡದಿಂದ 100–00 ರೂಪಾಯಿಗಳು–

| | ರೂ. |
|---|---|
| 6–10–1962ರಿಂದ 31–3–1963ರವರೆಗೆ | 300 |
| 1–4–1963ರಿಂದ 31–3–1964ರವರೆಗೆ | 600 |
| 1–4–1964ರಿಂದ 31–3–1965ರವರೆಗೆ | 600 |
| 1–4–1965ರಿಂದ 31–3–1966ರವರೆಗೆ | 1,600 |
| 1–4–1966ರಿಂದ 31–3–1967ರವರೆಗೆ | 1,800 |

(ಸಿ) ಈ ಜಮೀನನ್ನು ಡಿಪೋವನ್ನು ನಿರ್ಮಾಣ ಮಾಡುವುದಕ್ಕಾಗಿ ಖರೀದಿಸಲಾಗಿತ್ತು ಆದರೆ ಈವರೆಗೆ ಆ ಉದ್ದೇಶಕ್ಕಾಗಿ ಉಪಯೋಗಿಸಿಕೊಂಡಿರುವುದಿಲ್ಲ.

(ಡಿ) ಮಂಗಳೂರಿನಲ್ಲಿರುವ ಮಾರ್ಗಗಳನ್ನು ಇನ್ನೂ ರಾಷ್ಟ್ರೀಕರಣಗೊಳಿಸದಿರುವುದರಿಂದ.

ಖರೀದಿಸಿದಂದಿನಿಂದ ಜಮೀನನ್ನು ಏನು ಮಾಡಲಾಗಿದೆ: ಇಡೀ ಆವರಣವನ್ನು ಖಾಸಗಿಯವರು ಬಳಸುವುದಕ್ಕಾಗಿ ಪರವಾನಗಿ ನೀಡಲಾಗಿದೆ.

ಖರೀದಿಸಿದಂದಿನಿಂದ ಪ್ರತಿವರ್ಷವು ಇದರ ನಿರ್ವಹಣೆಗೆ ವ್ಯಯಮಾಡಿದ ವಾರ್ಷಿಕ ವೆಚ್ಚ: ಇದರ ನಿರ್ವಹಣೆಗೆ ಈವರೆಗೆ ಯಾವುದೇ ವೆಚ್ಚವನ್ನು ಮಾಡಲಾಗಿರುವುದಿಲ್ಲ.

# ಚಿಂತಾಮಣಿಯಲ್ಲಿ ಆಧುನಿಕ ಬಸ್ ನಿಲ್ದಾಣ

**ಶ್ರೀ ಟಿ.ಕೆ. ಗಂಗೀರೆಡ್ಡಿ (ಚಿಂತಾಮಣಿ) –**

ಮಾನ್ಯ ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಈ ಮುಂದಿನವುಗಳ ಬಗ್ಗೆ ಹೇಳುವರೆ –

(ಎ) ಮೈ.ರಾ.ರ.ಸಾ ಸಂಸ್ಥೆಯು ಚಿಂತಾಮಣಿಯಲ್ಲಿ ಆಧುನಿಕ ಬಸ್ ನಿಲ್ದಾಣವನ್ನು ನಿರ್ಮಿಸಲು ಉದ್ದೇಶಿಸಿರುತ್ತದೆ ಎಂಬುದು ಸರ್ಕಾರದ ಗಮನಕ್ಕೆ ಬಂದಿರುತ್ತದೆಯೆ;

(ಬಿ) ಇದರ ನಿರ್ಮಾಣದಲ್ಲಿ ಆಗಿರುವ ವಿಳಂಬಕ್ಕಾಗಿನ ಕಾರಣಗಳಾವುವು?

**ಶ್ರೀ ಮೊಹಮ್ಮದ್ ಅಲಿ (ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)**

(ಎ) ಚಿಂತಾಮಣಿ ತಾಲ್ಲೂಕ್ ಮತ್ತು ಕೋಲಾರ ಜಿಲ್ಲೆಯ ಇಡೀ ವಲಯದ ರಾಷ್ಟ್ರೀಕರಣದ ತರುವಾಯ ಬಸ್ ನಿಲ್ದಾಣವನ್ನು ನಿರ್ಮಾಣಮಾಡಲು ಉದ್ದೇಶಿಸಲಾಗಿದೆ.

(ಬಿ) ಬಸ್ ನಿಲ್ದಾಣದ ನಿರ್ಮಾಣ ಕಾರ್ಯವನ್ನು ಕೋಲಾರ ಜಿಲ್ಲೆಯಲ್ಲಿ ರಾಷ್ಟ್ರೀಕರಣವು ಸಂಪೂರ್ಣಗೊಂಡ ತರುವಾಯ ಕೈಗೊಳ್ಳಲಾಗುವುದು.

## ಬಸ್ ಪರವಾನಗಿಯನ್ನು ಹೊಂದಿರುವ ಖಾಸಗಿ ಸಾರಿಗೆ ಮಾಲೀಕರು

**ಶ್ರೀ ಎಚ್. ಸಿದ್ಧವೀರಪ್ಪ (ಹರಿಹರ)** – ಮಾನ್ಯ ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಈ ಮುಂದಿನವು ಬಗ್ಗೆ ತಿಳಿಸುವರೆ–(ಎ) ಬಸ್ ಪರವಾನಗಿಗಳನ್ನು ಹೊಂದಿರುವ ರಾಜ್ಯದಲ್ಲಿನ ಖಾಸಗಿ ಸಾರಿಗೆ ಮಾಲೀಕರ ಸಂಖ್ಯೆ;

(ಬಿ) 500 ಮೈಲಿಗಳಿಗಿಂತ ಹೆಚ್ಚು ದೈನಂದಿನ ಮೈಲಿದೂರದ ಮಾರ್ಗಗಳನ್ನು ಹೊಂದಿರುವ ಪರವಾನಗಿ ಮಾಲೀಕರ ಸಂಖ್ಯೆ ಮತ್ತು ಅವರು ಪರವಾನಗಿಗಳನ್ನು ಹೊಂದಿರುವ ಮಾರ್ಗಗಳು?

**ಶ್ರೀ ಮೊಹಮ್ಮದ್ ಅಲಿ (ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)** –

(ಎ) 1,180

(ಬಿ) 44.

ಮಾರ್ಗಗಳ ಪಟ್ಟಿಯನ್ನು ಸದನದ ಮುಂದೆ ಮಂಡಿಸಲಾಗಿದೆ.

## ಅಂತರ್‌ರಾಜ್ಯ ಬಸ್ ಮಾರ್ಗಗಳು

**ಶ್ರೀ ಸಿ.ಕೆ. ರಾಜಯ್ಯ ಶೆಟ್ಟಿ (ಚಿಕ್ಕನಾಯಕನಹಳ್ಳಿ)** – ಮಾನ್ಯ ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಈ ಮುಂದಿನವುಗಳ ಬಗ್ಗೆ ತಿಳಿಸುವರೆ –

(ಎ) ಈವರೆಗೆ ಮಂಜೂರು ಮಾಡಿರುವ ಅಂತರ್‌ರಾಜ್ಯ ಬಸ್ ಮಾರ್ಗಗಳ ಸಂಖ್ಯೆ ಮತ್ತು ಪರವಾನಗಿಗಳನ್ನು ಹೊಂದಿರುವ ಮಾಲೀಕರ ಅಥವಾ ಕಂಪನಿಗಳ ಹೆಸರು

(ಬಿ) ರಾಜ್ಯದ ಸ್ಥಳಗಳು ಮತ್ತು ಈ ಮಾರ್ಗಗಳ ಗಮ್ಯಸ್ಥಾನ;

(ಸಿ) ಮೈಸೂರು ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯುನಡೆಸುತ್ತಿರುವ ಮಾರ್ಗಗಳ ಸಂಖ್ಯೆ ಮತ್ತು ಹೆಸರುಗಳು.

**ಶ್ರೀ ಮೊಹಮ್ಮದ್ ಅಲಿ (ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)** –

(ಎ), (ಬಿ) ಹಾಗೂ (ಸಿ) 297 ಮಂಜೂರು ಮಾಡಿದ ಅಂತರ್‌ರಾಜ್ಯ ಮಾರ್ಗಗಳಿದ್ದು ಇವುಗಳಲ್ಲಿ,–

40 ಮಾರ್ಗಗಳನ್ನು ಮೈಸೂರು ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯುನಡೆಸುತ್ತಿದೆ.

ಇತರ ವಿವರಗಳನ್ನು ಸದನದ ಮುಂದೆ ಮಂಡಿಸಲಾದ ವಿವರಣಪಟ್ಟಿಯಲ್ಲಿ ಒದಗಿಸಲಾಗಿದೆ*

ಗೊತ್ತುವಳಿಯನ್ನು ಪರಿಗಣಿಸಲಾಗುವುದು.

**ಶ್ರೀ ಮೊಹಮ್ಮದ್ ಅಲಿ (ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)** – ಸ್ವಾಮಿ,

"ಮೋಟಾರು ವಾಹನಗಳ (ಮೈಸೂರು ತಿದ್ದುಪಡಿ) ವಿಧೇಯಕ, 1967ನ್ನು ಪರಿಗಣನೆಗೆ ತೆಗೆದುಕೊಳ್ಳತಕ್ಕದ್ದು ಎಂದು"

ಮಂಡಿಸಲು ನಾನು ಪ್ರಾರ್ಥಿಸುತ್ತೇನೆ.

**ಮಾನ್ಯ ಸಭಾಧ್ಯಕ್ಷರು** –

"ಮೋಟಾರು ವಾಹನಗಳ (ಮೈಸೂರು ತಿದ್ದುಪಡಿ) ವಿಧೇಯಕ, 1967ನ್ನು ಪರಿಗಣನೆಗೆ ತೆಗೆದುಕೊಳ್ಳತಕ್ಕದ್ದು ಎಂದು"

ಗೊತ್ತುವಳಿಯನ್ನು ಮಂಡಿಸಲಾಗಿದೆ.

**ಶ್ರೀ ಮೊಹಮ್ಮದ್ ಅಲಿ** – ಸ್ವಾಮಿ, ಸದನವು ಪ್ರಕರಣ 42ಕ್ಕೆ ತಿದ್ದುಪಡಿ ಮಾಡಲು ಮತ್ತು ಉಪ–ಪ್ರಕರಣ(2)ನ್ನು ಸೇರಿಸಲು ಇಚ್ಛಿಸಿದ್ದು, ಇದರ ಮೂಲಕ ಅಂತರ್‌ರಾಜ್ಯ ಪರವಾನಗಿಗಾಗಿನ ಎಲ್ಲಾ ಅರ್ಜಿಗಳನ್ನು ಪ್ರಾದೇಶಿಕ ಸಾರಿಗೆ ಪ್ರಾಧಿಕಾರಕ್ಕೆ ಬದಲಾಗಿ ರಾಜ್ಯ ಸಾರಿಗೆ ಪ್ರಾಧಿಕಾರಕ್ಕೆ ಸಲ್ಲಿಸುವಂತೆ ಅಗತ್ಯಪಡಿಸಿರುತ್ತದೆ. ಈಗ ಇದು, ಪ್ರತಿಯೊಂದು ಅರ್ಜಿಯ ಸಂಬಂಧದಲ್ಲಿ ರಾಜ್ಯ ಸಾರಿಗೆ ಪ್ರಾಧಿಕಾರವು ಪರವಾನಗಿಗಳನ್ನು ಮಂಜೂರು ಮಾಡುವುದಕ್ಕಾಗಿ ಪ್ರಾದೇಶಿಕ ಸಾರಿಗೆ ಪ್ರಾಧಿಕಾರದಂತೆ ಅದೇ ಕಾರ್ಯವಿಧಾನವನ್ನು ಅನುಸರಿಸತಕ್ಕದ್ದು ಎಂಬುದನ್ನು ಸ್ಪಷ್ಟಪಡಿಸಿಕೊಳ್ಳುವುದು ಅವಶ್ಯವಾಗಿರುವುದಾಗಿ ಪರಿಗಣಿಸಿರುತ್ತದೆ. ಇದು ಆನುಷಂಗಿಕ ತಿದ್ದುಪಡಿ ಮಾತ್ರವಾಗಿದ್ದು ಇದಕ್ಕಾಗಿ ಸದನವು ಈಗಾಗಲೇ ತನ್ನ ಅಂಗೀಕಾರವನ್ನು ನೀಡಿರುತ್ತದೆ.

ಅಪರಾಹ್ನ 4–30

**ಶ್ರೀ ಎಚ್. ಸಿದ್ಧವೀರಪ್ಪ** – ಸ್ವಾಮಿ ಈ ಕ್ರಮವನ್ನು ನಾನು ವಿರೋಧಿಸುತ್ತೇನೆ. ಹಾಗೆ ನಾನು ಹೇಳಬಹುದಾದರೆ, ಈ ಸರ್ಕಾರದ ಆಗಮನದನಂತರ 1962–67ರಿಂದ, ಮೂರನೆಯ ಸಾರ್ವತ್ರಿಕ ಚುನಾವಣೆ ತರುವಾಯ ಈ ಸಚಿವಸಂಪುಟವು ಅಧಿಕಾರದಲ್ಲಿದ್ದಾಗ, ಪ್ರತಿಫಲ ಸ್ವಭಾವದ ಭಾಗಶಃ ಹೆಚ್ಚಿನ ಸಂಖ್ಯೆಯ ಅಂತರರಾಜ್ಯ ಪರವಾನಗಿಗಳನ್ನು ಅಂದಿನ ಸರ್ಕಾರವು ನೀಡಕೂಡದು

ಎನ್ನಲಾದಂತಹ ವಿಶೇಷ ಪ್ರೀತಿಪಾತ್ರರಿಗೆ ನೀಡಲಾಗಿತ್ತು. ಇಂದು ಸಹಜವಾಗಿಯೇ, ನನ್ನ ಸ್ನೇಹಿತರಾದ ಶ್ರೀ ರಾಜಯ್ಯಶೆಟ್ಟಿಯವರು ಪ್ರಸ್ತಾಪಿಸಿರುವ ಅಂತರ್‌ರಾಜ್ಯ ಆಯ್ಕೆ ಬಗ್ಗೆ ನಿರ್ಧಾರಕ್ಕೆ ಬಂದಿರುವುದಿಲ್ಲ. ಆದರೆ ಅವರು ಉತ್ತರವನ್ನು ಮುದ್ರಿಸಿ ಪ್ರಕಟಿಸಿದ್ದು ಅದರಲ್ಲಿ 297 ಮಂಜೂರು ಮಾಡಿದ ಅಂತರರಾಜ್ಯ ಮಾರ್ಗಗಳಿದ್ದು ಇದರಲ್ಲಿ 40 ಮಾರ್ಗಗಳನ್ನು ಮೈಸೂರು ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯಿಂದನಡೆಸಲಾಗುತ್ತಿದೆ ಎಂಬುದಾಗಿರುತ್ತದೆ. ಇತರ ವಿವರಗಳನ್ನು ಸದನದ ಮುಂದೆ ಮಂಡಿಸಿರುವ ವಿವರಣೆಯಲ್ಲಿ ಒದಗಿಸಿರುತ್ತದೆ. ನಾನು ಆ ವಿವರಣೆಯನ್ನು ಸಹ ನೋಡಿದ್ದೇನೆ. ಸಾಮಾನ್ಯವಾಗಿ ಅಂತರ್‌ರಾಜ್ಯ ಮಾರ್ಗಗಳು ಬಹಳ ಪ್ರತಿಫಲ ಸ್ವರೂಪದ್ದಾಗಿದ್ದು ತಮ್ಮ ಕೆಲವು ಇತರ ಪ್ರೀತಿಪಾತ್ರರು, ಸ್ನೇಹಿತರು, ರಾಜಕೀಯ ಪಕ್ಷದವರು ಹಾಗೂ ಕಟ್ಟಾ ಅನುಯಾಯಿಗಳಿಗೆ ಇಂತಹ ಮಾರ್ಗಗಳನ್ನು ನೀಡುವ ದೃಷ್ಟಿಯಿಂದ ಉದ್ದೇಶಪೂರ್ವಕವಾಗಿ ಮತ್ತು ಬೇಕೆಂದೇ ಕೆಲವು ಮಾರ್ಗಗಳನ್ನು ವಿಶೇಷವಾಗಿ ನಿರ್ಮಾಣ ಮಾಡಿ ಅವರಿಗೆ ನೀಡಲಾಗಿರುತ್ತದೆ ಎಂಬುದನ್ನು ನೋಡಬಹುದಾಗಿರುತ್ತದೆ. ಅಂತಹ ಕೆಲವರವನ್ನುನೂರಾರು ಮೈಲಿಗಳವರೆಗೆ ಅಂದರೆ ಚಿತ್ರದುರ್ಗದಿಂದ ತಿರುಪತಿವರೆಗೆ, ಚಿತ್ರದುರ್ಗದಿಂದ ಚಿತ್ತೂರುವರೆಗೆ ಹಾಗೂ ಚಿತ್ರದುರ್ಗದಿಂದ ಧರ್ಮಸ್ಥಳದವರೆಗೆ ಓಡಿಸಲಾಗುತ್ತಿದೆ. ಮೈಸೂರು ಸರ್ಕಾರವು 2000ಕ್ಕಿಂತ ಹೆಚ್ಚು ಮಾರ್ಗಗಳನ್ನು ಹೊಂದಿರುತ್ತದೆ ಹಾಗೂ ಇವರು ಯಾಕೆ ಅಂತರ್‌ರಾಜ್ಯ ಮಾರ್ಗಗಳ ಸಂಪೂರ್ಣ ಹಕ್ಕನ್ನು ಸೇರಿಸಬಾರದು ಎಂಬುದಕ್ಕೆ ನನಗೆ ಯಾವುದೇ ಕಾರಣವು ಕಂಡುಬಂದಿಲ್ಲ. ಹಾಗೆ ಪ್ರತಿಫಲವಾಗಿಲ್ಲದಿರುವ ಇನ್ನೂ 40 ಮಾರ್ಗಗಳು ಇರುತ್ತವೆ. ಇವರು ತಮ್ಮ ಜನರು ಸಂಪತ್ತನ್ನು ಕಲೆಹಾಕಲು ಅವಕಾಶ ನೀಡಿರುತ್ತಾರೆ. ಇದು ಸಮಾಜವಾದವಾಗಿರುತ್ತದೆ. ಸಮಾಜವಾದಿ ರಾಜ್ಯದಲ್ಲಿನಮ್ಮ ಸ್ನೇಹಿತರೊಬ್ಬರು ಇನ್ನೊಂದು ಕಡೆ ಕುಳಿತುಕೊಂಡು ಸರಿಯಾದ ದಾರಿಯಲ್ಲಿ ಸಾಗಿಲ್ಲದಿರುವ ಸಮಾಜವಾದ, ರಾಷ್ಟ್ರೀಕರಣ ಹಾಗೂ ವಿವಿಧ ಇತರ ವಿಷಯಗಳ ಬಗ್ಗೆ ಜೋರು ಮಾತಿನಿಂದ ಕೂಗುತ್ತಿದ್ದಾರೆ. ಇದು ಇನ್ನೊಂದು ರೀತಿಯಾದ ವಿಧಾನವಾಗಿದ್ದು ಇದರಲ್ಲಿ ಇವರು ತಮ್ಮ ರಾಜಕೀಯ ಪಕ್ಷಕವರು ಮತ್ತು ಸ್ನೇಹಿತರೊಂದಿಗೆ ಅಧಿಕಾರ ಲೂಟಿ ಮಾಡುತ್ತಿದ್ದಾರೆ. ಆದ್ದರಿಂದ, ಇದು ರಾಜ್ಯ ಸಾರಿಗೆ ಪ್ರಾಧಿಕಾರ ಆಗಿರಲಿ ಅಥವಾ ಪ್ರಾದೇಶಿಕ ಸಾರಿಗೆ ಪ್ರಾಧಿಕಾರ ಆಗಿರಲಿ ಅಥವಾ ಯಾವುದೇ ಇತರ ಪ್ರಾಧಿಕಾರ ಆಗಿರಲಿ, ಪರವಾನಗಿಗಳನ್ನು ಹೇಗೆ ನೀಡಿರುತ್ತವೆ ಎಂಬುದುನಮಗೆ ಗೊತ್ತಿದೆ. ಇದಲ್ಲದೆ ಒಬ್ಬ ವಿಶೇಷ ಸಂಭಾವಿತ ವ್ಯಕ್ತಿ ಒಬ್ಬರು ಇರುವುದು ಎಲ್ಲರಿಗೂ ಸಹ ತಿಳಿದಿದ್ದು ನಾನು ಇವರ ಹೆಸರನ್ನು ಹೇಳಲು ಇಷ್ಟಪಡುವುದಿಲ್ಲ ಹಾಗೂ ಇವರು ಪ್ರತಿ ದಿವಸ ಸುಮಾರು 3000 ಮೈಲಿಗಳ ದೂರದವರೆಗೆ ಓಡಿಸುವ ಅಂತರ್‌ರಾಜ್ಯ ಪರವಾನಗಿಗಳನ್ನು ಹೊಂದಿದ್ದಾರೆ. ಈ ವಿಷಯಗಳು ಕಾಂಗ್ರೆಸ್ ಪಕ್ಷದವರನ್ನು ಮಾತ್ರ ಅವರ ಪಕ್ಷವನ್ನು ಮಾತ್ರ ಗಾಢವಾಗಿ ಕಾಪಾಡುತ್ತಿರುವುದು ವಾಸ್ತವಾಂಶವಾಗಿದ್ದು ಇವರು ಸಂತೋಷದಿಂದ ಇರುವಂತೆ ಕಾಣಬರುತ್ತದೆ. 3000 ಮೈಲಿಗಳಿಗೆ ಕಡೇಪಕ್ಷ ಈತನು ವಿವಿಧ ಕೆಲಸಗಳಿಗಾಗಿ ಭತ್ಯೆಗಳನ್ನು ನೀಡುವ ಮೂಲಕ ಪ್ರತಿ ಮೈಲಿಗೆ 1 ರೂ. ದರದಲ್ಲಿ ಪ್ರತಿ ದಿವಸಕ್ಕೆ 3000 ರೂ.ಗಳ ಒಟ್ಟು ವರಮಾನವನ್ನು ಮಾಡುತ್ತಾನೆ. ಅಂದರೆ ಅದು ಪ್ರತಿತಿಂಗಳಿಗೆ 90,000 ರೂಪಾಯಿಗಳಾಗುತ್ತದೆ. ಇದುನಮ್ಮ ಸ್ನೇಹಿತರ ರೀತಿಯಲ್ಲಿ

ರಾಷ್ಟ್ರದಲ್ಲಿರುವ ಸಮಾಜವಾದವಾಗಿರುತ್ತದೆ. ಅನೇಕ ಸಂಗತಿಗಳುನಡೆದಿರುತ್ತವೆ. ಸರಿಯಾದ ಲೆಕ್ಕವನ್ನು ತೆಗೆದುಕೊಂಡರೆ, ನಾವು ಈ ರಾಷ್ಟ್ರೀಕರಣಗೊಂಡ ಮಾರ್ಗಗಳಿಂದ ಕನಿಷ್ಠಪಕ್ಷ 5 ರಿಂದ 6 ಕೋಟಿಗಳನ್ನು ಮಾಡಬಹುದು ಎಂಬುದು ನನಗೆ ಗೊತ್ತು. ಈ ದಿನಗಳಲ್ಲಿನಮಗೆ ಹಣದ ಕೊರತೆಯಾದಾಗ ಅವರು ಬಂಡವಾಳ ಹೂಡಿಕೆ ಹಣದಿಂದ ಶೇಕಡ 2 ಅಥವಾ 3 ರಷ್ಟನ್ನು ಹವಣಿಸಿಕೊಳ್ಳಲಾಗುವುದಿಲ್ಲ. ನಾನು ಕೆಲವು ಕಾಲ ಇದರ ಜವಾಬ್ದಾರಿಯಲ್ಲಿದ್ದೆ ಹಾಗೂ ನೀವು ಹಿಂದಿನ ದಾಖಲೆಗಳನ್ನು ಪರಿಶೀಲಿಸಿದರೆ ನಾವು ಸುಮಾರು 30 ಮೈಲಿಯಷ್ಟು ಓಡಿಸುತ್ತಿದ್ದು ಯಾರೇ ಖಾಸಗಿಯಾಗಿನಡೆಸುತ್ತಿರುವವನು ಮಾಡುವಂತಹ ಎಲ್ಲಾ ವೆಚ್ಚಗಳನ್ನು ನೀಡಿಯೂ ನಾವು ಶೇ.34ರಷ್ಟು ಒಟ್ಟು ಲಾಭವನ್ನು ಮಾಡುತ್ತಿದ್ದೆವು ಎಂಬುದು ನಿಮಗೆ ಗೊತ್ತಾಗುತ್ತದೆ. ಆಗನಮ್ಮ ಸ್ನೇಹಿತರು ನಾವೆಲ್ಲರೂ ಮಾರ್ವಾಡಿಗಳು ಎಂಬುದಾಗಿ ಹೇಳುತ್ತಿದ್ದರು. 1,108 ಖಾಸಗಿಯಾಗಿ ಓಡಿಸುವವರು ಇದ್ದು ಅವರಲ್ಲಿ ಹೆಚ್ಚು ಮಂದಿ ರಾಜ್ಯದ ಹಿತಾಸಕ್ತಿಗೆ ಹಾನಿಯಾಗುವಂತೆ ಕೆಲಸ ಮಾಡುತ್ತಿದ್ದಾರೆ ಎಂಬುದಾಗಿ ನಾನು ಖಚಿತಪಡಿಸುತ್ತೇನೆ. ಇದು ಪರಿಸ್ಥಿತಿಯಾಗಿರುವಾಗ, ಈ ಕ್ರಮವನ್ನು ನಾನು ವಿರೋಧಿಸುತ್ತೇನೆ, ಯಾಕೆಂದರೆ ಇದು ತಮ್ಮ ಸ್ವಂತ ಪ್ರಯೋಜನಕ್ಕಾಗಿ ಮತ್ತು ತಮ್ಮ ಪಕ್ಷದ ಜನರ ಪ್ರಯೋಜನಕ್ಕಾಗಿ ಮಾಡಿಕೊಂಡಿರುವ ವ್ಯವಸ್ಥೆಯಾಗಿರುತ್ತದೆ.

**ಶ್ರೀ ಎಸ್. ಗೋಪಾಲಗೌಡ** – ಸ್ವಾಮಿ, 1967ನೇ ಇಸವಿ ಮೈಸೂರು ರಾಜ್ಯದ ಮೋಟಾರು ವಾಹನಗಳ ತಿದ್ದುಪಡಿ ಮಸೂದೆಯನ್ನು ವಿರೋಧಿಸುತ್ತಾ ಮಾನ್ಯ ಸಿದ್ಧವೀರಪ್ಪನವರು ಹೇಳಿದಂತಹ ಮಾತುಗಳನ್ನು ಸಮರ್ಥನೆ ಮಾಡುತ್ತಾ ನಾನು ಇನ್ನೊಂದು ಸ್ವಲ್ಪ ಈ ವಿಷಯದಲ್ಲಿ ಸೇರಿಸಿ ಹೇಳುವಂಥಾದ್ದು ಇದೆ. ಶ್ರೀಮಾನ್ ಸಿದ್ಧವೀರಪ್ಪನವರ ಸರ್ಕಾರ ಇದ್ದಾಗ ಬೆಂಗಳೂರಿನ ಬಿ.ಟಿ.ಎಸ್.ಅನ್ನುನಮ್ಮ ರಾಜ್ಯದಲ್ಲಿ ಮೊದಲು ಸಾರಿಗೆ ರಾಷ್ಟ್ರೀಕರಣ ಮಾಡಿ ಒಂದು ಹೆಜ್ಜೆಯನ್ನು ಇಟ್ಟರು. ಜೊತೆಗೆ ಒಮ್ಮೆಗೇ ಎಲ್ಲವನ್ನೂ ರಾಷ್ಟ್ರೀಕರಣ ಮಾಡುವುದು ಕಷ್ಟವಾಗುತ್ತದೆ, ಆದ್ದರಿಂದ ಯೋಜನೆಯ ಪ್ರಕಾರ ಸಾರಿಗೆ ರಾಷ್ಟ್ರೀಕರಣ ಮಾಡುತ್ತೇವೆ ಎಂದು ಹೇಳಿದರು. ಮುಂಬೈ ರಾಜ್ಯದಲ್ಲಿ ಹಿಂದೆಯೇ ಸಾರಿಗೆ ರಾಷ್ಟ್ರೀಕರಣ ಆಗಿತ್ತು. ಈಗನಮ್ಮ ಸ್ನೇಹಿತರಾದ ಸಿದ್ಧವೀರಪ್ಪನವರು ಈ ವಿಷಯದಲ್ಲಿ ಹೇಳಿದ್ದಕ್ಕಿಂತ ಕಟುವಾಗಿ ಹೇಳುವುದಕ್ಕಾಗುವುದಿಲ್ಲ. ಕಾಂಗ್ರೆಸ್ಸಿನವರು ದೇಶಕ್ಕೆ ಕೊಟ್ಟಂತಹ ವಚನಗಳಲ್ಲಿ ಭಂಗ ಮಾಡುವಂತಹ ವಚನಗಳಲ್ಲಿ ಇದೂ ಒಂದು. ಇದರಲ್ಲಿ ಸ್ವಾರ್ಥಸಾಧನೆ ಆಗಿದೆ. ಈ ಮಾಲೀಕರುಗಳು ಚುನಾವಣೆಗಳಲ್ಲಿ ಬಹಳ ಮಟ್ಟಿಗೆ ಕಾಂಗ್ರೆಸ್ಸಿನ ಹಿತಕ್ಕೆ ದುಡಿದಿದ್ದಾರೆ. ಅವರ ಹಿತಾಸಕ್ತಿಯನ್ನು ಕಾಪಾಡುವುದು ಈ ಸರ್ಕಾರದ ಒಂದು ಆದ್ಯ ಕರ್ತವ್ಯ ಎನ್ನುವ ರೀತಿಯಲ್ಲಿ ನಿವಾರಿಸಿಕೊಂಡು ಬಂದಿದ್ದಾರೆ. ಇದೇ ಸಂದರ್ಭದಲ್ಲಿ ರಾಷ್ಟ್ರೀಕರಣ ನೀತಿ ಮತ್ತು ರಾಷ್ಟ್ರೀಕರಣ ಆಗಿರತಕ್ಕಂತಹ ರಸ್ತೆಗಳ ವಿಷಯದಲ್ಲಿ ಅಪಾರವಾದನಷ್ಟ ರಾಜ್ಯಕ್ಕೆ ಉಂಟಾಗುವ ರೀತಿಯಲ್ಲಿ ಮತ್ತು ರಾಷ್ಟ್ರೀಕರಣ ಮಾಡತಕ್ಕಂಥ ನೀತಿ ಮುಂದುವರಿಯಬಾರದು, ವಿಸ್ತಾರವಾಗಬಾರದು ಇದನ್ನು ಸರ್ಕಾರದವರ ಸ್ವಭಾವ, ಸ್ವಪ್ರಯೋಜನ ಮತ್ತು ತಮ್ಮ ಹಿತದ ವಿಷಯಗಳನ್ನು ಕಾಪಾಡಿಕೊಳ್ಳುವ ದೃಷ್ಟಿಯಿಂದ ರಾಜ್ಯದ ಹಿತ, ಜನತೆಯ ಹಿತವನ್ನು ಇತರ ಹಿತಗಳಿಗೆ ಬಲಿಕೊಟ್ಟು ತಾವು ಒಪ್ಪಿಕೊಂಡಿದ್ದ

ರಾಷ್ಟ್ರೀಕರಣ ಎನ್ನತಕ್ಕಂಥ ಒಂದು ತತ್ವಕ್ಕೆ ತಿಲಾಂಜಲಿ ಕೊಟ್ಟು ಈ ಕೆಲಸವನ್ನುನಡೆಸಿಕೊಂಡು ಬರುತ್ತಿದ್ದಾರೆ. ನಿಮ್ಮ ಕೃತ್ಯಗಳಿಗೆ ಕಾನೂನು ಮುದ್ರೆಯನ್ನು ಒತ್ತತಕ್ಕಂಥ ಸಂಸ್ಥೆಯಲ್ಲಿ ನಿಮ್ಮ ಜನರೇ, ನಿಮಗೆ ಬೇಕಾದವರೇ ಇರುತ್ತಾರೆ. ಇದೆಲ್ಲಾನಡೆದಿದೆ.

ಸ್ವಾಮಿ, ಮಾನ್ಯ ಮಂತ್ರಿಗಳು ಇದು ಒಂದು ಸಣ್ಣ ವಾಖ್ಯದ ಮಸೂದೆಯೆಂದು ಹೇಳಿದರು. ಈ ತಿದ್ದುಪಡಿಯ ಬಗ್ಗೆ ಹೆಚ್ಚು ಹೇಳುವುದು ಏನೂ ಇಲ್ಲದಿದ್ದರೂ ಸಹ, ಈ ರಾಷ್ಟ್ರೀಕರಣ ವಿಚಾರದಲ್ಲಿ ಸರ್ಕಾರದ ಕ್ರಮವನ್ನು ಎಷ್ಟು ತೀವ್ರವಾಗಿ ವಿರೋಧಿಸಿದರೂ ಕೂಡ ಕಡಿಮೆಯಾಗುತ್ತದೆ ಮತ್ತು ಈ ಸರ್ಕಾರದವರು ಎಷ್ಟೊಂದು ಅನೀತಿಯುತವಾದ ರೀತಿಯಲ್ಲಿನಡೆದುಕೊಂಡು ಹೋಗುತ್ತಿದ್ದಾರೆಂದರೆ, ಬೊಕ್ಕಸಕ್ಕೆನಷ್ಟವಾಗುವ ರೀತಿಯಲ್ಲಿ, ಕೇವಲ ತಮ್ಮ ಸ್ನೇಹಿತರುಗಳಿಗೆ ತಮ್ಮ ಬಂಧುಗಳಿಗೆ ಅನುಕೂಲವಾಗುವಂತಹ ನೀತಿಯನ್ನು ಅನುಸರಿಸುತ್ತಿದ್ದಾರೆ. ಇದು ದೇಶದ

**ಮಾನ್ಯ ಸಭಾಧ್ಯಕ್ಷರು** – ಕಾರ್ಯನೀತಿ ವಿಷಯಕ್ಕೆ ಸಂಬಂಧಿಸಿದಂತೆ, ಇದು ಸರಿಯಾಗಿರುತ್ತದೆ. ನಾನು ಸದಸ್ಯರ ವಿಶೇಷ ಹಕ್ಕುಗಳನ್ನು ಕಡಿಮೆ ಮಾಡಲು ಇಷ್ಟಪಡುವುದಿಲ್ಲ.

**ಶ್ರೀ ಎಂ.ಎಚ್. ಜಯಪ್ರಕಾಶ ನಾರಾಯಣ** – ಸ್ಥಳೀಯ ಸಂಸ್ಥೆಗಳು ಹಣದ ಕೊರತೆಯಿಂದ ಆಸ್ಪತ್ರೆಯನ್ನುನಡೆಸುವುದಕ್ಕಾಗುವುದಿಲ್ಲ ಎಂದು ಹೇಳುವಾಗ ಸರಕಾರದವರೇ ಅಲ್ಲಿ ಆ ಕೆಲಸವನ್ನು ವಹಿಸಿಕೊಂಡು ವೈದ್ಯಕೀಯ ಸೌಕರ್ಯವನ್ನು ಒದಗಿಸುವ ವಿಚಾರದಲ್ಲಿ ಸರಕಾರದ ನೀತಿಯೇನು?

**ಶ್ರೀ ಜಿ. ಬಸವಣ್ಣಪ್ಪ** – ಇದು ಕಾರ್ಯನೀತಿ ವಿಷಯವಾಗಿರುವುದರಿಂದ, ನಾನು ಪ್ರಸ್ತಾಪಿಸಲು ಇಚ್ಛಿಸುತ್ತೇನೆ.

## ರಾಷ್ಟ್ರೀಕರಣಗೊಳಿಸಿದ ಬಸ್ ಮಾರ್ಗಗಳು

**ಶ್ರೀ ಎಂ. ಮಲ್ಲಪ್ಪ (ಬೀರೂರು)** – ದಯವಿಟ್ಟು ಸಾರಿಗೆ ಸಚಿವರು ಈ ಮುಂದಿನವುಗಳನ್ನು ತಿಳಿಸುವರೆ –

ಎ. ರಾಜ್ಯದಲ್ಲಿ ಈವರೆಗೆ ರಾಷ್ಟ್ರೀಕರಣಗೊಳಿಸಿರುವ ಬಸ್ ಮಾರ್ಗಗಳ ಸಂಖ್ಯೆ;

ಬಿ. ರಾಜ್ಯದಲ್ಲಿ ಖಾಸಗಿ ಬಸ್ ಓಡಿಸುತ್ತಿರುವವರು ಪೂರ್ಣ ಹತೋಟಿ ಹೊಂದಿರುವ ಬಸ್ ಮಾರ್ಗಗಳ ಸಂಖ್ಯೆ;

ಸಿ.ರಾಜ್ಯದಲ್ಲಿ ರಾಷ್ಟ್ರೀಕರಣಗೊಳಿಸುವುದಕ್ಕಾಗಿ ಉದ್ದೇಶಿಸಿರುವ ಬಸ್ ಮಾರ್ಗಗಳ ಒಟ್ಟು ಮೈಲಿದೂರ;

ಡಿ. ಬಸ್ ಮಾರ್ಗಗಳ ರಾಷ್ಟ್ರೀಕರಣಕ್ಕಾಗಿ ವಹಿಸಿದ ವೆಚ್ಚದ ಮೊತ್ತ;

ಇ. ರಾಜ್ಯದಲ್ಲಿ ಬಸ್ ಮಾರ್ಗಗಳ ರಾಷ್ಟ್ರೀಕರಣದ ಕಾರಣದಿಂದ ಕಲ್ಪಿಸಿರುವ ಬಂಡವಾಳ ಹೂಡಿಕೆ ಮೇಲಿನ ಆದಾಯದ ಒಟ್ಟು ಪ್ರಮಾಣ?

**ಶ್ರೀ ಮೊಹಮ್ಮದ್ ಅಲಿ (ಸಾರಿಗೆ ಸಚಿವರು)** –

| | | | |
|---|---|---|---|
| 1. | ಆನೇಕಲ್ ಯೋಜನೆ | – | 14 ಮಾರ್ಗಗಳು |
| 2. | ಹಾಸನ ಯೋಜನೆ | – | 98 " |
| 3. | ಮೈಸೂರು ಯೋಜನೆ | – | 64 " |
| 4. | ಬಳ್ಳಾರಿ ಯೋಜನೆ | – | 86 " |
| 5. | ಕನಕಪುರ ಯೋಜನೆ | – | 29 " |
| 6. | ಹುಬ್ಬಳ್ಳಿ ಯೋಜನೆ | – | 170 " |
| 7. | ಬಿಜಾಪುರ ಯೋಜನೆ | – | 173 " |
| 8. | ಬೆಳಗಾವಿ ಯೋಜನೆ | – | 175 " |
| 9. | ಗುಲ್ಬರ್ಗ ಯೋಜನೆ | – | 71 " |
| 10. | ಹುಬ್ಬಳ್ಳಿನಗರ ಸೇವೆ | – | 94 " |
| 11. | ಹುಬ್ಬಳ್ಳಿನಗರ ಸೇವೆ | – | ಇಡೀನಗರ ಪ್ರದೇಶ ಕೆಲವು ಸುತ್ತಮುತ್ತಣ ಪ್ರದೇಶಗಳು |
| 12. | ಬೆಂಗಳೂರು ಸಾರಿಗೆ | – | ಇಡೀನಗರ ಪ್ರದೇಶ ಕೆಲವು ಸುತ್ತಮುತ್ತಣ ಸೇವೆಗಳು ಪ್ರದೇಶಗಳು |
| 13. | ಗುಲ್ಬರ್ಗಾ ಸೇಡಂ ಯೋಜನೆ | – | 1 ಮಾರ್ಗ |

14. ಮಂಗಳೂರು ಯೋಜನೆ – 31 ಮಾರ್ಗಗಳು

15. ಶಿವಮೊಗ್ಗ ಯೋಜನೆ – 48 ಮಾರ್ಗಗಳು

ಬಿ) ಏನೂ ಇಲ್ಲ

ಸಿ) ಸರಿಸುಮಾರು 60,000 ಮೈಲಿಗಳು

ಡಿ) ಈವರೆಗೆ 21.60 ಕೋಟಿ ರೂಪಾಯಿಗಳು

ಕಳೆದ ನಾಲ್ಕು ವರ್ಷಗಳ ಅವಧಿಯಲ್ಲಿ ಶೇ. 10 ಕ್ಕಿಂತ ಹೆಚ್ಚು. ಇದು ಸಹಭಾಗಿಯಾಗಿರುವ ರಾಜ್ಯಗಳು ಒದಗಿಸಿದ ಬಂಡವಾಳದ ಮೇಲೆ 6 $^1/_2$ ಯಷ್ಟು ಇವುಗಳಿಗೆ ಸಂದಾಯ ಮಾಡಿರುವ ಬಂಡವಾಳದ ಮೇಲಿನ ಬಡ್ಡಿಯನ್ನು ಒಳಗೊಂಡಿರುತ್ತದೆ.

**ಶ್ರೀ ಮಲ್ಲಪ್ಪ –** ದಾವಣಗೆರೆಯಿಂದ ಚಿತ್ರದುರ್ಗದನಡುವೆ ಇರುವ ಮಾರ್ಗವನ್ನು ತಕ್ಷಣವೇ ರಾಷ್ಟ್ರೀಕರಣಗೊಳಿಸಲಾಗುವುದೇ ಎಂಬುದನ್ನು ನಾನು ತಿಳಿದುಕೊಳ್ಳಬಹುದೇ. ಈ ಬಗ್ಗೆ ಸದನದಲ್ಲಿ ಭರವಸೆಯನ್ನು ನೀಡಲಾಗಿರುತ್ತದೆ. ಈವರೆಗೆ ಮಾರ್ಗವನ್ನು ರಾಷ್ಟ್ರೀಕರಣಗೊಳಿಸದಿರುವುದಕ್ಕಾಗಿನ ವಿಶೇಷ ಕಾರಣಗಳು ಯಾವುವು? ರಸ್ತೆ ಸಾರಿಗೆ ಸಂಸ್ಥೆಗೆ ಭಾರಿನಷ್ಟ ಉಂಟಾಗಿರುವ ಮಾರ್ಗಗಳಲ್ಲಿ ಖಾಸಗಿ ಬಸ್ ಗಳನ್ನು ಓಡಿಸಲು ಯಾತಕ್ಕೆ ಅವಕಾಶ ನೀಡಲಾಗಿದೆ?

**ಶ್ರೀ ಮೊಹಮ್ಮದ್ ಅಲಿ –** ಯಾವುದೇ ಷರತ್ತಿಲ್ಲದ ಭರವಸೆಯನ್ನು ನೀಡಲಾಗಿದೆ ಎಂಬುದಾಗಿ ನಾನು ಭಾವಿಸಿಲ್ಲ. ರಸ್ತೆ ಸಾರಿಗೆ ಸಂಸ್ಥೆಯು ರಾಷ್ಟ್ರೀಕರಣಗೊಳಿಸುವುದಕ್ಕಾಗಿ ಎಲ್ಲಾ ಹತ್ತಿರದ ಪ್ರದೇಶಗಳನ್ನು ತೆಗೆದುಕೊಳ್ಳಲು ಉದ್ದೇಶಿಸಿರುತ್ತದೆ ಎಂಬುದನ್ನು ಅಷ್ಟೇ ಹೇಳಲಾಗಿದೆ.

**ಶ್ರೀ ಎಚ್.ಬಿ. ಜ್ವಾಲನಯ್ಯ –** ಮೈಸೂರು ರಾಜ್ಯದಲ್ಲಿ ರಾಷ್ಟ್ರೀಕರಣ ಮಾಡುವುದಕ್ಕೆ ಸಾಧ್ಯವಿರುವ ರಸ್ತೆಯ ಒಟ್ಟು ಉದ್ದವೆಷ್ಟು? (ಉ) ಪ್ರಶ್ನೆಗೆ ಉತ್ತರ ಕೊಟ್ಟಿರುವುದರಲ್ಲಿ 10 ಪರ್ಸೆಂಟ್ ಹೆಚ್ಚಿಗೆ ಬಂದಿದೆ ಎಂದು ಹೇಳಿರುವುದು ನೆಟ್ ಪ್ರಾಫಿಟ್ಟೇ ಅಥವಾ ಗ್ರಾಸ್ ಪ್ರಾಫಿಟ್ಟೇ? ರಾಷ್ಟ್ರೀಕರಣ ಮಾಡಿರುವ ಕಡೆ ಖಾಸಗಿ ಬಸ್ಸು ಮಾಲೀಕರ ಬಸ್ಸುಗಳನ್ನು ಸರಕಾರ ತೆಗೆದುಕೊಳ್ಳುವುದಕ್ಕೆ ಪ್ರಯತ್ನ ಮಾಡುವುದೇ?

**ಶ್ರೀ ಮೊಹಮದ್ ಅಲಿ –** ಸ್ವಾಮಿ, ಶೇ.10ಕ್ಕೆ ಸಂಬಂಧಿಸಿದಂತೆ ನೀಡಲಾಗಿರುವಂತಹ ಅಂಕಿ–ಅಂಶಗಳು ಆದಾಯಕ್ಕೆ ಸಂಬಂಧಿಸುವುದು ಮಾತ್ರವಾಗಿರುವುದಿಲ್ಲ. ಆದರೆ ಇದರಲ್ಲಿ ರಸ್ತೆ ಸಾರಿಗೆ ಸಂಸ್ಥೆಯಲ್ಲಿನ ಬಂಡವಾಳ ಹೂಡಿಕೆಗಾಗಿ ಸರ್ಕಾರಕ್ಕೆ ನಾವು ಸಂದಾಯ ಮಾಡಿರುವ ಬಡ್ಡಿಯು ಒಳಗೊಳ್ಳುತ್ತದೆ. ಮಾರ್ಗಗಳನ್ನು ರಾಷ್ಟ್ರೀಕರಣಗೊಳಿಸಲಾಗಿರುವ ಖಾಸಗಿಯಾಗಿ ಓಡಿಸುತ್ತಿರುವವರ ಮತ್ತು ರಸ್ತೆ ಸಾರಿಗೆ ಸಂಸ್ಥೆಯ ಬಸ್‌ಗಳನ್ನು ಖರೀದಿಸುವ ಯಾವುದೇ ಪ್ರಸ್ತಾಪವಿರುವುದಿಲ್ಲ.

**ಶ್ರೀ ಸಿದ್ಧಯ್ಯ ಕಾಶಿಮಠ್** – ರಾಜ್ಯದಲ್ಲಿರುವ ಎಲ್ಲಾ ಮಾರ್ಗಗಳನ್ನು ರಾಷ್ಟ್ರೀಕರಣಗೊಳಿಸುವುದಕ್ಕಾಗಿ ಅಗತ್ಯವಿರುವ ಸಮಯವನ್ನು ನಾನು ತಿಳಿದುಕೊಳ್ಳಬಹುದೇ?

**ಶ್ರೀ ಮೊಹಮದ್ ಅಲಿ** – ಇದು ನಾಲ್ಕನೇ ಪಂಚವಾರ್ಷಿಕ ಯೋಜನೆಯ ಯೋಜನಾ ಹಂಚಿಕೆಗಳಲ್ಲಿನ ಷರತ್ತುಗಳ ಮೇಲೆ ಅವಲಂಬಿಸಿರುತ್ತದೆ.

**ಶ್ರೀ ಹೆಚ್. ಸಿದ್ದವೀರಪ್ಪ** – ಬೆಂಗಳೂರಿನಿಂದ ಬೆಳಗಾವಿವರೆಗಿನ ಇಡೀ ಮಾರ್ಗವನ್ನು ಚಿತ್ರದುರ್ಗ ಮತ್ತು ಹರಿಹರದನಡುವೆಯ ತುಣುಕು ಹೊರತುಪಡಿಸಿ, ರಾಷ್ಟ್ರೀಕರಣಗೊಳಿಸಲಾಗಿದೆ ಎಂಬುದು ನಿಮಗೆ ತಿಳಿದಿದೆಯೇ. ಪುನರಾವರ್ತಿತ ಬೇಡಿಕೆಗಳು ಮತ್ತು ಕೋರಿಕೆಗಳ ಬದಲಾಗಿಯೂ, ಸರ್ಕಾರವು ಯಾತಕ್ಕೆ ಆ ಮಾರ್ಗದ ತುಣುಕನ್ನು ತೆಗೆದುಕೊಳ್ಳಲು ಪ್ರಯತ್ನಿಸಲಿಲ್ಲ ಮತ್ತು ಆ ತುಣುಕನ್ನು ನೀವು ತೆಗೆದುಕೊಳ್ಳಲು ಇರುವ ಅಡ್ಡಿಯಾದರೂ ಏನು ಎಂಬುದನ್ನು ನಾನು ತಿಳಿದುಕೊಳ್ಳಬಹುದೇ?

**ಶ್ರೀ ಮೊಹಮದ್ ಅಲಿ** – ಬೆಳಗಾವಿವರೆಗಿನ ಮಾರ್ಗಗಳನ್ನು ರಾಷ್ಟ್ರೀಕರಣಗೊಳಿಸಲಾಗಿದೆ ಎಂಬುದು ನಿಜವೆ. ಆದರೆ ಚಿತ್ರದುರ್ಗ ಜಿಲ್ಲೆಯಲ್ಲಿನ ಎಲ್ಲಾ ಮಾರ್ಗಗಳನ್ನು ರಾಷ್ಟ್ರೀಕರಣಗೊಳಿಸಿರುವುದಿಲ್ಲ. ಶಾಖಾ ಮಾರ್ಗಗಳಿಗಾಗಿ ಚಿತ್ರದುರ್ಗ ಮತ್ತು ಹರಿಹರನಡುವೆ ಇರುವ ರಸ್ತೆಯಲ್ಲಿ ವಿಸ್ತರಿಸಲು ನಾವು ಅವಕಾಶಕೊಡಬೇಕಾಗುತ್ತದೆ. ಆದುದರಿಂದ, ಇದು ರಸ್ತೆ ಸಾರಿಗೆ ಸಂಸ್ಥೆಯು ಆ ಮಾರ್ಗವನ್ನು ರಾಷ್ಟ್ರೀಕರಣ ಮಾಡಿದ್ದರೂ ಕೂಡ ಪೂರ್ಣ ಹತೋಟಿ ಮಾರ್ಗಗಳು ಆಗುವುದಿಲ್ಲ.

**ಶ್ರೀ ಎಚ್. ಸಿದ್ಧವೀರಪ್ಪ** – ಸ್ವಾಮಿ, ನೀವುನೂರಾರು ಸಾರಿಗೆ ವಾಹನಗಳನ್ನುನಡೆಸುವವರನ್ನು ಸ್ಥಾನಾಂತರ ಮಾಡುವ ಮೂಲಕ ಶಿವಮೊಗ್ಗದಿಂದ ಹರಿಹರವರೆಗಿನ ಒಂದು ಹೆಚ್ಚುವರಿ ಹೊಸ ಮಾರ್ಗವನ್ನು ತೆಗೆದುಕೊಳ್ಳಲು ಇಚ್ಛಿಸಿದ್ದೀರಿ. ಇದನ್ನು ವಿಸ್ತರಿಸಲು ನಿಮಗೆ ಇರುವಂತಹ ಅಡ್ಡಿಯಾದರು ಏನು ಎಂಬ ವಿಷಯವನ್ನು ನಾನು ತಿಳಿದುಕೊಳ್ಳಬಹುದೇ? ಕಾಲಾವಕಾಶವನ್ನು ನೀಡಲಾಗಿರುತ್ತದೆ ಎಂಬುದು ಸಹ ನಿಮಗೆ ಗೊತ್ತಿರುತ್ತದೆ.

**ಶ್ರೀ ಜೆ.ಪಿ. ಸರ್ವೇಶ್ (ಸೇಡಂ)** – (ಉರ್ದುವಿನಲ್ಲಿ)

**ಶ್ರೀ ಮೊಹಮದ್ ಅಲಿ** – ಸ್ವಾಮಿ, ಮಾನ್ಯ ಸದಸ್ಯರುಗಳು ನೀಡಿರುವ ಹೇಳಿಕೆಗಳು ಈ ಸಂದರ್ಭಕ್ಕೆ ಹೊರತಾಗಿರುತ್ತವೆ ಎಂಬುದಾಗಿ ನನಗೆ ಕಂಡುಬರುತ್ತದೆ. ಆನುಷಂಗಿಕ ತಿದ್ದುಪಡಿಯನ್ನು ಅಂಗೀಕರಿಸುವ ಪ್ರಶ್ನೆಯು ತುಂಬಾ ಸರಳವಾಗಿರುತ್ತದೆ. ಆದರೆ, ಅಂತರ್‌ರಾಜ್ಯ ಪರವಾನಗಿಗಳನ್ನು ಮನಸೋ ಇಚ್ಛೆಯಾಗಿ ನೀಡಲಾಗಿದ್ದು ಸರ್ಕಾರವು ಅಂತ ಪರವಾನಗಿಗಳನ್ನು ನೀಡುವಲ್ಲಿ ಕೆಲವರಿಗೆ ಅನುಗ್ರಹಿಸಿರುತ್ತದೆ ಎಂಬುದಾಗಿ ಆಪಾದಿಸಲಾಗಿದೆ. ತೋರಿಸಿರುವ 297 ಸಂಖ್ಯೆಯು ದೋಷವಾಗಿರುತ್ತದೆ, ಯಾಕೆಂದರೆ ಬಹುಮಟ್ಟಿಗೆ ಎಲ್ಲಾ ಪರವಾನಗಿಗಳನ್ನು ಉಚ್ಛನ್ಯಾಯಾಲಯದ ತೀರ್ಮಾನದ ಪರಿಣಾಮವಾಗಿ ಪ್ರಾದೇಶಿಕ ಸಾರಿಗೆ ಪ್ರಾಧಿಕಾರದಿಂದ ನೀಡಲಾಗಿದೆ ಎಂಬುದನ್ನು

ಸದನದ ಗಮನಕ್ಕೆ ತರಲು ನಾನು ಇಷ್ಟಪಡುತ್ತೇನೆ. ಉಚ್ಚ ನ್ಯಾಯಾಲಯವು, ಒಂದು ಅಂತರರಾಜ್ಯ ಒಪ್ಪಂದವು ಆಗಿರಲಿ ಅಥವಾ ಇಲ್ಲದಿರಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಯು ಇದರ ಅಧಿಕಾರವ್ಯಾಪ್ತಿಗೆ ಸಂಬಂಧಪಡುವಷ್ಟರ ಮಟ್ಟಿಗೆ ಅಂತರ್‌ರಾಜ್ಯ ಪರವಾನಗಿಗಳನ್ನು ನೀಡಬೇಕಾಗುತ್ತದೆ ಹಾಗೂ ಪಕ್ಷಕಾರರು ಪ್ರತಿಕ್ರಮಕ್ಕಾಗಿ ಸಂಬಂಧಪಟ್ಟ ಸರ್ಕಾರಗಳನ್ನು ಸಂಪರ್ಕಿಸಬೇಕೆಂದು ತೀರ್ಪು ನೀಡಿರುತ್ತದೆ. ಆದುದರಿಂದ, ಕಾನೂನು ಸ್ಥಿತಿ ಮತ್ತು ಉಚ್ಚನ್ಯಾಯಾಲಯದ ತೀರ್ಮಾನದ ದೃಷ್ಟಿಯಲ್ಲಿ, ಅನೇಕ ಜನರು ಅಂತರ್‌ರಾಜ್ಯ ಪರವಾನಗಿಗಳಿಗಾಗಿ ಅರ್ಜಿ ಸಲ್ಲಿಸಿದ್ದು ಪ್ರಾದೇಶಿಕ ಸಾರಿಗೆ ಅಧಿಕಾರಿಯಿಂದ ಪರವಾನಗಿಗಳನ್ನು ಪಡೆದುಕೊಂಡಿದ್ದಾರೆ. ಆದರೆ, ಇವರುಗಳು ಇತರ ಸರ್ಕಾರಗಳಿಂದ ಮೇಲು ಸಹಿಯನ್ನು ಪಡೆದುಕೊಳ್ಳಲು ಸಾಧ್ಯವಾಗಿಲ್ಲ, ಯಾಕೆಂದರೆ ಮೈಸೂರು ಸರ್ಕಾರವು ಪರಸ್ಪರ ಆಧಾರದ ಮೇಲೆ ಒಪ್ಪಂದವನ್ನು ಮಾಡಿಕೊಂಡಿರುವುದಿಲ್ಲ. 297ರಲ್ಲಿ ಸುಮಾರು ಶೇ.98ರಷ್ಟು ಮಂದಿ ಇವರು ನೆರೆ ರಾಜ್ಯದೊಳಕ್ಕೆ ಹೋಗಲು ಸಾಧ್ಯವಿಲ್ಲದಿರುವುದರಿಂದ ಮೈಸೂರು ರಾಜ್ಯದ ಗಡಿರೇಖೆಗಳಲ್ಲಿ ಮಾತ್ರ ತಮ್ಮ ಬಸ್‌ಗಳನ್ನು ಓಡಿಸುತ್ತಿದ್ದಾರೆ ಎಂಬುದಾಗಿ ನಾನು ಖಚಿತಪಡಿಸುತ್ತೇನೆ.

ಸರ್ಕಾರವು ಮನಸೋಇಚ್ಛೆ ಪರವಾನಗಿಗಳನ್ನು ನೀಡಿರುತ್ತದೆ ಎಂಬ ಆಪಾದನೆಯು ಸರಿಯಲ್ಲ ಹಾಗೂ ಪರವಾನಗಿಗಳನ್ನು ನೀಡುವ ಪ್ರಶ್ನೆಗೆ ಸಂಬಂಧಪಡುವಷ್ಟರಮಟ್ಟಿಗೆ, ಪ್ರಾದೇಶಿಕ ಸಾರಿಗೆ ಪ್ರಾಧಿಕಾರವು ಅಧಿಕಾರ ಹೊಂದಿದ್ದು ಇದು ನ್ಯಾಯಿಕ ಸ್ವರೂಪದ್ದಾಗಿರುತ್ತದೆ. ಸರ್ಕಾರವು ಪ್ರಾದೇಶಿಕ ಸಾರಿಗೆ ಪ್ರಾಧಿಕಾರವು ಅಂತರರಾಜ್ಯಪರವಾನಗಿಗಳನ್ನು ನೀಡುವಂತೆಯೂ ಕೂಡ ನಿರ್ದೇಶನಗಳನ್ನು ನೀಡುವಂತಿಲ್ಲ. ಆದರೆ ರಾಷ್ಟ್ರೀಕರಣಕ್ಕೆ ಸಂಬಂಧಪಡುವಷ್ಟರಮಟ್ಟಿಗೆ, ಇತ್ತೀಚೆಗೆ ಕೋಲಾರದ ಯೋಜನೆಗೂ ಸಹ ಅನುಮೋದನೆಯನ್ನು ನೀಡಲಾಗಿದೆ ಹಾಗೂ ಅದು ಕಾರ್ಯತಃ ಮೈಸೂರು ಗಡಿರೇಖೆಯನ್ನು ಕೊನೆಯದಾಗಿ ನಿರ್ಧರಿಸುತ್ತದೆ. ಪ್ರಯಾಣಿಕರ ವಾಹನಗಳಿಗಾಗಿನ ಅಂತರರಾಜ್ಯ ಪರವಾನಗಿಗಳಿಗೆ ಸಂಬಂಧ ಪಡುವಷ್ಟರಮಟ್ಟಿಗೆ, ಸರ್ವೋಚ್ಚ ನ್ಯಾಯಾಲಯದ ತೀರ್ಮಾನದ ದೃಷ್ಟಿಯಲ್ಲಿ ಯಾವುದೇ ಮುಂದಿನ ಅಂತರರಾಜ್ಯ ಮಾರ್ಗಗಳು ಅಥವಾ ಒಪ್ಪಂದಗಳ ಸಂಬಂಧದಲ್ಲಿ ಯಾವುದೇ ಅವಕಾಶವು ಇರುವುದಿಲ್ಲ ಎಂಬುದಾಗಿ ನಾನು ಭಾವಿಸಿದ್ದೇನೆ. ಯಾರೇ ಆಗಲಿ ರಾಷ್ಟ್ರೀಕರಣಗೊಳಿಸಿರುವ ಮಾರ್ಗಗಳಿಗೆ ಯಾವುದೇ ಅಂತರರಾಜ್ಯ ಪರವಾನಗಿಯನ್ನು ನೀಡುವಂತಿಲ್ಲ. ಆದುದರಿಂದ, ಯಾರೇ ಪ್ರಾದೇಶಿಕ ಸಾರಿಗೆ ಅಧಿಕಾರಿಯು ಯಾವುದೇ ಪರವಾನಗಿಯನ್ನು ನೀಡಿರುವುದಿಲ್ಲ. ಸರ್ಕಾರಕ್ಕೆ ಸಂಬಂಧಪಡುವಷ್ಟರಮಟ್ಟಿಗೆ, ಸರ್ಕಾರವು ರಾಜ್ಯ ಪರವಾನಗಿ ಆಗಿರಲಿ ಅಥವಾ ಅಂತರರಾಜ್ಯ ಪರವಾನಗಿಯಾಗಿರಲಿ ಯಾತಕ್ಕೆ ಪರವಾನಗಿಯನ್ನು ನೀಡಿರುತ್ತದೆ ಎಂಬುದಾಗಿ ಕೇಳುವ ಪರಿಸ್ಥಿತಿಯಲ್ಲಿಲ್ಲ. ಪರವಾನಗಿಯನ್ನು ಪಡೆದುಕೊಳ್ಳುವ ಬಗ್ಗೆ ಯಾರೇ ಆಗಲಿ ಬಾಧಿತರಾಗಿದ್ದರೆ, ಅವರು ಅಪೀಲು ಮಾಡಿಕೊಳ್ಳಬಹುದು. ಪರವಾನಗಿಗಳನ್ನು ನೀಡುವುದಕ್ಕೆ ಸಂಬಂಧಪಡುವಷ್ಟರಮಟ್ಟಿಗೆ, ಇದನ್ನು ಪರವಾನಗಿಗಳ ಅನುಕೂಲಗಳಿಗನುಸಾರವಾಗಿ ಮಾಡಲಾಗುತ್ತದೆ ಹಾಗೂ ಪಕ್ಷಕಾರರ ಸಂಪನ್ಮೂಲಗಳ ಅನುಸಾರವಾಗಿಯೂ ಸಹ ಮಾಡಲಾಗುತ್ತದೆ. ಯಾರೇ ಆದರೂ ಇದನ್ನು ರಾತ್ರೋರಾತ್ರಿ ಮಾಡುವಂತಿರುತ್ತದೆ ಎಂಬುದಾಗಿ ನಾನು ಭಾವಿಸಿಲ್ಲ. ಒಬ್ಬ ವ್ಯಕ್ತಿಯು ವ್ಯವಹಾರ ಕುಶಲನು ಆಗಿದ್ದ ಹೊರತು ವಾಹನಗಳ ಸಾಲಿನ ಮಾಲೀಕನಾಗುತ್ತಾನೆ

ಎಂಬುದಾಗಿ ನಾನು ಭಾವಿಸಿಲ್ಲ. ಅಂತರರಾಜ್ಯ ಪರವಾನಗಿಗಳಿಗೆ ಸಂಬಂಧಪಡುವಷ್ಟರಮಟ್ಟಿಗೆ ಇದು ಪಕ್ಕದ ರಾಜ್ಯದೊಂದಿಗೆ ಒಂದು ಒಪ್ಪಂದವನ್ನು ಮಾಡಿಕೊಳ್ಳುವ ಪ್ರಶ್ನೆಯಾಗಿರುತ್ತದೆ. ಸರ್ಕಾರವು ಯಾವುದೇ ತಪ್ಪು ಒಪ್ಪಂದವನ್ನು ಮಾಡಿಕೊಂಡಿರುತ್ತದೆ ಎಂಬುದಾಗಿ ಯಾವ ಮಾನ್ಯ ಸದಸ್ಯರು ಸಹ ಹೇಳಿರುವುದಿಲ್ಲ ಹಾಗೂ ಈ ಒಪ್ಪಂದವನ್ನು, ಯಾವನೇ ವ್ಯಕ್ತಿಯ ಪ್ರಯೋಜನಕ್ಕಾಗಿ ಮಾಡಿಕೊಳ್ಳಲಾಗಿದೆ ಎಂಬುದಾಗಿ ಯಾವುದೇ ಒಪ್ಪಂದದಲ್ಲಿ ಹೇಳಲಾಗಿರುವುದಿಲ್ಲ.

**ಶ್ರೀ ಹೆಚ್. ಸಿದ್ಧವೀರಪ್ಪ** – ಯಾತಕ್ಕೆ ನಿಮ್ಮ ಸಂಸ್ಥೆಯು ಸ್ವತಃ ಅಂತರರಾಜ್ಯ ಮಾರ್ಗಗಳನ್ನು ತೆಗೆದುಕೊಂಡಿರುವುದಿಲ್ಲ? ಯಾತಕ್ಕೆ ನೀವು ಇಲ್ಲಿಗೆ ಬರಲು ಬೇರೆಯವರಿಗೆ ಅವಕಾಶ ನೀಡಿದ್ದೀರಿ?

**ಶ್ರೀ ಮೊಹಮದ್ ಅಲಿ** – ಮುಖ್ಯವಾದ ಮಾರ್ಗಗಳಿಗೆ ಸಂಬಂಧಪಡುವಷ್ಟರಮಟ್ಟಿಗೆ, ಹೈದರಾಬಾದ್‌ನಿಂದ ಬೆಂಗಳೂರುವರೆಗಿನ ಮಾರ್ಗವನ್ನು ರಾಷ್ಟ್ರೀಕರಣಗೊಳಿಸಲಾಗಿದೆ ಮತ್ತು ನಾವು ಬೆಂಗಳೂರಿನಿಂದ ಮದ್ರಾಸ್‌ವರೆಗಿನ ಮಾರ್ಗವನ್ನು ರಾಷ್ಟ್ರೀಕರಣಗೊಳಿಸಲು ಮದ್ರಾಸ್ ಸರ್ಕಾರದೊಂದಿಗೆ ಸಂಧಾನನಡೆಸುತ್ತಿದ್ದೇನೆ. ನಾವು ಮೈಸೂರಿನಿಂದ ಕೊಯಮತ್ತೂರುವರೆಗೆ ಕಡದ ಆಧಾರದ ಮೇಲೆ ಹಾಗೂ ಪರಸ್ಪರ ಆಧಾರದ ಮೇಲೆ ಮದ್ರಾಸ್ ಸರ್ಕಾರದೊಂದಿಗೆ ಒಂದು ಒಪ್ಪಂದವನ್ನು ಮಾಡಿಕೊಂಡಿದ್ದೇವೆ. ಈ ಎಲ್ಲಾ ಮುಖ್ಯವಾದ ಮಾರ್ಗಗಳನ್ನುನಡೆಸುವುದಕ್ಕಾಗಿ ಮೈ.ರಾ.ರ.ಸಾ. ಸಂಸ್ಥೆಯಿಂದ ವಶಕ್ಕೆ ತೆಗೆದುಕೊಂಡಿರುತ್ತದೆ. ಲಾಭ ಮತ್ತುನಷ್ಟಗಳಿಗೆ ಸಂಬಂಧಪಡುವಷ್ಟರಮಟ್ಟಿಗೆ, ಮಾನ್ಯ ಸದಸ್ಯರು ಪರಿಸ್ಥಿತಿಯು ಹಿಂದೆ ಇದ್ದಂತೆ ಈಗ ಇಲ್ಲ ಎಂಬುದನ್ನು ತಿಳಿದುಕೊಳ್ಳಬೇಕು. ನಾನು ವೈಜ್ಞಾನಿಕ ವಿಧಾನ ಅಥವಾ ಅವೈಜ್ಞಾನಿಕ ವಿಧಾನದ ಮೂಲಕ ಮಾರ್ಗದಲ್ಲಿ ಹೊಸ ಬಸ್ ಹಾಕಬೇಕಾದರೆ, ನಾನು ಪ್ರತಿ ಬಸ್‌ಗೆ ಪ್ರತಿವರ್ಷವು 4200 ರೂ.ಗಳನ್ನು ವೆಚ್ಚ ಮಾಡಬೇಕಾಗುತ್ತದೆ. ಭಾರಿ ತೆರಿಗೆ ವಿಧಾನದ ದೃಷ್ಟಿಯಲ್ಲಿ, ಲಾಭದ ಅಂತರವು ಕಡಿಮೆಯಾಗಿದೆ. ಸಿಬ್ಬಂದಿಯ ವೆಚ್ಚ ಮತ್ತು ಇತರ ಅಂಶಗಳು ಸರ್ಕಾರಿ ವಲಯಕ್ಕೆ ಸಂಬಂಧಪಡುವಷ್ಟರಮಟ್ಟಿಗೆ ತುಂಬಾ ಬೆಲೆಯಾಗಿರುತ್ತದೆ. ಖಾಸಗಿ ವಲಯಕ್ಕೆ ಸಂಬಂಧಪಡುವಷ್ಟರಮಟ್ಟಿಗೆ ಖಾಸಗಿಯವನು ಸ್ವತಃ ಕ್ಲೀನರ್ ಆಗಬಹುದು, ಚಾಲಕನು ಆಗಬಹುದು ಅಥವಾ ನಿರ್ವಾಹಕನು ಆಗಬಹುದು. ಆದರೆ ಇದು ರಸ್ತೆ ಸಾರಿಗೆ ಸಂಸ್ಥೆಯ ಸಂಬಂಧದಲ್ಲಿ ಹಾಗಾಗಲು ಸಾಧ್ಯವಿಲ್ಲ. ಕೆಲವು ಪ್ರಮಾಣದ ಜವಾಬ್ದಾರಿಗಳನ್ನು ಹೊಂದಿರುತ್ತೇವೆ. ಸಾಕಷ್ಟು ಸಂಖ್ಯೆಯ ಸಿಬ್ಬಂದಿಯನ್ನು ನೇಮಕ ಮಾಡಿಕೊಂಡ ಹೊರತು ಆಡಳಿತವನ್ನುನಡೆಸಲು ಸಾಧ್ಯವಿಲ್ಲ. ಆದ್ದರಿಂದ, ಕೆಲವು ಪ್ರಮಾಣದ ಸಿಬ್ಬಂದಿಯು ಅಗತ್ಯವಾಗಿರುತ್ತದೆ.

**ಶ್ರೀ ಎಸ್. ಶಿವಪ್ಪ** – ಕೆಲವು ಮುಖ್ಯವಾದ ಮಾರ್ಗಗಳನ್ನು ಕೆಲವೇ ವ್ಯಕ್ತಿಗಳಿಗೆ ನೀಡಲಾಗಿದೆ ಎಂಬುದು ನಿಮಗೆ ಕೇಳಿದ ಪ್ರಶ್ನೆಯಾಗಿರುತ್ತದೆ. ಇವುಗಳಿಗಾಗಿ ಪ್ರಯತ್ನಿಸಿದ ಕೆಲವು ಜನರಿಗೆ ಇದನ್ನು ನೀಡಲಾಗಿಲ್ಲ. ಇದರ ಸಂಬಂಧವಾಗಿ ತಾರತಮ್ಯವುನಡೆದಿರುತ್ತದೆ.

**ಶ್ರೀ ಮೊಹಮದ್ ಅಲಿ** – ಈ ಆರೋಪಗಳನ್ನು ನಿರಾಕರಿಸುತ್ತೇನೆ, ಕ್ಷಮಿಸಿ, ಇದು ತಪ್ಪು ಆರೋಪವಾಗಿರುತ್ತದೆ ಎಂಬುದಾಗಿ ಹೇಳುತ್ತೇನೆ. ರಾಷ್ಟ್ರೀಕರಣಕ್ಕೆ ಸಂಬಂಧಪಡುವಷ್ಟರಮಟ್ಟಿಗೆ,

ಸರ್ಕಾರವು ರಾಷ್ಟ್ರೀಕರಣಗೊಳಿಸುವುದಕ್ಕಾಗಿನ ಕೆಲವು ವ್ಯವಸ್ಥೆಗೆ ಸಂಪೂರ್ಣವಾಗಿ ಬದ್ಧವಾಗಿರುತ್ತದೆ. ಶೇ. 59ರಷ್ಟು ಮಾರ್ಗಗಳನ್ನು ರಾಷ್ಟ್ರೀಕರಣಗೊಳಿಸಲಾಗಿದೆ.

**ಶ್ರೀ ಎಂ.ಎಸ್. ಕೃಷ್ಣನ್ (ಮಲ್ಲೇಶ್ವರಂ)** – ಇದು ಹಾಗಾಗಿರುವುದಿಲ್ಲ ಎಂಬುದಾಗಿ ನೀವು ಹೇಳುತ್ತೀರಿ. ಕೆಲವು ಮಾರ್ಗಗಳನ್ನು ಅಧಿಕವಾಗಿ ನೀಡಲಾಗಿದೆ. ಇದನ್ನು ನಾವು ಸಾಬೀತುಪಡಿಸಿದರೆ ನೀವು ರಾಜೀನಾಮೆ ನೀಡಲು ಸಿದ್ಧರಿದ್ದೀರಾ!

**ಮಾನ್ಯ ಸಭಾಧ್ಯಕ್ಷರು** – ನಾವು ರಾಷ್ಟ್ರೀಕರಣದ ಬಗ್ಗೆ ವ್ಯವಹರಿಸುತ್ತಿದ್ದೇವೆಯೇ ಅಥವಾ ವಿಧೇಯಕಗಳ ಬಗ್ಗೆ ವ್ಯವಹರಿಸುತ್ತಿದ್ದೇವೆಯೇ?

**ಶ್ರೀ ಮೊಹಮದ್ ಅಲಿ** – ರಾಷ್ಟ್ರೀಕರಣದ ಪ್ರಶ್ನೆಯು ಇತರ ಸಂದರ್ಭಗಳನ್ನು ಅವಲಂಬಿಸಿರುತ್ತದೆ. 20 ಲಕ್ಷಗಳ ಲಾಭವು ಮಾತ್ರ ಆಗಿರುತ್ತದೆ ಎಂಬುದನ್ನು ಮಾನ್ಯ ಸದಸ್ಯರು ತಿಳಿದುಕೊಳ್ಳಬೇಕು. ಸದಸ್ಯರು ನನಗೆ ತಿಳಿಯದಿರುವಂತಹ ಕೆಲವು ಮಾಹಿತಿಯನ್ನು ಕಲೆಹಾಕಿರುತ್ತಾರೆ ಎಂಬುದಾಗಿ ಕಂಡುಬರುತ್ತದೆ. ನಾನು ದಾಖಲೆಗಳನ್ನು ಪರಿಶೀಸಿಸಬೇಕಾಗಿದ್ದು ಆನಂತರವೇ ಮಾತ್ರ ನಾನು ಏನನ್ನಾದರೂ ಹೇಳಲು ಸಾಧ್ಯವಾಗುತ್ತದೆ. ಮಾರ್ಗಗಳ ಪ್ರಶ್ನೆಯನ್ನು ಸದಸ್ಯರಿಂದ ಕೇಳಬಹುದಾಗಿರುತ್ತದೆ ಎಂಬುದನ್ನು ನಾನು ನಿರೀಕ್ಷಿಸಿಯೇ ಇರಲಿಲ್ಲ. ಏನೇ ಆಗಲಿ ಇದು ಅಂತರರಾಜ್ಯ ಮಾರ್ಗಗಳಿಗೆ ಸಂಬಂಧಪಡುವಷ್ಟರಮಟ್ಟಿಗೆ, ಪರವಾನಗಿಗಳನ್ನು ನೀಡುವುದಕ್ಕಾಗಿ ಅನುಸರಿಸಬೇಕಾದ ಸೂಕ್ತವಾದ ಕಾರ್ಯವಿಧಾನವನ್ನು ರಚಿಸುವ ತುಂಬಾ ಸರಳವಾದ ತಿದ್ದುಪಡಿ ಮಾತ್ರ ಆಗಿರುತ್ತದೆ.

**ಶ್ರೀ ಎಂ. ನಾಗಪ್ಪ** – ತಮ್ಮ ನೆನಪಿಗೆ ತಂದು ಕೊಡುತ್ತೇನೆ. ಗುಲ್ಬರ್ಗಾ-ಯಾದ್ಗೀರ್ ಎರಡೂ ಕೂಡ ಸಿಟಿ ಬಸ್ಸುಗಳನ್ನು ಹೊಂದಿವೆ ಮತ್ತು ಬಿಜಾಪುರದಲ್ಲೂ ಪ್ರಾರಂಭ ಮಾಡಿದ್ದೀರಿ ರಾಯಚೂರು ಲಕ್ಷದ ಮೇಲೆ ಪಾಪ್ಯೂಲೇಷನ್ ಇರುವಾಗ ಅಲ್ಲಿ ಏಕೆ ಮಾಡಲಿಲ್ಲ?

**ಶ್ರೀ ಮೊಹಮದ್ ಅಲಿ** – ನನಗೆ ಖಚಿತವಾಗಿ ಗೊತ್ತಿಲ್ಲ, ಬಿಜಾಪುರ ಅಥವಾ ಯಾದಗಿರಿಗೆ ಸಂಬಂಧಿಸಿದಂತೆ ಈ ವಿಷಯದ ಬಗ್ಗೆ ಏನಾಗಿದೆ ಎಂಬುದು ಈ ಹಂತದಲ್ಲಿ ಹೇಳಲು ಸಾಧ್ಯವಿಲ್ಲ. ನಾನು ಉತ್ತರಿಸುವುದಕ್ಕಿಂತ ಮುಂಚೆ ಮಾಹಿತಿಯನ್ನು ಸಂಗ್ರಹಿಸಬೇಕು.

**ಶ್ರೀ ಎಂ. ನಾಗಪ್ಪ** – ಗುಲ್ಬರ್ಗಾ ಬಗ್ಗೆ ಮಾನ್ಯ ಸಚಿವರಿಗೆ ಗೊತ್ತಿರಬಹುದು. ಗುಲ್ಬರ್ಗಾದಲ್ಲಿ ಸಿಟಿ ಬಸ್ಸುಗಳು ಇವೆ ಮತ್ತು ಅಲ್ಲಿನ ಜನಸಂಖ್ಯೆಯು ಸುಮಾರು 70 ಸಾವಿರ ಇದೆ.

**ಶ್ರೀ ಮೊಹಮದ್ ಅಲಿ** – ಗುಲ್ಬರ್ಗಾದ ಜನಸಂಖ್ಯೆಯು ಒಂದು ಲಕ್ಷಕ್ಕೂ ಮೀರಿ ಇದೆ.

**ಶ್ರೀ ಎಂ. ನಾಗಪ್ಪ** – ಈ ಜನಸಂಖ್ಯೆ ಯಾವ ಜನಗಣತಿ ಪ್ರಕಾರ, ಸ್ವಾಮಿ?

**ಶ್ರೀ ಮೊಹಮದ್ ಅಲಿ** – ಹೀಗೆ 10 ವರ್ಷಗಳ ಹಿಂದಿನ ಜನಗಣತಿಯಲ್ಲಿ ಜನಸಂಖ್ಯೆ 98 ಸಾವಿರ ಇತ್ತು ಮತ್ತು ಈಗ ಅದು ಒಂದು ಲಕ್ಷಕ್ಕೂ ಮೀರಿ ಇದೆ.

**ಶ್ರೀ ಎಸ್. ಆರ್. ಬೊಮ್ಮಾಯಿ** –ಸಿಟಿ ಬಸ್ಸುಗಳನ್ನು ಎಷ್ಟು ದೂರದ ಮಿತಿಯೊಳಗೆ ಓಡಿಸಲಾಗುತ್ತದೆ ಎಂಬುದನ್ನು ನಾನು ತಿಳಿಯಬಹುದೇ? ಅದು 10 ಅಥವಾ 15 ಮೈಲಿಯೊಳಗಿದೆಯೋ?

**ಶ್ರೀ ಮೊಹಮದ್ ಅಲಿ** – 10 ಮೈಲಿಯೊಳಗಿನ ಮಿತಿಯೊಳಗೆ ಇದೆ.

**ಶ್ರೀ ಬಿ.ಪಿ. ಗಂಗಾಧರ** – ಸರ್ಕಾರದವರು ಆ ಪ್ರಜಾಸಂಖ್ಯೆ ಅಷ್ಟೇ ಇರಬೇಕು ಎಂಬ ರೂಲನ್ನು ರಿಜಿಡ್ಡಾಗಿ ಅನುಸರಿಸುವುದಕ್ಕೆ ಬದಲು ಜನರಿಗೆ ಅನುಕೂಲವುಂಟು ಮಾಡತಕ್ಕ ದೃಷ್ಟಿಯಿಂದ ಅಗತ್ಯವಿರುವ ಕಡೆಗಳಲ್ಲಿ ಅಂದರೆ ಈ ದಿವಸ ತುಮಕೂರಿನಲ್ಲಿ ಒಂದು ಇಂಜಿನಿಯರಿಂಗ್ ಕಾಲೇಜಿದೆ, ಪಾಲಿಟೆಕ್ನಿಕ್ ಇದೆ ಮತ್ತು ಫಸ್ಟ್ ಗ್ರೇಡ್ ಕಾಲೇಜು ಇದೆ. ಆ ಪಟ್ಟಣದ ಒಂದು ಕೊನೆಯಿಂದ ಇನ್ನೊಂದು ಕೊನೆಗೆ ನಾಲ್ಕು ಐದು ಮೈಲು ದೂರವಾಗುತ್ತದೆ. ಅಲ್ಲದೆ ವಿದ್ಯಾರ್ಥಿಗಳು ಕೊನೆಯಿಂದ ಆರು ಏಳು ಮೈಲಿಗಳಿಂದ ಕೂಡ ಬರುತ್ತಾರೆ. ಅಲ್ಲಿ ಒಂದು ಎಂ.ಎಸ್.ಆರ್.ಟಿ.ಸಿ. ಷೆಡ್ ಇದೆ. ಬೇರೆ ಅದ್ದರಿಂದ ಅಲ್ಲದೆ ಒಂದು ಬಸ್ಸನ್ನು ಓಡಿಸುವುದಕ್ಕೆ ಏರ್ಪಾಡು ಮಾಡುತ್ತೀರಾ?

**ಶ್ರೀ ಮೊಹಮದ್ ಅಲಿ** – ಸ್ವಾಮಿ, ಬಸ್ಸಿನ ದರಗಳಿಗೆ ಸಂಬಂಧಿಸಿದಂತೆ, ರಾಜ್ಯದನಗರಗಳು ಅಥವಾ ಪಟ್ಟಣಗಳು ಎಂಬುದನ್ನು ಗಣನೆಗೆ ತೆಗೆದುಕೊಳ್ಳದೆ ಎಲ್ಲಾ ವಿದ್ಯಾರ್ಥಿಗಳಿಗೂ ರಿಯಾಯಿತಿಯನ್ನು ನೀಡಲಾಗಿದೆ. ತುಮಕೂರಿಗೆ ಸಂಬಂಧಿಸಿದಂತೆ ಕಾಲೇಜುಗಳ ಸಮಯದಲ್ಲಿ

ಒಂದು ಶಟ್ಲ್ ಬಸ್ಸನ್ನು ಓಡಿಸುವ ಬಗ್ಗೆ ನಾವು ಯೋಚಿಸಬಹುದು. ಸಿಟಿ ಬಸ್ಸುಗಳನ್ನು ಓಡಿಸುವುದು ಕಷ್ಟವಾಗುತ್ತದೆ. ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಶಟ್ಲ್ ಬಸ್ಸುಗಳನ್ನು ಓಡಿಸುವ ಬಗ್ಗೆ ಮಾತ್ರ ನಾವು ಯೋಚಿಸಬಹುದು.

**ಶ್ರೀ ಡಿ.ಬಿ. ಕಲ್ಮಣ್‌ಕರ್** – ಗುಲ್ಬರ್ಗಾದಲ್ಲಿ ಒಂದು ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆ ಇದ್ದು, ಅಲ್ಲಿ ಸಿಟಿ ಬಸ್ಸುಗಳು ಇರುವುದರಿಂದ, ರಾಯಚೂರಿಗೂ ಸಹ ಇದೇ ರಿಯಾಯಿತಿಯನ್ನು ಕೊಡಲಾಗುತ್ತಿದೆಯೇ ಎಂಬುದನ್ನು ನಾನು ತಿಳಿದುಕೊಳ್ಳಬಹುದೇ?

**ಶ್ರೀ ಮೊಹಮದ್ ಅಲಿ** – ಗುಲ್ಬರ್ಗಾ ಜನಸಂಖ್ಯೆಯು ಒಂದು ಲಕ್ಷಕ್ಕಿಂತ ಕಡಿಮೆ ಇದೆ ಎಂಬುದನ್ನು ನಾನು ಒಪ್ಪುವುದಿಲ್ಲ. ಗುಲ್ಬರ್ಗಾದಲ್ಲಿ ಹಿಂದಿನ ವರ್ಷವಷ್ಟೇ ಸಿಟಿ ಬಸ್‌ಗಳನ್ನು ಓಡಿಸುವುದನ್ನು ಪ್ರಾರಂಭಿಸಲಾಯಿತು.

**ಶ್ರೀ ಜಿ. ಚಂದ್ರಕಾಂತ್** – ಒಂದು ಲಕ್ಷಕ್ಕಿಂತ ಜನಸಂಖ್ಯೆ ಹೆಚ್ಚಿಲ್ಲದ ಕಡೆಗಳಲ್ಲಿ ಎಂ.ಎಸ್.ಆರ್.ಟಿ.ಸಿ.ಯು ಸಿಟಿ ಬಸ್‌ಗಳನ್ನು ಓಡಿಸುತ್ತಿದೆ ಎಂದು ತೋರುತ್ತದೆ. ಜನಸಂಖ್ಯೆ ಒಂದು ಲಕ್ಷಕ್ಕಿಂತ ಹೆಚ್ಚಿಲ್ಲದ ಕಡೆಗಳಲ್ಲಿ ಖಾಸಗಿಯವರಿಗೆ ಸ್ಥಳೀಯ ಬಸ್‌ಗಳನ್ನು ಓಡಿಸಲು ಅನುಮತಿ ನೀಡುವ ಬಗ್ಗೆ ಸರ್ಕಾರವು ಪರಿಗಣಿಸುವುದೇ?

**ಶ್ರೀ ಮೊಹಮದ್ ಅಲಿ** – ರಾಷ್ಟ್ರೀಕೃತ ವಲಯಗಳಿಗೆ ಸಂಬಂಧಪಡುವಷ್ಟರ ಮಟ್ಟಿಗೆ ಮತ್ತು ಕಾನೂನು ಪ್ರಕಾರ ಯಾರೇ ಖಾಸಗಿಯವರಿಗೆ ಅನುಮತಿ ನೀಡುವುದಕ್ಕೆ ಅವಕಾಶವಿಲ್ಲ. ಆದರೆ, ರಾಷ್ಟ್ರೀಕೃತಗೊಳಿಸದ ಪ್ರದೇಶ ಮತ್ತುನಗರಗಳಲ್ಲಿ ಖಾಸಗಿಯವರಿಗೆ ಅನುಮತಿ ನೀಡಲು ಅವಕಾಶವಿದೆ. ಅವರು ರಸ್ತೆ ಸಾರಿಗೆ ಸಂಸ್ಥೆಗೆ ಅರ್ಜಿ ಸಲ್ಲಿಸಿ ಅನುಮತಿ ಪಡೆಯಬಹುದು.

**ಶ್ರೀ ಬಿ. ಎಂ. ಇದಿನಬ್ಬ** –ನಮ್ಮ ಮಂಗಳೂರಿನಲ್ಲಿ ಈಗ ಪ್ರಜಾ ಸಂಖ್ಯೆ ಒಂದು ಲಕ್ಷ ಇಪ್ಪತ್ತು ಸಾವಿರದ ಮೇಲಿದೆ. ಆದ್ದರಿಂದ ಸರ್ಕಾರದವರು ಅಲ್ಲಿ ಬಸ್ಸನ್ನು ಓಡಿಸುವುದಕ್ಕೆ ಏರ್ಪಾಡನ್ನು ಮಾಡುತ್ತೀರಾ?

**ಶ್ರೀ ಮೊಹಮದ್ ಅಲಿ** – ಮಂಗಳೂರುನಗರದಲ್ಲಿ ಯಾವ ಮಾರ್ಗಗಳನ್ನು ರಾಷ್ಟ್ರೀಕೃತಗೊಳಿಸಿಲ್ಲ.

**ಶ್ರೀ ಎನ್. ಹುಚ್ಚಮಾಸ್ತಿಗೌಡ** – ಈಗ ರಾಜ್ಯದ ಕೆಲವು ಪಟ್ಟಣಗಳಲ್ಲಿ ಏನು ಆ ಸಿಟಿ ಬಸ್ಸುಗಳನ್ನು ಓಡಿಸುವುದಕ್ಕೆ ಪ್ರಯತ್ನ ಮಾಡುತ್ತೀರಾ?

**ಶ್ರೀ ಮೊಹಮದ್ ಅಲಿ** – ಏನು ಉತ್ತರ ಕೊಡಬೇಕೆಂದು ನನಗೆ ತಿಳಿಯುತ್ತಿಲ್ಲ. ಏಕೆಂದರೆ, ಜನಸಂಖ್ಯೆ ಒಂದು ಲಕ್ಷಕ್ಕಿಂತ ಕಡಿಮೆ ಇರುವಲ್ಲಿ ಅಂತಹ ಸಿಟಿ ಬಸ್ಸುಗಳನ್ನು ಓಡಿಸುತ್ತಿರುವ ಬಗ್ಗೆ ನನಗೆ ತಿಳಿದಿಲ್ಲ. ಅಲ್ಲಿ ಒಂದು ಶಟ್ಲ್ ಬಸನ್ನು ಓಡಿಸಲಾಗುತ್ತದೆಯೇ ಎಂಬುದನ್ನು ನಾನು ಹೇಳಲಾಗುವುದಿಲ್ಲ. ಏಕೆಂದರೆ ಅದನ್ನು ಪರಿಶೀಲಿಸಬೇಕಾಗಿದೆ. ಆದುದರಿಂದ ನಾನು ಒಂದು

ನಿರ್ದಿಷ್ಟ ಉತ್ತರ ಕೊಡದಿರುವುದಕ್ಕೆ ನನ್ನ ತೊಂದರೆಯನ್ನು ಮಾನ್ಯ ಸದಸ್ಯರು ಒಪ್ಪಿಕೊಳ್ಳುತ್ತಾರೆಂದುನಂಬಿದ್ದೇನೆ.

**ಶ್ರೀ ಸದಾಶಿವಪ್ಪ ಪಾಟೀಲ್** – ಈ ಸಂಸ್ಥಾನದಲ್ಲಿ ರಾಯಚೂರು ಒಮದು ಒಳ್ಳೆಯ ಬಿಜಿನೆಸ್ ಸೆಂಟರ್ ಆಗಿದೆ. 10 ಮೈಲಿಗಳ ರೇಡಿಯಸ್‌ನಲ್ಲಿ ಬಂದರೆ, ನೀವು ಪಾಪ್ಯುಲೇಷನ್ ನೋಡುತ್ತೀರೋ ಅಥವಾ ಎಂ.ಎಸ್.ಆರ್.ಟಿ.ಸಿ.ಗೆ ಲಾಭದಾಯಕವಾದ ದೃಷ್ಟಿಯಿಂದ ಇರಲಿ ಎಂದು ನೋಡುತ್ತೀರೋ? ಯಾದಗೀರ್ ವಿಷಯ 10 ವರ್ಷಗಳಿಂದಲೂ ಗೊತ್ತಿಲ್ಲವೆಂದು ಹೇಳಿದರೆ ಹೇಗೆ?

**ಶ್ರೀ ಮೊಹಮದ್ ಅಲಿ** – ಸ್ವಾಮಿ, ಮಾನ್ಯ ಸದಸ್ಯರು ನಾನು ಹೇಳಿದುದನ್ನುನಂಬದಿದ್ದರೆ ಅವರು ಏನು ಬೇಕಾದರೂ ಯೋಚಿಸಬಹುದು. ಅದಕ್ಕೆ ನಾನೇನೂ ಮಾಡಲಾರೆ. ಯಾದಗಿರಿ ಬಗ್ಗೆ ನನಗೆ ಮಾಹಿತಿ ಇಲ್ಲ ಎಂಬುದನ್ನು ಖಚಿತವಾಗಿ ಹೇಳಬಲ್ಲೆ.

**ಮಾನ್ಯ ಸಭಾಪತಿ** – ಮಾನ್ಯ ಸದಸ್ಯರಾದ ಶ್ರೀ ಎಸ್.ಆರ್. ಬೊಮ್ಮಯಿರವರು ತಡೆಹಿಡಿದಿದ್ದ 4ನೇ ಮಾರ್ಚ್ 1969ರ ಪ್ರಶ್ನೆ ಸಂಖ್ಯೆ 373ರನ್ನು ಈಗ ಕೈಗೆತ್ತಿಕೊಳ್ಳಬಹುದು.

**ಶ್ರೀ ಪಿ.ಬಿ.ನಂದಿಹಾಳಿ** –

(ಎ) ಈ ವಿಷಯದ ಬಗ್ಗೆ ವಿಭಾಗೀಯ ನಿಯಂತ್ರಕರ ಅಭಿಪ್ರಾಯ ಏನು?

(ಬಿ) ಕುದ್ರೆಮಣಿಯಲ್ಲಿ ಬಸ್ ಸೇವೆಯನ್ನು ಏತಕ್ಕೆ ಪ್ರಾರಂಭಿಸಿಲ್ಲ?

(ಸಿ) ಕುದ್ರೆಮಣಿಗೆ ಬಸ್ ಸೇವೆಯನ್ನು ಪ್ರಾರಂಭಿಸುವುದನ್ನು ಸರ್ಕಾರವು ಪುನರ್ ಪರಿಶೀಲಿಸುವುದೇ?

**ಶ್ರೀ ಮೊಹಮದ್ ಅಲಿ (ಸಾರಿಗೆ ಸಚಿವರು)** –

(ಎ) ಹೌದು, ಬೆಳಗಾವಿಯಿಂದ ಕುದ್ರೆಮಣಿಗೆ ಒಂದು ಸಿಟಿ ಬಸ್ ಅನ್ನು ಓಡಿಸುವ ಬಗ್ಗೆ ಒಂದು ಮನವಿ ಬಂದಿತ್ತು.

(ಬಿ) ಸಿಟಿ ಬಸ್ ಸೇವೆಯನ್ನು ಕೆಳಕಂಡ ಕಾರಣಗಳಿಗಾಗಿ ಪ್ರಾರಂಭಿಸಲಾಗುವುದಿಲ್ಲ –

೧) ಬೆಳಗಾವಿಯಿಂದ ಕುದ್ರೆಮಣಿಗೆ ಇರುವ ದೂರ 12 ಮೈಲಿಗಳು ಮತ್ತು ಬೆಳಗಾವಿನಗರದಿಂದ 10 ಮೈಲಿಗಳಿಗಿಂತ ದೂರವಿರುವ ಸ್ಥಳಗಳಿಗೆ ಸಿಟಿ ಬಸುಗಳನ್ನು ಓಡಿಸಲಾಗುವುದಿಲ್ಲ.

೨) ಬೆಳಗಾವಿಯಿಂದ ಕುದ್ರೆಮಣಿಗೆ ಹೋಗುವ ಮಾರ್ಗವು ಮಹಾರಾಷ್ಟ್ರ ರಾಜ್ಯದೊಳಗೆ ಹಾದು ಹೋಗುತ್ತದೆ. ಆದುದರಿಂದ, ಈ ಮಾರ್ಗದಲ್ಲಿ ಬಸ್ ಓಡಿಸುವುದು ಅಂತರ್‌ರಾಜ್ಯ

ಮಾರ್ಗದಲ್ಲಿ ಓಡಿಸಿದಂತಾಗುತ್ತದೆ. ಇದಕ್ಕೆ ಮಹಾರಾಷ್ಟ್ರ ಮತ್ತು ಮೈಸೂರು ರಾಜ್ಯಗಳನಡುವೆ ಮಾಡಿಕೊಂಡ ಅಂತರರಾಜ್ಯ ಒಪ್ಪಂದದ ಪ್ರಕಾರ ಅವಕಾಶವಿಲ್ಲ.

(ಸಿ) (ಬಿ)ನಲ್ಲಿ ನೀಡಿದ ಉತ್ತರದ ದೃಷ್ಟಿಯಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ.

(ಡಿ) ಇಲ್ಲ

**ಶ್ರೀ ಪಿ.ಬಿ.ನಂದಿಹಾಳಿ** –ಬೆಳಗಾವಿಯಿಂದ ಕುದ್ರೆಮಣಿಗೆ ಬಸ್ ಓಡಿಸುವಂತೆ ಸಂಬಂಧಿಸಿದ ಗ್ರಾಮದ ಜನತೆ ಮತ್ತು ನಾನು ಬಹಳ ಕಾಲದಿಂದಲೂ ಅರಿಕೆ ಮಾಡಿಕೊಳ್ಳುತ್ತಿದ್ದೇವೆ. ಮಹಾರಾಷ್ಟ್ರ ಮತ್ತು ಮೈಸೂರು ರಾಜ್ಯಗಳನಡುವೆ ಅಂತರರಾಜ್ಯ ಒಪ್ಪಂದ ಇರುವ ಕಾರಣ ಇದು ಸಾಧ್ಯವಿಲ್ಲವೆಂದು ಸರ್ಕಾರ ತಿಳಿಸಿದೆ. ಈ ಗ್ರಾಮವು ಮಹಾರಾಷ್ಟ್ರದ ಒಳನಾಡು ಪ್ರದೇಶದಲ್ಲಿದೆ. ಈ ಗ್ರಾಮ ಮತ್ತು ಸುತ್ತಮುತ್ತಲ ಗ್ರಾಮಗಳ ಅಭಿವೃದ್ಧಿಗೆ ಅಡಚಣೆಯಾಗುವ ದೃಷ್ಟಿಯಿಂದ ಈ ವಿಷಯವನ್ನು ಪರಿಗಣಿಸಿ ಬಸ್ ಸೇವೆಯನ್ನು ಪ್ರಾರಂಭಿಸುವಂತೆ ಸರ್ಕಾರವನ್ನು ನಾನು ಕೇಳಬಹುದೇ?

**ಶ್ರೀ ಮೊಹಮದ್ ಅಲಿ** – ಕುದ್ರೆಮಣಿಗೆ ಸಿಟಿ ಬಸ್‌ಅನ್ನು ಓಡಿಸಲಾಗದುದಕ್ಕೆ ಎರಡು ತೊಂದರೆಗಳಿವೆ. (1) ರಸ್ತೆ ಸಾರಿಗೆ ನಿಗಮವು 10 ಮೈಲಿಗಳೊಳಗೆ ಮಾತ್ರವೇ ಸಿಟಿ ಬಸ್ ಅನ್ನು ಓಡಿಸುವ ನಿಯಮವನ್ನು ಹೊಂದಿದೆ. ಆದರೆ, ಬೆಂಗಳೂರುನಗರದಲ್ಲಿ ಮಾತ್ರ 12 ಮೈಲಿಗಳವರೆಗೆ ಅನುಮತಿ ಇದೆ. (2) ಅಲ್ಲದೆ ಆ ಗ್ರಾಮವು ಮಹಾರಾಷ್ಟ್ರದ ಭೂ ಪ್ರದೇಶದಿಂದ ಸುತ್ತುವರೆದಿದೆ. ಆದಕಾರಣ, ಈ ಬಗ್ಗೆ ಒಂದು ಅಂತರರಾಜ್ಯ ಒಪ್ಪಂದದ ಅಗತ್ಯವಿದೆ. ಈ ಗ್ರಾಮಕ್ಕೆ ಸಂಬಂಧಿಸುವಷ್ಟರ ಮಟ್ಟಿಗೆ ಬೆಳಗಾವಿ–ಸಾವಂದವಾಡಿ ರಸ್ತೆಗೆ ಈಗಾಗಲೇ ಸಾರಿಗೆ ಸೇವೆಯನ್ನು ಒದಗಿಸಲಾಗಿದೆ ಮತ್ತು ಕುದ್ರೆಮಣಿ ಬಳಿ ಒಂದು ಬಸ್ ನಿಲುಗಡೆ ಇದೆ. ಈಗಾಗಲೇ ಆ ಗ್ರಾಮಕ್ಕೆ ಬಸ್ ಸೇವೆಗಳು ಇರುವುದರಿಂದ ಸಿಟಿ ಬಸ್ಸನ್ನು ಒದಗಿಸುವ ಪ್ರಶ್ನೆಯೇ ಉದ್ಭವಿಸುವುದಿಲ್ಲ.

**ಶ್ರೀ ಬಿ.ಬಿ. ಸಯಾನಕ್** – ಈ ಕುದ್ರೆಮಣಿ ಗ್ರಾಮವು ಮಹಾರಾಷ್ಟ್ರದ ಭೂ ಪ್ರದೇಶದಿಂದ ಸುತ್ತುವರಿದಿದೆ ಎಂಬುದು ಸರ್ಕಾರಕ್ಕೆ ತಿಳಿದಿದೆಯೇ, ಹಾಗಿದ್ದರೆ, ಈ ಗ್ರಾಮವನ್ನು ಮೈಸೂರು ರಾಜ್ಯದಲ್ಲಿಯೇ ಏಕೆ ಉಳಿಸಿಕೊಳ್ಳಲಾಗಿದೆ?

**ಶ್ರೀ ಮೊಹಮದ್ ಅಲಿ** – ಏಕೆಂದರೆ, ಈ ಗ್ರಾಮವು ಮೈಸೂರು ರಾಜ್ಯದಲ್ಲಿಯೇ ಇರುವುದಕ್ಕೆ ಹೆಚ್ಚು ಅರ್ಹವಾಗಿದೆ.

## ಸಾರಿಗೆ ವಾಹನಗಳಿಗೆ ಅಂತರರಾಜ್ಯ ಪರವಾನಗಿ

**ಶ್ರೀ ಜಿ.ಟಿ. ಗೋವಿಂದ ರೆಡ್ಡಿ (ಮಧುಗಿರಿ)** ಸಾರಿಗೆ ಸಚಿವರು ದಯವಿಟ್ಟು ತಿಳಿಸುವರೇ–

(ಎ) ಸಾರಿಗೆ ವಾಹನಗಳಿಗೆ ಅಂತರರಾಜ್ಯ ಪರವಾನಗಿಗಳನ್ನು ಮಂಜೂರು ಮಾಡುವಲ್ಲಿ ಅನುಸರಿಸಲಾದ ಕಾರ್ಯ ವಿಧಾನ;

(ಬಿ) ಜಿಲ್ಲಾ ಸಾರಿಗೆ ಅಧಿಕಾರಿಯವರಲ್ಲಿ ಅರ್ಜಿಗಳು ಇದ್ದಾಗ್ಯೂ, ಆಯುಕ್ತರು ನೇರವಾಗಿ ಅರ್ಜಿಗಳನ್ನು ಪಡೆದು ಅನುಮತಿ ನೀಡಿದರೆಂಬುದು ದೊಡ್ಡವಿಷಯವೆ?

(ಸಿ) ಈ ರೀತಿ ಮಾಡಿದುದರಿಂದ ಜಿಲ್ಲಾ ಸಾರಿಗೆ ಅಧಿಕಾರಿಯವರಿಗೆ ಅರ್ಜಿ ನೀಡಿದ ಅರ್ಜಿದಾರರಿಗೆ ಅನ್ಯಾಯ ಮಾಡಿದಂತಾಗುತ್ತದೆ ಎಂಬುದು ಅವರ ಗಮನಕ್ಕೆ ಬಂದಿದೆಯೇ?

**ಶ್ರೀ ಮೊಹಮದ್ ಅಲಿ (ಸಾರಿಗೆ ಸಚಿವರು)** –

(ಎ) ಸಾರಿಗೆ ವಾಹನಗಳಿಗೆ ಅಂತರರಾಜ್ಯ ಮಾರ್ಗಗಳ ಬಗ್ಗೆ ಅಂತರರಾಜ್ಯ ಪರವಾನಗಿ ನೀಡುವ ಬಗ್ಗೆ ಮೋಟಾರು ವಾಹನ ಅಧಿನಿಯಮಗಳ 1939ರ 47 ಮತ್ತು 63ನೇ ಪ್ರಕರಣಗಳೊಂದಿಗೆ ಓದಲಾದ 57ನೇ ಪ್ರಕರಣದಲ್ಲಿ ಗೊತ್ತುಪಡಿಸಿದಂಥ ಕಾರ್ಯವಿಧಾನವನ್ನು ಅನುಸರಿಸಲಾಗಿದೆ.

(ಬಿ) ಇಲ್ಲ

(ಸಿ) ಮೇಲಿನ (ಬಿ)ನಲ್ಲಿ ನೀಡಿದ ಉತ್ತರದ ದೃಷ್ಟಿಯಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ.

**ಶ್ರೀ ಜಿ.ಟಿ. ಗೋವಿಂದರೆಡ್ಡಿ** – 1968–69ನೇ ಸಾಲಿನಲ್ಲಿ ಆಂಧ್ರದಿಂದ ಮೈಸೂರಿಗೆ ಹಾಗೂ ಮೈಸೂರಿನಿಂದ ಆಂಧ್ರಕ್ಕೆ ಎಷ್ಟು ಪರವಾನಗಿಗಳನ್ನು ಕೊಟ್ಟಿದ್ದೀರಿ?

**ಅಧ್ಯಕ್ಷರು** – ಇಲ್ಲಿರುವ ಪ್ರಶ್ನೆ ಪ್ರೊಸೀಜರು ಬಗ್ಗೆ ಇದೆ. ಮಾನ್ಯ ಸದಸ್ಯರು ಬೇರೆ ಪ್ರಶ್ನೆ ಕೇಳುತ್ತಿದ್ದಾರೆ. ಇದು ಇಲ್ಲಿ ಬರುವುದಿಲ್ಲ. ಇದನ್ನು ಅನುಮತಿಸುವುದಿಲ್ಲ.

**ಶ್ರೀ ಸಿದ್ದಯ್ಯ ಕಾಶೀಮಠ್** – ಇಂಟರ್–ಸ್ಟೇಟ್ ಪರ್ಮಿಟ್ಟುಗಳಿಗಾಗಿ ಅನೇಕ ಅರ್ಜಿಗಳು ಬಂದಿವೆ. ಇವನ್ನು ಬೇಗನೇ ಮಂಜೂರು ಮಾಡಿಕೊಡುತ್ತೀರಾ?

**ಶ್ರೀ ಮೊಹಮದ್ ಅಲಿ** – ಆಂಧ್ರಪ್ರದೇಶ ಸರ್ಕಾರದೊಂದಿಗೆ ನಾವು ಮಾಡಿಕೊಂಡ ಬದಲಿ ಒಪ್ಪಂದವನ್ನು ಇದು ಅವಲಂಬಿಸುತ್ತದೆ. ಮೈಸೂರು ರಾಜ್ಯಕ್ಕೆ ಸಂಬಂಧಿಸುವಷ್ಟರ ಮಟ್ಟಿಗೆ ಅಂತರರಾಜ್ಯ ಖಾಸಗಿ ಸ್ಟೇಟ್ ಕ್ಯಾರಿಯೇಜ್‌ಗಳ ಸಂಚಾರಕ್ಕೆ ಗಡೀ ಭಾಗದ ದಾರಿಯನ್ನು ಮುಚ್ಚಲಾಗಿದೆ. ಏಕೆಂದರೆ ಕೋಲಾರ ಜಿಲ್ಲೆಯ ಮಾರ್ಗಗಳನಂತರ ಈ ಮಾರ್ಗಗಳನ್ನು ರಾಷ್ಟ್ರೀಕರಣಗೊಳಿಸಲಾಗಿದೆ.

**ಶ್ರೀ ಹೆಚ್.ವಿ. ಜ್ವಾಲನಯ್ಯ** – ಇಂಟರ್–ಸ್ಟೇಟ್ ಪರ್ಮಿಟ್‌ಗಳ ಪ್ರಕಾರನಮ್ಮ ಸ್ಟೇಟಿನವರು ಆಂಧ್ರದಲ್ಲಿ ಬಸ್ಸುಗಳನ್ನು ಓಡಿಸುವಾಗ ಅಲ್ಲಿ ಬೇರೆ ಒಂದು ರೇಟು ಇರುತ್ತದೆ. ಗಡಿ ಭಾಗದಲ್ಲಿ ಬೇರೆ ರೇಟುಗಳಿರುತ್ತವೆ.ನಮ್ಮ ಬಸ್ಸುಗಳನ್ನು ಆಂಧ್ರದವರು ಇಲ್ಲಿ ಓಡಿಸುವಾಗ ಎಷ್ಟು ರೇಟು ಕೊಡಬೇಕೆಂದು ಮಾಡಿದ್ದಾರೆ?

**ಶ್ರೀ ಮೊಹಮದ್ ಅಲಿ** – ಈ ಒಪ್ಪಂದ ಏನೆಂದರೆ,ನಮ್ಮ ಬಸ್ಸುಗಳು ಆಂಧ್ರಪ್ರದೇಶದೊಳಗೆ ಪ್ರವೇಶಿಸಿದಾಗ ನಾವುನಮ್ಮ ನಿಯಮಗಳನ್ನು ಪಾಲಿಸಬೇಕು ಮತ್ತು ಆಂಧ್ರಪ್ರದೇಶದ ಬಸ್ಸುಗಳು ಮೈಸೂರು ರಾಜ್ಯದೊಳಗೆ ಪ್ರವೇಶಿಸಿದಾಗ ಅವರು, ಅವರ ನಿಯಮವನ್ನು ಪಾಲಿಸುತ್ತಾರೆ.

**ಶ್ರೀ ಜಿ. ಚಂದ್ರಕಾಂತ್** – ಅಂತರರಾಜ್ಯ ಪರವಾನಗಿಗಳನ್ನು ನೀಡುವಾಗ ಆಂಧ್ರಪ್ರದೇಶ ಸರ್ಕಾರವು ಬದಲಿ ಒಪ್ಪಂದದಡಿ ಮಾಡಿದ ವಾಗ್ದಾದವನ್ನು ಪಾಲಿಸಿಲ್ಲ.

**ಶ್ರೀ ಮೊಹಮದ್ ಅಲಿ** – ಎರಡೂ ರಾಜ್ಯಗಳ ಆಯುಕ್ತರು ಮಾಡಿಕೊಂಡ ಒಪ್ಪಂದವನ್ನು ಅನುಮೋದಿಸುವಲ್ಲಿ ಸ್ವಲ್ಪ ತೊಂದರೆ ಇತ್ತು. ಏಕೆಂದರೆ, ಒಪ್ಪಂದದ ಪ್ರಕಾರ ಆಂಧ್ರಪ್ರದೇಶದವರಿಗೆ ರಾಷ್ಟ್ರೀಕೃತ ಮಾರ್ಗಗಳಲ್ಲಿ ಬಸ್ ಓಡಿಸಲು ಅನುಮತಿಸುವ ಪ್ರಸ್ತಾವ ಇತ್ತು. ಆದರೆ, ಇದಕ್ಕೆ ಕಾನೂನು ಪ್ರಕಾರ ಮತ್ತು ಉಚ್ಚನ್ಯಾಯಾಲಯ ಮತ್ತು ಸರ್ವೋಚ್ಚ ನ್ಯಾಯಾಲಯದ ಆಜ್ಞೆಗಳ ಪ್ರಕಾರ ಅನುಮತಿ ಇರಲಿಲ್ಲ.

**ಶ್ರೀ ಜಿ. ಚಂದ್ರಕಾಂತ್** – ಆಂಧ್ರಪ್ರದೇಶದ ಬಸ್ಸುಗಳು ಮಾತ್ರ ಮೈಸೂರು ರಾಜ್ಯಕ್ಕೆ ಬರುತ್ತಿವೆ ಮತ್ತು ಮೈಸೂರು ರಾಜ್ಯದ ಬಸ್ಸುಗಳು ಆಂಧ್ರಪ್ರದೇಶದಲ್ಲಿ ಓಡುತ್ತಿಲ್ಲ ಎಂಬುದು ಒಂದು ದೊಡ್ಡ ವಿಷಯವಲ್ಲವೇ?

**ಶ್ರೀ ಮೊಹಮದ್ ಅಲಿ** – ಅದು ಸರಿಯಲ್ಲ.

**ಶ್ರೀ ಎಂ.ಎಸ್. ಕೃಷ್ಣನ್** – ಅಂತರರಾಜ್ಯ ಪರವಾನಗಿಗಳನ್ನು ಮಂಜೂರು ಮಾಡುವ ವಿಷಯದಲ್ಲಿ ಆಯುಕ್ತರು ಮತ್ತು ಇತರ ಅಧಿಕಾರಿಗಳು ಒಂದು ಗ್ರೇಡೆಡ್ ಮಾಮೂಲನ್ನು ನಿಗದಿಪಡಿಸಿದ್ದರು ಎಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಮೊಹಮದ್ ಅಲಿ** – ಅಂಥ ವಿಷಯವೇನೂ ಸರ್ಕಾರದ ಗಮನಕ್ಕೆ ಬಂದಿಲ್ಲ.

**ಶ್ರೀಮತಿ ಕೆ.ಎಸ್. ನಾಗರತ್ನಮ್ಮ** – ಗ್ರಾಂಟ್–ಇನ್–ಏಡ್ ರೂಲ್ಸ್ ಒಂದು ರೀತಿ ಇರುತ್ತದೆ. ಆಗಾಗ್ಗೆ ಡೆಪ್ಯುಟಿ ಕಮೀಷನರ್ ಹಾಗೂ ಮುನಿಸಿಪಲ್ ಕಮೀಷನರ್ ಮಧ್ಯೆ ಮಧ್ಯೆ ಒಂದೊಂದು ಸರ್ಕ್ಯುಲರ್ ಕಳುಹಿಸುತ್ತಿರುತ್ತಾರೆ. ಅಂದಮೇಲೆ ಶಿಕ್ಷಣ ಸಂಸ್ಥೆಗಳು ಯಾವ ರೂಲ್ಸ್‌ನ್ನು ಪಾಲಿಸಬೇಕು?

**ಶ್ರೀ ಕೆ.ವಿ. ಶಂಕರಗೌಡ** – ವಿದ್ಯಾ ಇಲಾಖೆಯವರು ಜಾರಿಗೆ ತಂದಿರುವ ರೂಲ್ಸನ್ನು ಅನುಸರಿಸಬೇಕು.

**ಶ್ರೀ ಸಿ.ಕೆ. ರಾಜಯ್ಯ ಶೆಟ್ಟಿ** – ಸಹಾಯಾನುದಾನ ನಿಯಮಗಳ ಅಡಿಯಲ್ಲಿ ಕೆಲಸ ಮಾಡುತ್ತಿರುವ ಸಂಸ್ಥೆಗಳಲ್ಲಿ ಶೇಕಡಾ 50ಕ್ಕಿಂತ ಹೆಚ್ಚು ಸಂಸ್ಥೆಗಳು ನಿಯಮಗಳನ್ನು ಸರಿಯಾಗಿ ಪಾಲಿಸುತ್ತಿಲ್ಲ. ನಿಯಮವನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಲು ಸರ್ಕಾರವು ಕ್ರಮ ಕೈಗೊಳ್ಳುವುದೇ?

**ಶ್ರೀ ಕೆ.ವಿ. ಶಂಕರಗೌಡ** – ಶೇಕಡಾ 50ರಷ್ಟು ಸಂಸ್ಥೆಗಳು ನಿಯಮ ಪಾಲಿಸುತ್ತಿಲ್ಲ ಎಂಬುದು ದೊಡ್ಡ ವಿಷಯವಲ್ಲ. ಎಲ್ಲೋ ಕೆಲವರು ನಿಯಮ ಪಾಲಿಸದೇ ಇರಬಹುದು. ಅವರ ವಿರುದ್ಧ ನಿಯಮಗಳ ಪ್ರಕಾರ ಕ್ರಮ ಕೈಗೊಂಡಿದ್ದೇವೆ.

## ಬೀದರ್‌ನಿಂದ ಬೆಂಗಳೂರಿಗೆ ಬಸ್ ಸೇವೆ

**ಶ್ರೀ ಚಂದ್ರಕಾಂತ ಗುರುಪಾದಪ್ಪ (ಬೀದರ್)**–ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ತಿಳಿಸುವರೇ –

(ಎ) ಬೀದರ್ ಮತ್ತು ಬೆಂಗಳೂರನ್ನು ಸಂಪರ್ಕಿಸಲು ರಸ್ತೆ ಮೂಲಕವಾಗಲಿ ಅಥವಾ ರೈಲಿನ ಮೂಲಕವಾಗಲಿ ನೇರ ಸಾರಿಗೆ ವ್ಯವಸ್ಥೆ ಇಲ್ಲದಿರುವ ಕಾರಣ ಬೀದರ್‌ನಿಂದ ಬೆಂಗಳೂರಿಗೆ ಒಂದು ಕ್ರಮಬದ್ಧ ಬಸ್ ಸೇವೆಯನ್ನು ಸರ್ಕಾರವು ನೀಡುವುದೇ?

(ಬಿ) ಬೀದರ್‌ನಿಂದ ಬೆಂಗಳೂರಿಗೆ ಮೈಸೂರು ರಸ್ತೆ ಸಾರಿಗೆ ನಿಗಮವು ಬಸ್ ಸೇವೆಯನ್ನು ಅತಿ ಶೀಘ್ರದಲ್ಲಿಯೇ ನೀಡುವಂತೆ ಸರ್ಕಾರವು ಕ್ರಮ ಕೈಗೊಳ್ಳುವುದೇ?

(ಸಿ) ಇಲ್ಲದಿದ್ದರೆ, ಬೀದರ್ ಮತ್ತು ಬೆಂಗಳೂರುನಡುವೆ ಬಸ್ಸನ್ನು ಓಡಿಸಲು ಖಾಸಗಿ ಬಸ್ ಮಾಲೀಕರು ಮುಂದೆ ಬಂದರೆ ಅವರಿಗೆ ಅನುಮತಿ ನೀಡುವುದೇ?

**ಶ್ರೀ ಮೊಹಮದ್ ಅಲಿ (ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು) –**

(ಎ) ಪ್ರಯಾಣಿಕರ ಅಗತ್ಯಗಳನ್ನು ಪರಿಗಣಿಸಿ ಮೈಸೂರು ರಾಜ್ಯ ರಸ್ತೆ ಸಾರಿಗೆ ನಿಗಮವು ಗುಲ್ಬರ್ಗಾ ಮತ್ತು ಬೆಂಗಳೂರುಗಳನಡುವೆ ಪ್ರಾಯೋಗಿಕ ಆಧಾರದ ಮೇಲೆ ರಾತ್ರಿ ಓಡಿಸುವ ಬಸ್ಸನ್ನು ಒದಗಿಸಲು ತೀರ್ಮಾನಿಸಿದೆ. ಬೀದರ್, ಗುಲ್ಬರ್ಗಾ ಮತ್ತು ಬೆಂಗಳೂರುಗಳನ್ನು ಸಂಪರ್ಕಿಸುವಂತೆ, ಬೀದರ್ ಮತ್ತು ಬೆಂಗಳೂರುಗಳನಡುವೆ, ನೇರ ಸಂಚಾರ ಸಾಮರ್ಥ್ಯವನ್ನು ಗಮನಿಸಿದನಂತರ ಮೈಸೂರು ರಾಜ್ಯ ರಸ್ತೆ ಸಾರಿಗೆ ನಿಗಮವು ನೇರ ಸರ್ವಿಸ್ ಬಸ್ ಅನ್ನು ಓಡಿಸುವ ಬಗ್ಗೆ ಪರಿಗಣಿಸುತ್ತದೆ.

(ಬಿ) (ಎ)ನಲ್ಲಿ ನೀಡಿರುವ ಉತ್ತರವನ್ನು ದಯವಿಟ್ಟು ನೋಡಿ

(ಸಿ) (ಎ)ನಲ್ಲಿನ ಉತ್ತರದ ದೃಷ್ಟಿಯಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ.

**ಶ್ರೀ ಚಂದ್ರಕಾಂತ್ ಗುರುಪಾದಪ್ಪ** – ಗುಲ್ಬರ್ಗಾ ಹಾಗೂ ಬೆಂಗಳೂರುನಡುವೆ ರಾತ್ರಿ ಬಸ್ ಸೇವೆ ಒದಗಿಸಲು ತೀರ್ಮಾನಿಸಲಾಗಿದೆ ಎಂಬುದನ್ನು ನೀವು ತಿಳಿಸಿದ್ದೀರಿ. ಬಸ್ಸನ್ನು ಗುಲ್ಬರ್ಗಾದಿಂದ ಓಡಿಸುವ ಬದಲಾಗಿ ಬೀದರ್‌ದಿಂದ ನೇರವಾಗಿ ರೂಢಿಸುವುದು ಸೂಕ್ತವಾಗುವುದಲ್ಲವೇ?

**ಶ್ರೀ ಮೊಹಮದ್ ಅಲಿ** – ಈಗಾಗಲೇ ಉತ್ತರಿಸಿದಂತೆ, ಗುಲ್ಬರ್ಗಾದಿಂದ ಬೆಂಗಳೂರಿಗೆ ಓಡಿಸಲು ಉದ್ದೇಶಿಸಲಾದ ಬಸ್ ಸೇವೆಯು ಕೇವಲ ಪ್ರಾಯೋಗಿಕ ಆಧಾರದ ಮೇಲೆ ಮಾತ್ರ ಈ ಪ್ರಯೋಗವು ಯಶಸ್ವಿಯಾದರೆ, ನಿಗಮವು 500 ಮೈಲಿಗಳಿಗಿಂತ ಹೆಚ್ಚಿಗೆ ದೂರದಲ್ಲಿರುವ ಬೀದರ್‌ದಿಂದ ವೇಗದೂತ ಬಸ್ಸನ್ನು ಓಡಿಸಲು ಆಲೋಚಿಸುತ್ತದೆ.

**ಶ್ರೀ ಚಂದ್ರಕಾಂತ ಗುರುಪಾದಪ್ಪ** – ಗುಲ್ಬರ್ಗಾದ ಬದಲಾಗಿ ಬೀದರ್‌ದಿಂದಲೇ ಈ ಪ್ರಯೋಗ ಪ್ರಾರಂಭಿಸುವುದು ಸೂಕ್ತವಲ್ಲವೇ?

**ಶ್ರೀ ಮೊಹಮದ್ ಅಲಿ** – ನಿಗಮವು ಕಳೆದ ವರ್ಷವೆ ಗುಲ್ಬರ್ಗಾ ಮತ್ತು ಬೆಂಗಳೂರುನಡುವೆ ನೇರ ಸೇವೆಯನ್ನು ಪ್ರಾರಂಭಿಸಿದೆ. ಆದರೆ ಇದು ವಿಫಲವಾಗಿದೆ. ಆದ್ದರಿಂದ ಬೀದರ್ ಮತ್ತು ಬೆಂಗಳೂರುನಡುವೆ ಮತ್ತೇ ಸೇವೆ ಪ್ರಾರಂಭಿಸುವುದು ತುಂಬ ಅಪಾಯದ್ದಾಗಿದೆ. ಮತ್ತೆ ಗುಲ್ಬರ್ಗಾದಿಂದ ಬೆಂಗಳೂರಿಗೆ ಬಸ್ ಓಡಿಸಲು ಪ್ರಯೋಗ ಮಾಡಲಾಗುತ್ತಿದೆ.

**ಶ್ರೀ ರಾಜ ಪಿಡ್ ನಾಯಕ** – ಉದ್ದೇಶಿತ ರಾತ್ರಿ ಬಸ್ ಸೇವೆಯನ್ನು ಯಾವಾಗ ಪ್ರಾರಂಭಿಸಲು ಉದ್ದೇಶಿಸಲಾಗಿದೆ?

**ಶ್ರೀ ಮೊಹಮದ್ ಅಲಿ** – ರಸ್ತೆ ಸಾರಿಗೆ ನಿಗಮವು ರಸ್ತೆ ಪರವಾನಗಿಗಾಗಿ ಅರ್ಜಿ ಸಲ್ಲಿಸಿದೆ. ಅರ್ಜಿಯು ರಸ್ತೆ ಸಾರಿಗೆ ಕಚೇರಿ ಬಳ್ಳಾರಿ ಇವರ ಮುಂದೆ ಇತ್ಯರ್ಥದಲ್ಲಿದೆ.

**ಶ್ರೀ ಎಸ್.ಎಂ. ಗುರೆಡ್ಡಿ** – ಈಗ ಗುಲ್ಬರ್ಗಾ ಬಳ್ಳಾರಿ ಲೈನಿನಲ್ಲಿರುವಂತಹ ಬಸ್ಸು ಸರಿಯಾಗಿ ಬರುತ್ತಿಲ್ಲ. ಆದ್ದರಿಂದ ಈ ರಸ್ತೆಯಲ್ಲಿ ಬಸ್ಸನ್ನು ಓಡಿಸಲು ಹೊಸ ಬಸ್ಸು ಬಂದನಂತರ ವಿಚಾರ ಮಾಡುತ್ತೀರಾ ಅಥವಾ ಹಳೆಯ ಬಸ್ಸನ್ನೇ ತೀರ್ಮಾನ ಮಾಡಿದ್ದೀರಾ?

**ಶ್ರೀ ಮೊಹಮದ್ ಅಲಿ** – ಈ ಪೂರಕ ಪ್ರಶ್ನೆಯು ಈ ಪ್ರಶ್ನೆಗೆ ಸಂಬಂಧಿಸಿರುವುದಿಲ್ಲ.

**ಶ್ರೀ ದಿಗಂಬರರಾವ್ ಬಲವಂತರಾವ್** – ಗುಲ್ಬರ್ಗಾ ಜಿಲ್ಲೆಯಲ್ಲಿ ಎಷ್ಟು ಹೊಸ ಅಂತರರಾಜ್ಯ ಬಸ್ಸುಗಳನ್ನು ಪ್ರಾರಂಭಿಸಲಾಗುತ್ತಿದೆ?

**ಶ್ರೀ ಮೊಹಮದ್ ಅಲಿ** – ಅಂತರರಾಜ್ಯ ಬಸ್ ಸೇವೆಯನ್ನು (ಪ್ರಾರಂಭಿಸುವುದು) ರಾಜ್ಯದೊಳಗೆ ವೇಗದೂತ ಸೇವೆಗಾಗಿ ವ್ಯವಸ್ಥೆ ಮಾಡುವುದಕ್ಕಿಂತ ಸಂಪೂರ್ಣವಾಗಿ ಭಿನ್ನವಾಗಿವೆ.

**ಶ್ರೀ ವಿ.ಎನ್. ಪಾಟೀಲ್** – ಸನ್ಮಾನ್ಯ ಸಚಿವರು ಪ್ರಯೋಗ ಮಾಡಲಾಗುತ್ತದೆ ಎಂದು ಹೇಳುತ್ತಿದ್ದಾರೆ. ಗುಲ್ಬರ್ಗಾದಿಂದ ಕೇವಲ ಎರಡು ಬಸ್ಸುಗಳಿವೆ. ಒಂದು ಬಳ್ಳಾರಿಗೆ ಬರುತ್ತದೆ ಅದು ಬಳ್ಳಾರಿ–ಬೆಂಗಳೂರು ಬಸ್ಸಿಗೆ ಸಂಪರ್ಕ ಕಲ್ಪಿಸುತ್ತದೆ. ಆದರೆ ಈ ಎರಡು ಸೇವೆಗಳನಡುವೆ ಸಮನ್ವಯವೇ ಇಲ್ಲ. ಗುಲ್ಬರ್ಗಾದಿಂದ ಬರುವ ಮತ್ತು ಬಳ್ಳಾರಿಯಿಂದ ಹೊರಡುವ ಬಸ್‌ನನಡುವೆ ಅಂತರ ಹೆಚ್ಚೆಂದರೆ 10 ನಿಮಿಷಗಳಾಗಿವೆ. ಇದರಿಂದಾಗಿ ಬೀದರ್ ಇತರೆಡೆಯಿಂದ ಬರುವ ಪ್ರಯಾಣಿಕರು ಬಹಳಷ್ಟು ಅನಾನುಕೂಲಕ್ಕೆ ಒಳಗಾಗುತ್ತಿದ್ದಾರೆ. ಪ್ರಯಾಣಿಕರ ಊಟಕ್ಕಾಗಿ ಸಾಕಷ್ಟು ಸಮಯವನ್ನು ನೀಡಲಾಗುತ್ತಿದೆ. ಇದರಿಂದಾಗಿ ಪ್ರಯಾಣಿಕರು ಒಂದು ಅಥವಾ ಎರಡು ಗಂಟೆಗಳವರೆಗೆ ಪರಿತಪಿಸುತ್ತಿರುವರು. ಹೀಗಾಗಿ ಗುಲ್ಬರ್ಗಾ–ಬೆಂಗಳೂರು ಸೇವೆಯು ಬೀದರ್‌ದಿಂದ ಪ್ರಯಾಣಿಸುವ ಜನರಿಗೆ ಯಾವುದೇ ಉಪಯೋವಾಗುತ್ತಿಲ್ಲ. ಅಲ್ಲದೆ, ಇನ್ನಾವುದೇ ಬಸ್ಸು ಖಾಲಿ ಓಡುತ್ತಿಲ್ಲ. ಪ್ರತಿಯೊಂದು ಬಸ್ಸು ಜನದಟ್ಟಣೆಯಿಂದ ಕೂಡಿರುತ್ತವೆ. ಆದ್ದರಿಂದ ಬೀದರ್–ಬೆಂಗಳೂರುನಡುವೆ ನೇರ ಸೇವೆಯನ್ನು ಪ್ರಾರಂಭಿಸುವಂತೆ ನಾನು ಸರ್ಕಾರವನ್ನು ಕೋರಿಕೊಳ್ಳಬಹುದು.

**ಶ್ರೀ ಮೊಹಮದ್ ಅಲಿ** – ಕೋರಿಕೆಯನ್ನು ಯುಕ್ತವಾಗಿ ಪರ್ಯಾಲೋಚಿಸಲಾಗುತ್ತದೆ.

## ರಾಯಚೂರು ಜಿಲ್ಲೆಯಲ್ಲಿ ಎಂ.ಎಸ್.ಆರ್.ಟಿ.ಸಿ. ವಿಭಾಗ

**ಶ್ರೀ ತಿರುಮಲದೇವರಾಯ (ಗಂಗಾವತಿ)**–ಮಾನ್ಯ ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು ದಯವಿಟ್ಟು ಈ ಮುಂದಿನ ವಿಷಯಗಳಿಗೆ ಉತ್ತರಿಸುವರೆ –

(ಎ) ರಾಯಚೂರು ಜಿಲ್ಲೆಯಲ್ಲಿ ಓಡಾಡುತ್ತಿರುವ ಬಸ್ಸುಗಳ ಸಂಖ್ಯೆ ಎಷ್ಟು?

(ಬಿ) ರಾಯಚೂರು ಜಿಲ್ಲೆಯಲ್ಲಿ ಎಂ.ಎಸ್.ಅರ್.ಟಿ.ಸಿ. ವಿಭಾಗ ಹೊಂದುವ ಯಾವುದೇ ಪ್ರಸ್ತಾವವಿದೆಯೇ?

**ಶ್ರೀ ಮೊಹಮದ್ ಅಲಿ (ಸಾರಿಗೆ ಮತ್ತು ಪ್ರವಾಸೋದ್ಯಮ ಸಚಿವರು)** –

(ಎ) ರಾಯಚೂರು ಜಿಲ್ಲೆಯ ರಾಯಚೂರು ಮತ್ತು ಲಿಂಗಸ್ಗುರು ಡಿಪೋಗಳು 68 ಷೆಡ್ಯೂಲ್‌ಗಳು ಕಾರ್ಯನಿರ್ವಹಿಸುತ್ತವೆ. 38 ರಾಯಚೂರು ಡಿಪೋನಲ್ಲಿ ಮತ್ತು 30 ಲಿಂಗಸುಗೂರು ಡಿಪೋದಲ್ಲಿ.

(ಬಿ) ಯಾವುದೇ ಪ್ರಸ್ತಾವವಿಲ್ಲ.

**ಶ್ರೀ ತಿರುಮಲದೇವರಾಯ** – ರಾಯಚೂರಿನಲ್ಲಿ ವಿಭಾಗ ಇದ್ದದ್ದು ಸರ್ಕಾರಕ್ಕೆ ತಿಳಿದಿದೆಯೇ, ತಿಳಿದಿದ್ದರೆ, ಅದನ್ನು ಯಾಕೆ ಅಲ್ಲಿಂದ ಸ್ಥಳಾಂತರಿಸಲಾಯಿತು?

**ಶ್ರೀ ಮೊಹಮದ್ ಅಲಿ** – ನಾನು ಆ ಮಾಹಿತಿಯನ್ನು ನೀಡುವ ಸ್ಥಿತಿಯಲಿಲ್ಲ. ಸನ್ಮಾನ್ಯ ಸದಸ್ಯರು ಒಂದು ನಿರ್ದಿಷ್ಟ ಪ್ರಶ್ನೆ ಕೇಳಿದರೆ ನಾನು ಮಾಹಿತಿ ನೀಡುತ್ತೇನೆ.

**ಶ್ರೀ ಎಂ. ನಾಗಪ್ಪ** – ರಾಯಚೂರು ಮುನಸಿಪಾಲಿಟಿಯಿಂದ ಡಿವಿಜಿನಲ್ ವರ್ಕ್‌ಶಾಪ್ ಸಲುವಾಗಿ ಸ್ಪೇಷಲ್ ಗ್ರಾಂಟ್ ಕೊಟ್ಟಿದ್ದರೂ ಅಂತಹ ಸಂದರ್ಭದಲ್ಲಿ ಆ ವರ್ಕ್‌ಶಾಪ್‌ನ್ನು ರಾಯಚೂರಿನಿಂದ ಗುಲ್ಬರ್ಗಾಕ್ಕೆ ಷಿಫ್ಟ್ ಮಾಡುವುದಕ್ಕೆ ಏನು ಕಾರಣಗಳು ಇದ್ದುವು?

**ಶ್ರೀ ಮೊಹಮದ್ ಅಲಿ** – ಈ ಪೂರಕ ಪ್ರಶ್ನೆಯು ಮೂಲ ಪ್ರಶ್ನೆಗೆ ಸಂಬಂಧಿಸಿಲ್ಲ.

**ಶ್ರೀ ರಾಜಾ ಪಿಡ್ ನಾಯಕ್** – ವಿಭಾಗವನ್ನು ಸ್ಥಾಪಿಸುವುದಕ್ಕಾಗಿ ಪರಿಗಣನೆಗೆ ತೆಗೆದುಕೊಂಡ ಅಂಶಗಳಾವುವು ಎಂಬುದನ್ನು ನಾನು ತಿಳಿಯಬಹುದೆ?

**ಶ್ರೀ ಮೊಹಮದ್ ಅಲಿ** – ಒಂದು ವಿಭಾಗದ ಸ್ಥಾಪನೆಗೆ ಷೆಡ್ಯೂಲ್‌ಗಳ ಸಂಖ್ಯೆ ಮತ್ತು ಆಡಳಿತಾತ್ಮಕ ಅಗತ್ಯತೆಗಳು ಬಹಳಷ್ಟು ಪ್ರಮುಖ ಅಂಶಗಳಾಗಿವೆ.

**ಶ್ರೀ ಎಸ್. ಆರ್. ಬೊಮ್ಮಾಯಿ** – ಸ್ವಾಮಿ, ಒಂದು ಪೂರಕ ಪ್ರಶ್ನೆಯನ್ನು ಕೇಳಿದಾಗ ಮತ್ತು ಸಭಾಧ್ಯಕ್ಷರು ಅದಕ್ಕೆ ಅನುಮತಿ ನೀಡಿರುವಾಗ ಸಚಿವರು ಈ ಪ್ರಶ್ನೆಯು ಮೂಲ ಪ್ರಶ್ನೆಗೆ ಸಂಬಂಧಿಸಿಲ್ಲ ಎಂದು ಅಲ್ಲಗಳೆಯಬಹುದೆ?

**ಸನ್ಮಾನ್ಯ ಸಭಾಧ್ಯಕ್ಷರು** – ಸನ್ಮಾನ್ಯ ಸಚಿವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಲು ಹಕ್ಕುಳ್ಳವರಾಗಿದ್ದಾರೆ. ಇದನ್ನು ಸಭಾಧ್ಯಕ್ಷರ ನಿರ್ಣಯ ಎಂದು ಪರಿಗಣಿಸಲಾಗುವುದಿಲ್ಲ. ಆದರೆ ಸದಸ್ಯರು ಈ ಉತ್ತರವನ್ನು ಒಪ್ಪಿದರೆ ನನ್ನ ಆಕ್ಷೇಪಣೆಯೆನ್ನಿಲ್ಲ.

**ಶ್ರೀ ಎಸ್. ಅರ್. ಬೊಮ್ಮಾಯಿ** – ಸಭಾಧ್ಯಕ್ಷರು ಅನುಮತಿಸಿರುವಾಗ, ಸಚಿವರು ಉತ್ತರ ನೀಡಲೇಬೇಕು.

**ಸನ್ಮಾನ್ಯ ಸಭಾಧ್ಯಕ್ಷರು** – ಸದಸ್ಯರು ನಾನು ನೀಡಿದ ರೂಲ್ಲಿಂಗ್ (ನಿರ್ಣಯ)ಅನ್ನು ಪಾಲಿಸಬೇಕು. ಅದನ್ನು ಅನುಸರಿಸಲು ಅನುಕೂಲವಾಗುವಂತೆ ನಾನು ಪುನರುಚ್ಚರಿಸುತ್ತಿದ್ದೇನೆ. ಪೂರಕ ಪ್ರಶ್ನೆಯನ್ನು ಹಾಕಿದಾಗ ಅದನ್ನು ಅನುಮತಿಸಬೇಕೋ ಅಥವಾ ಬೇಡವೋ ಎಂಬುದು ಅಧ್ಯಕ್ಷರಿಗೆ ಬಿಟ್ಟ ವಿಷಯವಾಗಿರುತ್ತದೆ. ಅದನ್ನು ಅನುಮತಿಸಿರುವಾಗ, ಸನ್ಮಾನ್ಯ ಸಚಿವರು ಉತ್ತರ ನೀಡಲೇಬೇಕಾಗುತ್ತದೆ. ಸಚಿವರ ಅಭಿಪ್ರಾಯವು ಈ ಪೂರಕ ಪ್ರಶ್ನೆಗೆ ಉತ್ತರಿಸಬೇಕಾಗಿಲ್ಲ ಎಂದಾದರೆ, ಅದು ಸಭಾಧ್ಯಕ್ಷರು ನೀಡಿದ ನಿರ್ಣಯವಾಗುವುದಿಲ್ಲ. ಸಭಾಧ್ಯಕ್ಷರು ಪೂರಕ ಪ್ರಶ್ನೆಗೆ ಅನುಮತಿಸಿರುತ್ತಾರೆ. ಸದಸ್ಯರು ಸಚಿವರ ಉತ್ತರದಿಂದ ತೃಪ್ತರಾದರೆ, ಅಧ್ಯಕ್ಷರು ಏನೂ ಮಾಡಲಾಗುವುದಿಲ್ಲ. ಅದನ್ನು ನಾನು ಮುಂದುವರಿಸುವುದಿಲ್ಲ.

ಸದಸ್ಯರು ಪ್ರಶ್ನಾವಳಿ ಕಾಲದಲ್ಲಿ ಕ್ರಿಯಾ ಲೋಪಗಳನ್ನು ಎತ್ತುವುದರಲ್ಲೇ ಎಲ್ಲ ಸಮಯವನ್ನು ಕಳೆದರೆ, ಅಮೂಲ್ಯವಾದ ಸಮಯನಷ್ಟವಾಗುತ್ತದೆ ಎಂದು ನಾನು ಹೇಳಬಹುದು. ಆದರೆ, ಅದು ಕ್ರಿಯಾ ಲೋಪವಾಗುವುದಿಲ್ಲ.

**ಶ್ರೀ ಎಂ. ನಾಗಪ್ಪ** – ಡಿವಿಜನಲ್ ಆಫೀಸನ್ನು ತೆರೆಯಬೇಕಾದರೆ ಏನೇನು ಕಾರಣಗಳು ಬೇಕು?

**ಶ್ರೀ ಮೊಹಮದ್ ಅಲಿ** – ನಾನು ಈಗ ತಾನೆ ಹೇಳಿದ್ದೇನೆ. ವಿಭಾಗವನ್ನು ಪ್ರಾರಂಭಿಸುವುದಕ್ಕೆ ಷೆಡ್ಯೂಲ್‌ಗಳ ಸಂಖ್ಯೆ ಮತ್ತು ಆಡಳಿತಾತ್ಮಕ ಅಗತ್ಯತೆಗಳು ಮಾನದಂಡಗಳಾಗಿರುತ್ತವೆ.

**ಶ್ರೀ ಎಂ. ನಾಗಪ್ಪ** – ಈ ಎಲ್ಲಾ ಕಾರಣಗಳು ಅಲ್ಲಿದ್ದರೂ, ಡಿವಿಜನಲ್ ಆಫೀಸು ಮತ್ತು ಡಿವಿಜನಲ್ ವರ್ಕ್ ಶಾಪ್‌ಗಳನ್ನು ಅಲ್ಲಿ ತೆರೆಯುವುದಕ್ಕೆ ಏನು ತೊಂದರೆ?

**ಶ್ರೀ ಮೊಹಮದ್ ಅಲಿ** – ಪ್ರಶ್ನೆಯು ವಿಭಾಗಕ್ಕೆ ಸಂಬಂಧಿಸಿದೆ. ಸನ್ಮಾನ್ಯ ಸದಸ್ಯರು ಅದಕ್ಕೆ ಸಂಬಂಧಿಸಿದಂತೆ ಬೇರೆ ಪ್ರಶ್ನೆಯನ್ನು ಕೇಳಿದರೆ ನಾನು ಮಾಹಿತಿಯನ್ನು ಸಂಗ್ರಹಿಸಿ ತಮಗೆ ನೀಡಬಲ್ಲೆ.

**ಶ್ರೀ ಎಸ್. ಗೋಪಾಲಗೌಡ** – ಮಾನ್ಯ ಸಚಿವರು ಬೇರೆ ಪ್ರಶ್ನೆ ಹಾಕಿ ಎಂದು ಹೇಳುತ್ತಿದ್ದಾರೆ. ಮಾನ್ಯ ಸಚಿವರು ಗುಲ್ಬರ್ಗಾಕ್ಕೆ ಸಂಬಂಧಪಟ್ಟವರು. ಈ ವಿಷಯ ಅವರಿಗೆ ಚೆನ್ನಾಗಿ ಗೊತ್ತಿದೆ. ನನ್ನ ಸ್ನೇಹಿತರು ಒಂದು ಪ್ರಶ್ನೆ ಕೇಳಿದರು. ಎಂ.ಎಸ್.ಆರ್.ಟಿ.ಸಿ.ಯವರು ಒಂದು ಡಿವಿಷನ್‌ನನ್ನು ತೆರೆಯಬೇಕಾದರೆ ಇರಬೇಕಾದಂಥ ಕಾರಣಗಳೇನೆಂಬುದಾಗಿ ಕೇಳಿದರು. ಉತ್ತರವಾಗಿ ಬಸ್ಸುಗಳ ಸಂಖ್ಯೆ ಹಾಗೂ ಅದಕ್ಕಾಗಿ ಎಷ್ಟು ಖರ್ಚು ಆಗುತ್ತದೆಂಬುದನ್ನು ಮಾತ್ರ ಹೇಳಿದರು. ಎರಡನೆಯದು ಇದ್ದಂಥ ಡಿವಿಷನ್‌ನನ್ನು ರಾಯಚೂರಿನಿಂದ ಗುಲ್ಬರ್ಗಾಕ್ಕೆ ವರ್ಗಾ ಮಾಡುವುದಕ್ಕೆ ಏನು ಕಾರಣವಿತ್ತು ಎಂಬುದಾಗಿ ಕೇಳಿದ್ದಾರೆ. ಇದು ಬಹಳ ಸ್ಪಷ್ಟವಾದ ಪ್ರಶ್ನೆಯಾಗಿರುವುದರಿಂದ ಮಾನ್ಯ ಮಂತ್ರಿಗಳು ಇದಕ್ಕೆ ಉತ್ತರವನ್ನು ವಿವರವಾಗಿ ಕೊಡುವುದು ಒಳ್ಳೆಯದು. ಅವರು ಕೊಟ್ಟ ಉತ್ತರ ಸಮರ್ಪಕವಾಗಿಲ್ಲ. ಉತ್ತರ ಯೋಗ್ಯವಾಗಿ ಹಾಗೂ ಸಮರ್ಪಕವಾಗಿ ಇಲ್ಲದಿದ್ದರೆ ಬೇರೆ ಪ್ರಶ್ನೆಯನ್ನು ಕೇಳೋಣ.

**ಸನ್ಮಾನ್ಯ ಸಭಾಧ್ಯಕ್ಷರು** – ಮಾನ್ಯ ಸದಸ್ಯರು ಅದನ್ನೇ ಪುನರಾವರ್ತಿಸಿದ್ದಾರೆ.

**ಶ್ರೀ ಮೊಹಮದ್ ಅಲಿ** – ಸ್ವಾಮಿ, ವೈಯಕ್ತಿಕವಾಗಿ ಈ ಬಗ್ಗೆ ನನಗೆ ತಿಳಿದಿಲ್ಲ. ಈ ಬಗ್ಗೆ ಏನಾಗಿದೆ ರಿಂದೂ ನನಗೆ ಗೊತ್ತಿಲ್ಲ. ಆದ್ದರಿಂದ ಮಾನ್ಯ ಸದಸ್ಯರು ಬೇರೆ ಪ್ರಶ್ನೆ ಕೇಳುವಂತೆ ಕೋರಿಕೊಳ್ಳುತ್ತಿದ್ದೇನೆ.

**ಸನ್ಮಾನ್ಯ ಸಭಾಧ್ಯಕ್ಷರು** – ಸದನದ ಮುಂದಿರುವ ಪ್ರಶ್ನೆ ಎಂದರೆ, ರಾಯಚೂರು ಜಿಲ್ಲೆಯಲ್ಲಿ ಎಷ್ಟು ಬಸ್ಸುಗಳು ಓಡಾಡುತ್ತಿವೆ, ಅದಕ್ಕೆ ಸಂಬಂಧಿಸಿದಂತೆ ಯಾವುವೇ ಪೂರಕ ಪ್ರಶ್ನೆಗಳಿಲ್ಲ. ಈ ಎರಡೂ ಪೂರಕ (ಗಳು) ಪ್ರಶ್ನೆಗಳು ಯವುದೇ ರೀತಿಯಲ್ಲಿ ಅದಕ್ಕೆ ಸಂಬಂಧಿಸಿಲ್ಲ. ಇನ್ನೊಂದು ಪ್ರಶ್ನೆ ಏನೆಂದರೆ, ರಾಯಚೂರು ಜಿಲ್ಲೆಯಲ್ಲಿ ಎಂ.ಎಸ್.ಆರ್.ಟಿ.ಸಿ. ವಿಭಾಗವನ್ನು ಸ್ಥಾಪಿಸುವ ಯಾವುದೇ ಪ್ರಸ್ತಾವ ಸರ್ಕಾರದ ಮುಂದಿದೆಯೇ. ಯಾವುದೇ ಅಂಥ ಪ್ರಸ್ತಾವವಿಲ್ಲ. ಮುಖ್ಯ ಪ್ರಶ್ನೆಯ ಉತ್ತರದ ಹೊರತಾಗಿ ಯಾವುದೇ ಮಾಹಿತಿ ಕೇಳಿದರೆ, ಮಾನ್ಯ ಸಚಿವರು, ಸದಸ್ಯರು ಪ್ರತ್ಯೇಕ ಪ್ರಶ್ನೆ ಕೇಳಿದರೆ ಮಾಹಿತಿಯನ್ನು ಸಂಗ್ರಹಿಸಿ ನೀಡುತ್ತೇನೆಂದು ಹೇಳುತ್ತಾರೆ.

ಅಂತಹವರಿಗೆ ಓವರ್‌ಲುಕ್ ಮಾಡುತ್ತೇವೆ. ಸಾಮಾನ್ಯವಾಗಿ ಯಾರಿಗೂ ಓವರ್‌ಲುಕ್ ಮಾಡುವುದಿಲ್ಲ. ಟೆಂಡರ್‌ಗಳು ಬಂದಿದ್ದರೆ ಅದನ್ನು ಯಾವ್ಯಾವ ಷರತ್ತುಗಳ ಪ್ರಕಾರ ಹಾಕಿದ್ದಾರೆಂಬುದನ್ನು ದೀರ್ಘವಾಗಿ ಟೆಕ್ನಿಕಲ್ ಸಬ್ ಕಮಿಟಿಯವರು ಎಂ.ಐ.ಪಿ.ಸಿ. ಮಾಡಿದ್ದಾರೆ.

**ಶ್ರೀ ಎನ್.ಹೆಚ್. ಮಾಸ್ತಿಗೌಡ** – ಅಲ್ಲಿ ಟೆಕ್ನಿಕಲ್ ಮನುಷ್ಯರು ಇದ್ದರೂ ಕೂಡ ಸಂದರ್ಭಾನುಸಾರವಾಗಿ ತೀರ್ಮಾನ ಮಾಡುವುದಕ್ಕೆ ಅವಕಾಶವಿಲ್ಲದೇ ಇರುವ ಹಾಗೆ ಯಾವುದಾದರೂ ಒಂದು ನಿಯಮದಂತೆ ಕೆಲಸ ಮಾಡಬೇಕೆಂಬುದು ಸರ್ಕಾರದವರು ಗೊತ್ತು ಮಾಡಿದ್ದಾರೆಯೇ?

**ಶ್ರೀ ವೀರೇಂದ್ರ ಪಾಟೀಲ್** – ಟೆಕ್ನಿಕಲ್ ಸಬ್ ಕಮೀಟಿ ಮುಂದೆ ಟೆಂಡರ್ ಬಂದಾಗ ಅದನ್ನು ಅಲ್ಲಿರತಕ್ಕ ಇಂಜಿನಿಯರ್ಸ್ ಒಂದು ಸಾರಿ, ಎರಡು ಸಾರಿ ನೋಡುತ್ತಾರೆ. ಟೆಂಡರ್ ಪ್ರಶ್ನೆಯೇ ಅಲ್ಲ, ಐಟಂಗಳನ್ನೂ ಸಹ ನೋಡುತ್ತಾರೆ.ನಮ್ಮ ಎಸ್ಟಿಮೇಟಿಗೆ ಅನುಗುಣವಾಗಿದೆಯೇ ಎಂಬುದನ್ನೂ ಸಹ ನೋಡುತ್ತಾರೆ. ಅವರ ಹತ್ತಿರ ಇರತಕ್ಕ ಆರ್ಗನೈಜೇಷನ್ ನೋಡುತ್ತಾರೆ. ಲೋಯೆಸ್ಟ್ ಟೆಂಡರ್ ಆಗಿದ್ದರೂ ಅವನ ಹತ್ತಿರ ಶಕ್ತಿ ಇದೆಯೇ, ಹಿಂದೆ ಎಷ್ಟೆಷ್ಟು ಕೆಲಸ ಮಾಡಿದ್ದಾನೆ ಎಂಬುದನ್ನೂ ಸಹ ನೋಡುತ್ತಾರೆ.

**ಶ್ರೀ ಎಸ್. ಶಿವಪ್ಪ** – ಈಗಿರತಕ್ಕ ಚೀಫ್ ಇಂಜಿನಿಯರಿಗೂ ಮತ್ತು ಈ ಕೆಲಸ ಕೊಟ್ಟಿರತಕ್ಕ ಕಂಟ್ರಾಕ್ಟ್‌ದಾರನಿಗೂ ಜಿಜ್ಞಾಸೆ ಬಂದು ಈ ಹೇಮಾವತಿ ಯೋಜನೆಯ ಕೆಲಸ ಬಹಳ ಮುಂದೂಡಲಾಗಿದೆ ಇದರಿಂದ ಎಷ್ಟೋ ವೇಗವಾಗಿನಡೆಯಬೇಕಾದಂಥ ಕೆಲಸಕ್ಕೆ ಬಹಳವಾಗಿ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

## ಗುಲ್ಬರ್ಗಾ ವಿಭಾಗದಲ್ಲಿ ವಾಹನಗಳ ಸಂಚಾರಕ್ಕೆ ಮಾರ್ಗ ತೆರಿಗೆ ವಿನಾಯಿತಿ

**ಶ್ರೀ ಎಲ್. ಶ್ರೀಕಂಠಯ್ಯ (ನಂಜನಗೂಡು) –ಹುಬ್ಬಳ್ಳಿ–ಸಾಗರ ನಡುವೆ ಬಸ್ಸುಗಳನ್ನು ಓಡಿಸುವುದು** ಸಾರಿಗೆ ಸಚಿವರು ದಯವಿಟ್ಟು ಉತ್ತರಿಸುತ್ತಾರೆಯೇ –

(ಎ) ಸರ್ಕಾರವು 8ನೇ ಜುಲೈ 1966ರಿಂದ 12ನೇ ಡಿಸೆಂಬರ್ 1967ರನಡುವೆ ಅಧಿಸೂಚನೆಗಳನ್ನು ಹೊರಡಿಸಿ ಗುಲ್ಬರ್ಗ ವಿಭಾಗದಲ್ಲಿ ವಾಹನಗಳ ಸಂಚಾರಕ್ಕೆ ಮಾರ್ಗ ತೆರಿಗೆಯನ್ನು ತಗ್ಗಿಸಲು ಅಥವಾ ವಿನಾಯಿತಿಗೊಳಿಸಲು ಅದೇಶಿಸಿದೆಯೇ;

(ಬಿ) ಹಾಗಿದ್ದರೆ, ಮೇಲ್ಕಂಡ ಅಧಿಸೂಚನೆಗಳ ಅಡಿಯಲ್ಲಿ ಲಾಭ ಪಡೆಯುವ ಮಾರ್ಗಗಳ ಸಂಖ್ಯೆ;

(ಸಿ) ಮಾರ್ಗ ತೆರಿಗೆಯ ತಗ್ಗಿಸುವಿಕೆ ಅಥವಾ ವಿನಾಯಿತಿಯಿಂದಾಗಿ ಸರ್ಕಾರವು ಹೊರಬೇಕಾದ ನಿವ್ವಳ ಹಣಕಾಸುನಷ್ಟ;

(ಡಿ) ಆ ಮಾರ್ಗಗಳಿಗೆ ಯಾರ ಶಿಫಾರಸುಗಳ ಮೇಲೆ ಈ ವಿನಾಯಿತಿ ನೀಡಲಾಗಿದೆ?

**ಶ್ರೀ ಮೊಹಮ್ಮದ್ ಅಲಿ (ಸಾರಿಗೆ ಸಚಿವರು)** –

(ಎ) ಮೂರು

(ಬಿ) ಪ್ರತಿ ವರ್ಷಕ್ಕೆ 9,845 ರೂಪಾಯಿಗಳು

(ಸಿ) ಮೋಟಾರು ವಾಹನಗಳ ಇಲಾಖೆಯ ಅಧಿಕಾರಿಗಳ ಶಿಫಾರಸಿನ ಮೇಲೆ ಮತ್ತು ಲೋಕೋಪಯೋಗಿ ಇಲಾಖೆಯ ಅಧಿಕಾರಿಗಳೊಂದಿಗೆ ಸಮಾಲೋಚಿಸಿದನಂತರ.

**ಶ್ರೀ ಎಂ. ನಾಗಪ್ಪ** – ಸ್ವಾಮಿ 8–7–1966ರಿಂದ 12–12–1967ರವರೆಗೆ ಗುಲ್ಬರ್ಗಾ ಜಿಲ್ಲೆಗೆ ವೆಹಿಕಲ್ಸ್ ತೆರಿಗೆ ವಸೂಲು ಮಾಡುವುದಕ್ಕೆ ವಿನಾಯ್ತಿ ಕೊಟ್ಟಿದ್ದೀರಿ, ಹೀಗೆಯೇ ಇತರ ಜಿಲ್ಲೆಗಳಿಗೂ ವಿನಾಯ್ತಿ ಕೊಟ್ಟಿದ್ದೀರಾ, ಗುಲ್ಬರ್ಗಾ ಜಿಲ್ಲೆಗೆ ವಿನಾಯ್ತಿ ಕೊಡುವುದಕ್ಕೆ ಅಧಿಕಾರಿಗಳಿಂದ ಏನು ಬರದಿ ಬಂದಿದೆ?

## ಎಂ.ಎಸ್.ಆರ್.ಟಿ.ಸಿ.ಯು ನೀಡಿದ ಸೀಸ್ಪನ್ ಟಿಕೆಟ್‌ಗಳ ರದ್ದಿಯಾತಿ

**ಶ್ರೀ ಕೆ.ಪಿ. ನಾಡಗೌಡ (ಮುಧೋಳ್)** – ಸಾರಿಗೆ ಸಚಿವರು ದಯವಿಟ್ಟು ಉತ್ತರಿಸುತ್ತಾರೆಯೇ –

(ಎ) ಹಿಂದಿನ ವರ್ಷದಲ್ಲಿ ಎಂ.ಎಸ್.ಆರ್.ಟಿ.ಸಿ. ಬಸ್‌ಗಳಿಗಾಗಿ ಸಾರ್ವಜನಿಕರಿಗೆ ಮಾಸಿಕ ಸೀಸ್ಪನ್ ಟಿಕೆಟ್‌ಗಳನ್ನು ನೀಡುವುದನ್ನು ರದ್ದುಪಡಿಸುವುದಕ್ಕೆ ಕಾರಣ;

(ಬಿ) ಅದನ್ನು ಶಾಲಾ ಮಕ್ಕಳಿಗೆ ಮತ್ರ ನಿರ್ಬಂಧಿಸಲು ಕಾರಣ?

**ಶ್ರೀ ಮೊಹಮದ್ ಅಲಿ (ಸಾರಿಗೆ ಸಚಿವರು)** –

(ಎ) ಸಾರ್ವಜನಿಕರಿಗೆ ಮಾಸಿಕ ರಿಯಾಯಿತಿ ಪಾಸುಗಳ ಸೌಲಭ್ಯವನ್ನು ದುರ್ಬಳಕೆ ಮಾಡುತ್ತಿದ್ದುದರಿಂದ ಮೇ 1963ರಲ್ಲಿ ಇದನ್ನು ಹಿಂತೆಗೆದುಕೊಳ್ಳಲಾಗಿದೆ.

(ಬಿ) ವಿದ್ಯಾರ್ಥಿಗಳಿಗೆ ತೊಂದರೆಯಾಗುವುದನ್ನು ತಪ್ಪಿಸಲು ಅವರಿಗೆ ಮಾತ್ರ ರಿಯಾಯಿತಿ ಪಾಸುಗಳನ್ನು ಕೊಡಲಾಗುತ್ತಿದೆ.

ನಾನು ಶಾಸಕನಾಗಿದ್ದಾಗ ಅವರು ಸಚಿವರಾಗಿದ್ದರು. ನಮ್ಮ ಜಿಲ್ಲೆಯ ಹಿರಿಯ ಮತ್ತು ಮುತ್ಸದ್ದಿ ರಾಜಕಾರಣಿಗಳವರು. ಕಾಂಗ್ರೆಸ್ ಪಕ್ಷದಲ್ಲಿ ಅವರಿಗೆ ತಮ್ಮದೆಯಾದ ಸ್ಥಾನಮಾನವಿತ್ತು. ಮೌಲ್ಯಾಧಾರಿತ ರಾಜಕೀಯ ಜೀವನ ಮಾಡಿದರು. ಸರಳ ಸ್ವಭಾವದ ವ್ಯಕ್ತಿ. ಎಲ್ಲರೊಡನೆ ಬೆರೆಯುತ್ತಿದ್ದರು. ಜಾತಿ, ಮತ, ಕೋಮು ಭಾವನೆಗಳು ಅವರ ಹತ್ತಿರಕ್ಕೆ ಸುಳಿಯಲಿಲ್ಲ. ಸ್ನೇಹ ಜೀವಿ, ರೈತ, ವ್ಯಾಪಾರಿ, ಉದ್ಯಮಿ ಎಂದು ಬೇಧ ಮಾಡದೆ, ಕೃಷಿ, ಕೂಲಿ ಕಾರ್ಮಿಕರನ್ನು ಸಮಾನ ದೃಷ್ಟಿಯಿಂದ ಕಾಣುತ್ತಿದ್ದರು. ಹೀಗಾಗಿ ಎಲ್ಲರ ದೃಷ್ಟಿಯಲ್ಲಿ ಮಹಮ್ಮದಲಿ ಸಾಹೇಬ ಎಂದೇ ಪ್ರಸಿದ್ಧಿ ಹೊಂದಿದ್ದರು. ಈಗ ಅವರು ಅಳಿದು ಹೋದರೂ ಇನ್ನೂ ಅವರ ನೆನಪು ನಮ್ಮೆಲ್ಲರ ಮನದಾಳದಲ್ಲಿ ಉಳಿದಿದೆ.

**- ಧರ್ಮಸಿಂಗ್,**

ಮಾಜಿ ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ

ನಾನು ಚಿಕ್ಕವನಿದ್ದಾಗ **ಮೊ**ಹಮ್ಮದ ಅಲಿ ಸಾಹೇಬರನ್ನು ನೋಡಿದ್ದೆ. ಅವರು ನಮ್ಮ ತಂದೆಯವರೊಂದಿಗೆ ನಮ್ಮೂರಿಗೆ ಬಂದಿದ್ದರು. ನಮ್ಮ ತಂದೆಯವರು ಬ್ಲಾಕ್ ಕಾಂಗ್ರೆಸ್ ಅಧ್ಯಕ್ಷರಾಗಿದ್ದರು. ಹೀಗಾಗಿ ಅವರು ಒಳ್ಳೆಯ ಸ್ನೇಹಿತರಾಗಿದ್ದರು. ಎತ್ತರದ ನಿಲುವು, ಬೆಳ್ಳನೆಯ ಬಣ್ಣ, ಕುರ್ತಾ, ಪೈಜಾಮ ಧರಿಸಿದ ಸರಳ ಉಡುಗೆ ಆಕರ್ಷಣೀಯವಾಗಿದ್ದವು. ಅವರನ್ನು ನೋಡಿದರೆ ಗೌರವ ಭಾವನೆ ಮೂಡಬೇಕು ಹಾಗಿದ್ದರು **ಮೊ**ಹಮ್ಮದ ಅಲಿ ಸಾಹೇಬರು. ಅವರು ನಮ್ಮ ಭಾಗದ ಶಾಸಕರಾಗಿ, ಸಚಿವರಾಗಿ ಕೆಲಸ ಮಾಡಿ ಹೋಗಿದ್ದಾರೆ. ಅವರನ್ನು ಕುರಿತು ಪುಸ್ತಕ ಬರೆಯಿಸುವ ಕೆಲಸ ನನ್ನ ಪಾಲಿಗೆ ಬಂದಿದ್ದು ನನ್ನ ಸೌಭಾಗ್ಯ. ಗ್ರಂಥಾಲಯ ಉಪ ಸಮಿತಿ ಅಧ್ಯಕ್ಷನಾಗಿ, ನಮ್ಮ ಭಾಗದ ಹಿರಿಯ ಸಂಸದಿಯ ಪಟು, **ಮೊ**ಹಮ್ಮದ ಅಲಿ ಸಾಹೇಬರ ಜೀವನ ಚರಿತ್ರೆ, ಹಾಗೂ ಅವರು ವಿಧಾನ ಸಭೆ, ವಿಧಾನ ಪರಿಷತ್ತಿನಲ್ಲಿ ಮಾತನಾಡಿದ ವಿಷಯಗಳು ಸಂಗ್ರಹಿಸಿ ಪುಸ್ತಕ ಮಾಲಿಕೆಯಲ್ಲಿ ಪ್ರಕಟಗೊಳ್ಳುತ್ತಿರುವುದು ಸಂತೋಷದ ಸಂಗತಿಯಾಗಿದೆ. ಮಹಮ್ಮದಲಿ ಸಾಹೇಬರ ನೆನಪು ಈ ಕೃತಿಯ ಮೂಲಕ ಮತ್ತೊಮ್ಮೆ ಎಲ್ಲರಿಗೂ ಆದಲ್ಲಿ ನಮ್ಮ ಸದಾಶಯ ನೆರವೇರಿದಂತೆಯೇ ಸರಿ.

**- ವಿಶ್ವನಾಥ ಪಾಟೀಲ ಹೆಬ್ಬಾಳ**

ಶಾಸಕರು, ಚಿತ್ತಾಪೂರ ಹಾಗೂ **ಅಧ್ಯಕ್ಷರು,**

**ಗ್ರಂಥಾಲಯ ಉಪಸಮಿತಿ.**

ಮೊಹಮ್ಮದ ಅಲಿ ಸಾಹೇಬರು ಅಲ್ಪ ಸಂಖ್ಯಾತ ವರ್ಗಕ್ಕೆ ಸೇರಿದ್ದರೂ ಗುಲಬರ್ಗಾದ ಬಹುಸಂಖ್ಯಾತ ಜನರ ಪ್ರೀತಿ ವಿಶ್ವಾಸಕ್ಕೆ ಒಳಗಾಗಿದ್ದರು. ಎಲ್ಲಾ ಜಾತಿ ಜನಾಂಗದ ನಾಯಕರಾಗಿದ್ದರು. ಅವರನ್ನು ನೋಡಿದಾಗ ಗೌರವ ಭಾವನೆ ಮೂಡುತಿತ್ತು. ಕೃಷಿ ಕಾರ್ಮಿಕರಿಂದ ಹಿಡಿದು ಉದ್ಯಮಿಗಳವರೆಗೆ ಎಲ್ಲರನ್ನೂ ಸಮಾನ ದೃಷ್ಟಿಯಿಂದ ಕಾಣುತ್ತಿದ್ದರು. ಎಲ್ಲಾ ಜನಾಂಗದ ಪ್ರೀತಿ ವಿಶ್ವಾಸ ಗಳಿಸಿಕೊಂಡಿದ್ದರು. ಯಾರೇ ಮನೆಗೆ ಬರಲಿ, ಅವರ ಸಮಸ್ಯೆಯನ್ನು ಸಮಚಿತ್ತದಿಂದ ಆಲಿಸುತ್ತಿದ್ದರು. ತಮ್ಮ ಕೈಲಾದ ಸೇವೆಯನ್ನು ಮಾಡುತ್ತಿದ್ದರು. ಯಾರಿಗೂ ಮನ ನೋಯಿಸಿ ಮಾತನಾಡಿದವರಲ್ಲ. ಎಂದಿಗೂ ತಮ್ಮ ಅಧಿಕಾರದ ದರ್ಪವನ್ನು ತೋರಿಸಿದವರಲ್ಲ. ಸಾಧ್ಯವಾದರೆ ಒಳ್ಳೆಯದನ್ನು ಮಾಡಿದ್ದಾರೆ. ಆಗದಿದ್ದರೆ ಸುಮ್ಮನೆ ಇದ್ದಾರೆ, ಬದಲಿಗೆ ಅವರು ಯಾರಿಗೂ ತೊಂದರೆ ಕೊಟ್ಟವರಲ್ಲ. ಅವರು ಯಾರಿಗಾದರೂ ತೊಂದರೆ ಕೊಟ್ಟ ಉದಾಹರಣೆಗಳಿಲ್ಲ. ಎಲ್ಲರೊಳು ಒಂದಾಗಿ ಬೆಲ್ಲ ಸಕ್ಕರೆಯಾಗಿದ್ದವರು, ಪಕ್ಷ ಸಂಘಟನೆ, ಕಾರ್ಯಕರ್ತರನ್ನು ಗುರುತಿಸುವುದು, ಸಹಾಯ ಮಾಡುವುದು ಅವರ ವಿಶೇಷ ಗುಣವಾಗಿತ್ತು. ಇವನಾರವ, ಇವನಾರವ ಎನ್ನದೆ, ಎಲ್ಲರನ್ನೂ ತಮ್ಮವರೆಂದು ಗುರುತಿಸಿ ಗೌರವಿಸುವ ಮನೋಭಾವನೆ ಅವರದಾಗಿತ್ತು. ಹೀಗಾಗಿ ಎಲ್ಲರೂ ಅಭಿಮಾನದಿಂದ ಅವರನ್ನು ನಮ್ಮ ಮೊಹಮ್ಮದ ಅಲಿ ಸಾಹೇಬ ಎಂದೇ ಕರೆಯುತ್ತಿದ್ದರು. ಗುಲಬರ್ಗಾದ ರಾಜಕೀಯ ಕ್ಷೇತ್ರದ ಮಿನುಗು ತಾರೆಯಾಗಿದ್ದರು.

**- ಮಾರುತಿರಾವ ಮಾಲೆ**

ವಿಧಾನ ಪರಿಷತ್ ಸದಸ್ಯರು

ಕಾಂಗ್ರೆಸ್ ಪಕ್ಷದ ಹಿರಿಯ ನಾಯಕರಾಗಿದ್ದ ಮೊಹಮ್ಮದ ಅಲಿ ಸಾಹೇಬರು ಕಲಬುರ್ಗಿ ಜಿಲ್ಲೆಯ ಅತ್ಯಂತ ಹಿರಿಯ ಮುತ್ಸದ್ದಿ ರಾಜಕಾರಣಿಗಳಾಗಿದ್ದರು. ಕರ್ನಾಟಕ ತುಂಬಾ ಅವರ ಹೆಸರು ಕೇಳಿ ಬರುತ್ತಿತ್ತು. ರಾಷ್ಟ್ರದ ಹಿರಿಯ ರಾಜಕಾರಣಿಗಳೊಂದಿಗೆ ಅವರ ಸಖ್ಯವಿತ್ತು. ಅವರು ಅನೇಕ ಬಾರಿ ಗುಲಬರ್ಗಾ ನಗರದಿಂದ ಶಾಸಕರಾಗಿ ಆಯ್ಕೆಗೊಂಡು, ಸಚಿವರಾಗಿ ಕಾರ್ಯನಿರ್ವಹಿಸಿದ್ದಾರೆ. ಅವರ ವಿಚಾರ ಧಾರೆ, ಬದುಕು ಮೌಲಿಕವಾಗಿದ್ದವು. ಅವರು ಕಣ್ಮರೆಯಾದರೂ ಅವರ ನೆನಪು ಜನ ಮನದಲ್ಲಿ ಅಚ್ಚಳಿಯದಂತೆ ಉಳಿದಿದೆ. ನನಗೆ ಅವರು ರಾಜಕೀಯ ಗುರುಗಳಾಗಿದ್ದರು. ಅವರು ಚುನಾವಣೆಗೆ ಸ್ಪರ್ಧಿಸಿದಾಗಲೆಲ್ಲ ಅವರ ಗೆಲುವಿಗಾಗಿ ಕೆಲಸ ಮಾಡಿದ್ದೇನೆ. ಮತ್ತು ಅವರ ಶ್ರೇಯಸ್ಸಿಗಾಗಿ ಶ್ರಮಿಸಿದ್ದೇನೆ.

ಅಪರೂಪದ ರಾಜಕಾರಣಿಯಾಗಿದ್ದರು. ಇಂಥ ಹಿರಿಯ ರಾಜಕಾರಣಿಯೊಂದಿಗೆ ಒಮ್ಮೆ ಚುನಾವಣಾ ಕಣದಲ್ಲಿ ಎದುರಾಗುವ ತೀವ್ರ ಸ್ಪರ್ಧೆಯೊಡ್ಡುವ ಅವಕಾಶ ಬಂತು. ಆಗ ನಾನು ಅವರ ಎದುರಾಳಿಯಾಗಿ ಸ್ಪರ್ಧಿಸಿದೆ. ಮುಸ್ಲಿಂ ಲೀಗ ಅಭ್ಯರ್ಥಿಯಾಗಿದ್ದ ನಾನು ಅವರ ಎದುರಿಗೆ ಸುಮಾರು 18 ಸಾವಿರ ಮತಗಳ ಅಂತರದಿಂದ ಗೆದ್ದು ಅವರನ್ನು ಸೋಲಿಸಿದೆ. ಆ ಚುನಾವಣೆಯಲ್ಲಿ ರಾಜಕೀಯ ಮಿನುಗು ತಾರೆಗಳಾಗಿದ್ದ ಮುಹಮ್ಮದಲಿ ಸಾಹೇಬರು, ಗಂಗಾಧರ ನಮೋಶಿಯವರು, ಸರದಾರ ಶರಣಗೌಡ ಇನಾಮದಾರ ಇನ್ನೂ ಅನೇಕರು ಅಲ್ಪ ಮತಗಳನ್ನು ಪಡೆದು ಸೋತರು. ಆನಂದ ಶರ್ಮಾ ಸಹ ಸೋತದ್ದು ಎಲ್ಲರಿಗೂ ಆಶ್ಚರ್ಯವನ್ನುಂಟು ಮಾಡಿತ್ತು. ಆಗ ನನಗೆ ಕೇವಲ 28 ವರ್ಷ ವಯಸ್ಸಿತ್ತು. ಸಾದತ್ ಹುಸೇನ್, ಇಕ್ಬಾಲ್ ಅಹಮ್ಮದ ಸರಡಗಿ ಇವರೆಲ್ಲ ಅಲ್ಪ ಮತಗಳು ಪಡೆದಿದ್ದರು. ಇದು ಚುನಾವಣೆ ಫಲಿತಾಂಶವಿರಬಹುದು. ಆದರೆ ವೈಯುಕ್ತಿಕವಾಗಿ ಹೇಳುವುದಾದರೆ, ಬಹಳ ಸರಳ ಹೃದಯಿ ಮತ್ತು ಕರುಣಾಮಯಿಯಾಗಿದ್ದರು. ಅವರಿಂದ ಸಹಾಯ ಪಡೆದವರು ಲೆಕ್ಕವಿಲ್ಲದಷ್ಟು ಜನರಿದ್ದಾರೆ. ಅವರೊಬ್ಬ ರಾಜಕೀಯ ನೇತಾರ ಎನ್ನುವುದರಲ್ಲಿ ಸಂಶಯವಿಲ್ಲ.

- **ಖಮರುಲ್ ಇಸ್ಲಾಂ**
ಮಾಜಿ ಸಚಿವರು

ಚಲೆ ತೋ ಚಲೆ
ನಹಿತೋ ಮಹಮ್ಮದ ಅಲಿ
ಎಂಬುದೊಂದು ಈ ಭಾಗದಲ್ಲಿ ಜನ ಜನಿತವಾದ ಮಾತಿದೆ. ಈ ಭಾಗದ ಕೃಷಿ ಕಾರ್ಮಿಕ, ಕೂಲಿಕಾರ, ವ್ಯಾಪಾರಿ, ಉದ್ಯೋಗಿ ಯಾರೇ ಇರಬಹುದು, ಅವನ ಬದುಕು ಸುಗಮವಾಗಿ ಸಾಗಿದರೆ ಪ್ರಶ್ನೆಯಿಲ್ಲ. ಆಕಸ್ಮಾತ್ತಾಗಿ ಆರ್ಥಿಕ ತೊಂದರೆಯಿಂದ ಮುಗ್ಗರಿಸಿ, ತತ್ತರಿಸಿ ಹೋದರೆ, ಆಗ ಹೇಳುವ ಈ ಮೇಲಿನ ಮಾತು ಸಾಮಾನ್ಯವಾಗಿತ್ತು. ನಡೆಯುವತನಕ ನಡೆಯಲಿ, ನಿಂತಹೊತ್ತಿಗೆ ಮಹಮ್ಮದಲಿ ಸಾಹೇಬರು ಸಹಾಯ ಮಾಡುತ್ತಾರೆಂದು ಕಲಬುರ್ಗಿ ಜಿಲ್ಲೆಯ ಜನತೆಗೆ ಅಪಾರವಾದ ಸಹಾಯ ಮಾಡಿದ್ದಾರೆ. ಪ್ರತಿ ಮನೆಯಲ್ಲಿ ಒಬ್ಬ ಸರಕಾರಿ ನೌಕರನಿರುವಂತೆ ಮಾಡಿದ್ದಾರೆ. ಬಸ್ ಡ್ರೈವರ್, ಕಂಡಕ್ಟರ್, ಕ್ಲೀನರ್, ಮೆಕ್ಯಾನಿಕ್ ಹುದ್ದೆಗಳಲ್ಲಂತೂ ಸಾವಿರ ಜನ ಸೇರಿಕೊಂಡರು. ಅವರು ಇಂದು ಚೆನ್ನಾಗಿ ಬದುಕುತ್ತಿರುವುದಕ್ಕೆ ಮೊಹಮ್ಮದಅಲಿ ಸಾಹೇಬರೇ ಕಾರಣವೆನ್ನಬೇಕು. ಇಂದು ಕರ್ನಾಟಕದ ಬಸ್ ನಿಲ್ದಾಣಗಳು ಅವರ ಸ್ಮಾರಕಗಳಾಗಿವೆ. ಸಾರಿಗೆ ವ್ಯವಸ್ಥೆ ಅವರ

ನೆನಪಿನ ಕಾಣಿಕೆಯಾಗಿದೆ. ಬಸ್‌ಗಳು ರಾಷ್ಟ್ರೀಕರಣಗೊಳ್ಳುವುದಕ್ಕೆ ಅವರೇ ಕಾರಣರು. ಖಾಸಗೀಕರಣದ ವ್ಯವಸ್ಥೆಯಿಂದ ರಾಷ್ಟ್ರೀಕರಣ ವ್ಯವಸ್ಥೆಗೆ ತಂದವರು ಅವರು. ಅವರ ಮುಂದಾಲೋಚನೆ ದೂರದೃಷ್ಟಿ ಮೆಚ್ಚುವಂತಹದ್ದು. ಕಲಬುರ್ಗಿ ಜಿಲ್ಲೆ ಮರೆಯದ ಒಬ್ಬ ಮಹಾನ ನೇತಾರ ಮಹಮ್ಮದಲಿ ಸಾಹೇಬರು.

**- ಬಸವರಾಜ ಇಂಗಿನ**
ರಾಜ್ಯ ಹಿರಿಯ ಉಪಾಧ್ಯಕ್ಷರು,
ಸಂಯುಕ್ತ ಜನತಾದಳ

ಕಲಬುರ್ಗಿ ಜಿಲ್ಲೆ ಹಿಂದೂ - ಮುಸ್ಲಿಂ ಜನಾಂಗದ ಭಾವೈಕ್ಯತೆಯ ತಾಣ. ಇಲ್ಲಿ ಶರಣಬಸವೇಶ್ವರರು ಮತ್ತು ಹಜರತ್ ಖಾಜಾ ಬಂದಾ ನವಾಜರು ನೆಲೆಸಿದ್ದಾರೆ. ಇಲ್ಲಿ ಹಿಂದೂ - ಮುಸ್ಲಿಂ ಭಾಹಿ ಭಾಹಿಗಳಾಗಿದ್ದಾರೆ. ಇಲ್ಲಿಯ ಮಹಾನಗರ ಸಭೆ ತನ್ನ ಎಂಬ್ಲೋೕಮ್‌ನಲ್ಲಿ ದೇವಾಲಯ ದರ್ಗಾ ಚಿತ್ರಗಳನ್ನು ತೆಗೆದುಕೊಂಡಿದ್ದಾರೆ. ಕೋಮು ಸೌಹಾರ್ದತೆ ಈ ನೆಲದ ವೈಶಿಷ್ಟ್ಯವಾಗಿದೆ. ಇಂಥ ನೆಲದಲ್ಲಿ **ಮೊ**ಹಮ್ಮದಅಲಿ ಸಾಹೇಬರು ಹೌದೆನ್ನುವಂತೆ ಕೆಲಸ ಮಾಡಿದ್ದಾರೆ. ಜಾತಿ ಮತ ಪಂಥಗಳ ಭಾವನೆ ಕೆರಳಿಸದೆ, ಸರ್ವರನ್ನು ಸಮದೃಷ್ಟಿಯಿಂದ ನೋಡಿಕೊಂಡಿದ್ದಾರೆ. ಕೋಮು ಭಾವನೆ ಅವರ ಕೊನೆಯುಸಿರು ಎಳೆಯುವತನಕ ಬರಲಿಲ್ಲ. ಅತ್ಯಂತ ಮಹಾನ್ ಮೇಧಾವಿ ನಾಯಕರಾಗಿರುವ **ಮೊ**ಹಮ್ಮದಅಲಿ ಸಾಹೇಬರು ಮುಸ್ಲಿಂ ಲೀಗ ಪಕ್ಷದ ವಿರುದ್ಧ ಸೋತರು. ಹೀಗೆ ಸೋಲುವರೆಂಬ ಮಾತು ನಾನು ಚುನಾವಣಾ ಪೂರ್ವದಲ್ಲಿ ಹೇಳಿದ್ದೆ. ಅವರು ನಂಬಲಿಲ್ಲ. ಅದಕ್ಕೆ ಕಾರಣ ಅವರ ಬಲವಾದ ಆತ್ಮವಿಶ್ವಾಸ. ಅವರಿಂದ ಕೆಲಸ ಪಡೆದವರು ಮತ ಹಾಕಿದರೆ ಗೆಲ್ಲುತ್ತಿದ್ದರು. ಆದರೆ ಚುನಾವಣೆಯಲ್ಲಿ ಪ್ರಜಾಸತ್ತಾತ್ಮಕವಾದ ಗಾಳಿ ಬೀಸದೆ ಕೋಮು ಭಾವನೆಯುಂಟಾಗಿ ಮುಸ್ಲಿಂ ಲೀಗ ಅಭ್ಯರ್ಥಿಗೆ ಗೆಲುವಾಯಿತು. ಈ ಕೊರಗಿನಲ್ಲಿ ಅವರು ಕಾಲ ಕಳೆದು ಹೃದಯಾಘಾತಕ್ಕೆ ಒಳಗಾದರು. ಆಗ ನಾನು ಮತ್ತು ದಿವಂಗತ ಬಾಪುಗೌಡ ದರ್ಶನಾಪೂರ ಅವರು ಅವರ ಅಂತಿಮ ಸಂಸ್ಕಾರದಲ್ಲಿ ಭಾಗವಹಿಸಿದ ಕಲಬುರ್ಗಿ ಜಿಲ್ಲೆಯ ಮೊದಲಿಗರಾಗಿದ್ದೇವು.

**- ಸಿದ್ರಾಮಪ್ಪ ಪಾಟೀಲ ಧಂಗಾಪೂರ**
ಕೃಷಿ ಸಮಾಜದ ಮುಖಂಡರು ಗುಲಬರ್ಗಾ

ಮೊಹಮ್ಮದ ಅಲಿ ಸಾಹೇಬರು ಒಬ್ಬ ಒಳ್ಳೆಯ ಮನುಷ್ಯ. ಅವರು ಒಳ್ಳೆಯ ವ್ಯಕ್ತಿಯೆಂದು ಇಡಿ ಕಲಬುರ್ಗಿ ಜಿಲ್ಲೆ ಹೇಳುತ್ತಿತ್ತು. ಜಾತ್ಯಾತೀತ ಮನೋಭಾವನೆಯುಳ್ಳವರು. ರಾಷ್ಟ್ರೀಯವಾದಿಯಾಗಿದ್ದರು. ಸಾಮಾಜಿಕ ಕಳಕಳಿಯಿತ್ತು. ಜನಾಂಗ ಬೆಳೆದು ಸಮೃದ್ಧಿಯಾಗಿರಬೇಕೆಂಬ ಭಾವನೆ ಹೊಂದಿದ್ದರು. ಈ ಜಿಲ್ಲೆಯ ಮತ್ತು ಭಾಗದ ಎಲ್ಲ ವರ್ಗದ ಜನತೆಗೆ ಅವರ ಸೇವೆ ಸಂದಿದೆ. ಆಡು ಮುಟ್ಟದ ಗಿಡವಿಲ್ಲ, ಮೊಹಮ್ಮದ ಅಲಿ ಅವರಿಂದ ಸಹಾಯ ಪಡೆಯದ ಮನುಷ್ಯನಿಲ್ಲ ಎನ್ನುವಷ್ಟರ ಮಟ್ಟಿಗೆ ಜನ ಜನಿತವಾದವರು. ಸರಳ ಜೀವಿ, ಎಲ್ಲರೊಂದಿಗೆ ಬೆರೆಯುವ ಸಾದಾತನ, ಸದಾ ಸುಖಿ ಹಸನ್ಮುಖಿ ಕಳೆ, ನಗುತ್ತ-ನಗಿಸುತ್ತ ಬದುಕಿದವರು. ಮೌಲಿಕವಾದ ವಿಚಾರವುಳ್ಳ ತೂಕದ ವ್ಯಕ್ತಿಯಾಗಿದ್ದರು. ಸಣ್ಣತನ, ಸ್ವಾರ್ಥ ಭಾವನೆಗಳು ಅವರ ಸಮೀಪಕ್ಕೆ ಸುಳಿಯಲಿಲ್ಲ. ಸಾಮಾನ್ಯ ಮನುಷ್ಯರಿಗೂ ಗೌರ ಭಾವನೆಯಿಂದ ನೋಡುತ್ತಿದ್ದರು. ತತ್ವನಿಷ್ಠ ರಾಜಕಾರಣಿಗಳಾದ ಅವರು ಜನಪರ ಕಾಳಜಿ ಹೊಂದಿದ್ದರು. ಅವರು ಮುಸ್ಲಿಂ ಆಗಿದ್ದರೂ, ಬಹುಪಾಲು ಜನ ಸ್ನೇಹಿತರೆಲ್ಲ ಹಿಂದೂಗಳೇ ಇದ್ದರು. ಸ್ನೇಹ ಜೀವಿಯಾಗಿರುವ ಮೊಹಮ್ಮದ ಅಲಿ ಸಾಹೇಬರು ಅಪಾರವಾದ ಮಿತ್ರ ಬಳಗವನ್ನು ಹೊಂದಿದ್ದರು. ಅವರು ಕಣ್ಮರೆಯಾದರೂ ನೆನಪು ಮಾತ್ರ ಉಳಿಯುವಂತೆ ಮಾಡಿದ ಹಿರಿಯ ರಾಜಕಾರಣಿಯಾಗಿದ್ದರು.

**- ಲಕ್ಷ್ಮಣರಾವ ಗೋಗಿ**

ಹಿರಿಯ ಸಮಾಜ ಸೇವಕರು, ಗುಲ್ಬರ್ಗಾ

ನೇಮಕಾತಿಯಿರಲಿ, ವರ್ಗಾವಣೆಯಿರಲಿ, ಪ್ರಮೋಷನ ಇರಲಿ, ಯಾವುದೇ ಕೆಲಸ ತೆಗೆದುಕೊಂಡು ಹೋದರೂ ಇಲ್ಲವೆನ್ನುತ್ತಿರಲಿಲ್ಲ. ಸಮಾಧಾನದಿಂಧ ಸಮಸ್ಯೆಯನ್ನು ಆಲಿಸಿ ಸೂಕ್ತ ಪರಿಹಾರ ಸೂಚಿಸುತ್ತಿದ್ದರು. ಯಾವುದೇ ವಿಷಯವಿರಲಿ, ಅದು ಅವರ ಆಪ್ತ ಕಾರ್ಯದರ್ಶಿಯಿಂದ ಬರೆಯಿಸಿ ಟಿಪ್ಪಣಿ ಮಾಡಿಕೊಳ್ಳಲು ಹೇಳುತ್ತಿದ್ದರು. ಒಮ್ಮೊಮ್ಮೆ ಆ ಕೆಲಸವಾಗದೆಯಿದ್ದಾಗ ಎರಡು ಮೂರು ಬಾರಿ ಭೆಟ್ಟಿಯಾಗಿ ಹೇಳಬೇಕಾಗುತ್ತಿತ್ತು. ಆದರೂ ಬೇಸರಿಸಿಕೊಳ್ಳದೆ ಮತ್ತೊಮ್ಮೆ ಟಿಪ್ಪಣಿ ಮಾಡಿಕೊಳ್ಳುತ್ತಿದ್ದರು. ಕೊನೆಗೆ ಕೆಲಸವಾಗುತ್ತಿತ್ತು. ಮಹಮ್ಮದ ಅಲಿ ಸಾಹೇಬರಿಗೆ ಭೆಟ್ಟಿಯಾದರೆ ಕೆಲಸವಾಗುತ್ತದೆಯೆಂಬ ಭಾವನೆ ಜನರಲ್ಲಿ ಬಂದು ಬಿಟ್ಟಿತ್ತು. ಹೀಗಾಗಿ ಕೊನೆಯ ಅಸ್ತ್ರ ಮಹಮ್ಮದಲಿ ಸಾಹೇಬರಾಗಿದ್ದರು. ಕಲಬುರ್ಗಿ ನಗರ ಸಮಸ್ಯೆಗಳ ಸಾಗರ. ಎಷ್ಟು ಕೆಲಸ ಮಾಡಿದರೂ ಕಡಿಮೆ. ಇಲ್ಲಿ ಬಡತನ ಹಸಿವೆ ಬಹಳಷ್ಟು ಇದ್ದ ಕಾರಣ, ಇಲ್ಲಿಯ

ರಾಜಕಾರಣಿಗಳು ಒಮ್ಮೊಮ್ಮೆ ಅಭಿವೃದ್ಧಿ ಕೆಲಸಕ್ಕಿಂತ ಹೆಚ್ಚಾಗಿ ಜನರಿಗೆ ಹಣ ಕೊಡುವ ಪ್ರಸಂಗಗಳೂ ಉಂಟು. ಎಷ್ಟೋ ಬಾರಿ ಬಡವರಿಗೆ ಹೀಗೆ ಉದಾರ ನೆರವು ನೀಡಿ, ಅವರಿಗೆ ಊಟ ಮಾಡಿಸಿ, ಬಟ್ಟೆ ಕೊಟ್ಟು ಸಹಾಯ ಮಾಡಬೇಕಾದ ಅಪರೂಪದ ಪ್ರಸಂಗಗಳುಂಟಾಗಿವೆ. ಮದುವೆಗೆ ಮುಂಜಿವೆಗೆ ಸಹಾಯ ಮಾಡಬೇಕಾಗುತ್ತದೆ. ಮೊಹಮ್ಮದ ಅಲಿ ಸಾಹೇಬರಿಗೆ ಈ ಅನುಭವವಿರುವುದರಿಂದ ಯಾರಿಗೆ, ಹೇಗೆ ಸಹಾಯ ಮಾಡಬೇಕು ಹಾಗೆ ಮಾಡಿ, ಜನಮನ ಗೆದ್ದ ಜನನಾಯಕರಾಗಿದ್ದರು. ನನಗೆ ಬಡ್ತಿ ದೊರೆಯಬೇಕಾದ ಸಂದರ್ಭದಲ್ಲಿ ಅವರ ನೆರವು ಕಾನೂನು ಚೌಕಟ್ಟಿನಲ್ಲಿಯೇ ಪಡೆದಿದ್ದು ನಾನಿನ್ನೂ ಮರೆತಿಲ್ಲ.

**- ವೀರಭದ್ರಪ್ಪ ತಳವಡೆ**

ನಿವೃತ್ತ ಎ.ಐ.ಜಿ.ಪಿ. ಗುಲಬರ್ಗಾ

ಸಕಲ ಜೀವಾತ್ಮರಿಗೆ ಲೇಸನೇ ಬಯಸುವುದೇ ಕೂಡಲ ಸಂಗನ ಶರಣರ ಧರ್ಮವೆನ್ನುವಂತೆ, ಮೊಹಮ್ಮದ ಅಲಿ ಸಾಹೇಬರು ಎಲ್ಲ ಜನತೆಗೆ ಹಿತವನ್ನು ಬಯಸಿದವರು. ನಮ್ಮವರು ತಮ್ಮವರು ಎಂಬ ಬೇಧ- ಭಾವವಿಲ್ಲದವರು. ಜಾತಿ ಮತ ಕೋಮು ಭಾವನೆಯಿಂದ ದೂರ ಉಳಿದವರು. ಅವರು ಜಾತ್ಯಾತೀತ ನಾಯಕರು. ಅತ್ಯಂತ ಉನ್ನತ ಮಟ್ಟದ ಶ್ರೇಷ್ಠ ರಾಜಕಾರಣಿಯಾಗಿದ್ದರು. ಕಲಬುರ್ಗಿ ಜಿಲ್ಲೆಗೆ ಹೂವು ತಂದವರು. ಬಡವರಪರವಾಗಿದ್ದರು. ಉಳ್ಳವರ-ಇಲ್ಲದವರ ನಡುವಿನ ಅಂತರವನ್ನು ಸ್ಪಷ್ಟವಾಗಿ ತಿಳಿದಿದ್ದರು. ಹೀಗಾಗಿ ಎಲ್ಲ ವರ್ಗ - ವರ್ಗದ ಜನರು ಅವರನ್ನು ಪ್ರೀತಿಸುತ್ತಿದ್ದರು. ಸಾರಿಗೆ ಹಾಗೂ ಪ್ರವಾಸೋದ್ಯಮ ಸಚಿವರಾಗಿ ಅವರು ಸಲ್ಲಿಸಿದ ಸೇವೆ ಶ್ಲಾಘನೀಯ. ರಸ್ತೆ, ಬಸ ನಿಲ್ದಾಣ, ಪ್ರವಾಸಿ ತಾಣಗಳು ಲೆಕ್ಕವಿಲ್ಲದಷ್ಟು ಅಭಿವೃದ್ಧಿಪಡಿಸಿದ್ದಾರೆ. ಅವರು ಹಾಕಿದ ಯೋಜನೆಗಳು ಮುಗಿದರೆ ಕರ್ನಾಟಕ ಸಾರಿಗೆ ಇಲಾಖೆ ಸುವರ್ಣ ಇತಿಹಾಸ ನಿರ್ಮಿಸುತ್ತದೆ. ಆ ರೀತಿಯಲ್ಲಿ ಕೆಲಸ ಮಾಡಿದ ಹಿರಿಯ ರಾಜಕಾರಣಿಗಳವರು. ಅವರನ್ನು ಕುರಿತು ಪುಸ್ತಕ ಹೊರಬರುತ್ತಿರುವುದು ಸ್ತುತ್ಯ ಕಾರ್ಯವಾಗಿದೆ.

**- ಎಸ್. ಬಸವರಾಜ**

ನಿವೃತ್ತ ಎಸ್.ಪಿ., ಗುಲಬರ್ಗಾ

ಕಾಂಗ್ರೆಸ್ ಪಕ್ಷಕ್ಕೆ ಭದ್ರ ಬುನಾದಿ ಹಾಕಿದವರೆ ಮಹಮ್ಮದಲಿ ಸಾಹೇಬರು. ಅವರೊಬ್ಬ ಸಂಘಟನಾ ಚತುರರಾಗಿದ್ದರು. ತಾಲೂಕೂ ಹಾಗೂ ಬ್ಲಾಕ್ ಮಟ್ಟದಲ್ಲಿ ಒಳ್ಳೆಯ ಕಾರ್ಯಕರ್ತರನ್ನು ಬೆಳೆಯಿಸಿದ್ದರು. ಪಕ್ಷದ ಕಾರ್ಯಕರ್ತರಿಗೆ ಗೌರವ ಭಾವದಿಂದ ಕಾಣುತ್ತಿದ್ದರು. ಅವರಿಗೆ ರಾಜಕೀಯ ಸೌಲತ್ತುಗಳನ್ನು ಒದಗಿಸಿಕೊಡುತ್ತಿದ್ದರು. ಎಲ್ಲವೂ ನನಗೇ ಬೇಕೆಂಬ ಹಪಾಹಪಿತನ ಅವರಲ್ಲಿರಲಿಲ್ಲ. ಹರಿದುಕೊಂಡು ತಿನ್ನುವುದಕ್ಕಿಂತ ಹಂಚಿಕೊಂಡು ತಿನ್ನುವ ಭಾವ ಅವರದು. ಸರ್ವರಿಗೆ ಸಮಪಾಲು ಸರ್ವರಿಗೆ ಸಮಬಾಳು ದೊರೆಯಬೇಕೆಂಬುದು ಅವರ ಭಾವನೆಯಾಗಿತ್ತು. ಅವರಿಗೆ ಗಂಡು ಮಕ್ಕಳಿರಲಿಲ್ಲ. ಒಬ್ಬ ಪುತ್ರಿಯಿರುವುದರಿಂದ ಹೆಚ್ಚಿಗೆ ಆಸ್ತಿ ಮಾಡಬೇಕೆನ್ನುವ ಭಾವನೆಯಿರಲಿಲ್ಲ. ಹಣದ ಆಸೆ, ಆಮಿಷಕ್ಕೆ ಎಂದೂ ಬಲಿ ಬೀಳಲಿಲ್ಲ. ಹೀಗಾಗಿ ಒಬ್ಬ ಗಂಭೀರ ರಾಜಕಾರಣಿಯಾಗಿ ಸಮಾಜ ಸೇವಕರಾಗಿ, ಸರ್ವೇಜನಾ ಸುಖಿನೋ ಭವಂತು ಎನ್ನುವ ರೀತಿಯಲ್ಲಿ ಸೇವೆ ಸಲ್ಲಿಸಿದವರು. ಅವರ ಸೇವೆ ಸ್ಮರಣೀಯ ಮತ್ತು ಅನುಕರಣೀಯ.

**- ಗುರುಶಾಂತಪ್ಪ ಪಾಟೀಲ**
ಸ್ವಾತಂತ್ರ್ಯ ವೀರ ಯೋಧರು





ಎಸ್. ನಿಜಲಿಂಗಪ್ಪನವರೊಂದಿಗೆ ಮೊಹಮದ್ ಅಲಿ



ಕ್ರಿಶನ್ ಚಂದರ್, ಫಕ್ರುದ್ದೀನ್ ಅಲಿ ಅಹಮದ್, ಮೊಹಮದ್ ಅಲಿ



ಇಂದಿರಾಗಾಂಧಿಯವರಿಗೆ ಸ್ವಾಗತ



ರಫಿಕ್ ಜಖಾರಿಯಾ ಜೊತೆ





ಡಿ. ದೇವರಾಜ ಅರಸ್, ಮೋಹನ್ ಲಾಲ್ ಸುಖಾರಿಯಾ ಈವಾವಾಜ್,
ಮನೋರಮಾ ಮಧ್ವರಾಜ್, ಆರ್. ಗುಂಡುರಾವ್ ಮತ್ತಿತರೊಂದಿಗೆ



ಸಚಿವರಾಗಿ ಪ್ರಮಾಣವಚನ ರಾಜ್ಯಪಾಲರಿಂದ



ಮಾಜಿ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿಯರೊಂದಿಗೆ



ರಾಜ್ಯಪಾಲರಿಂದ ಪ್ರಮಾಣವಚನ ಸ್ವೀಕಾರ





ದೇಶದ ಶ್ರೇಷ್ಠನಾಯಕರಾದ ಕಾಮರಾಜ್ ನಾಡಾರ್ ಮತ್ತು
ಲಾಲಬಹುದ್ದೂರ್ ಶಾಸ್ತ್ರೀ, ಗುಲ್ಜಾರಿಲಾಲ್ ನಂದಾ ಅವರೊಂದಿಗೆ



ಲಾಲ್ ಬಹುದ್ದೂರ್ ಶಾಸ್ತ್ರಿ, ಗುಲ್ಜಾರಿಲಾಲ್ ನಂದಾ ಅವರೊಂದಿಗೆ



ಹೈದ್ರಾಬಾದ್ ವಿಧಾನ ಸಭಾ ಸದಸ್ಯರೊಂದಿಗೆ







ಪತ್ನಿ, ವಹಿಮನ್ನೀಸಾಬೇಗಂ ಹಾಗೂ ಪುತ್ರಿ ಶಹನಾಜ್ ರೆಹಾನಾ



ಮಗಳ ಮದುವೆಯಲ್ಲಿ ಮೊಹಮದ್ ಅಲಿ

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ ಎನ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20.00 |
| 2. | ಎಸ್. ನಿಜಲಿಂಗಪ್ಪ | ಡಾ|| ಸಂದೀಪ್ ಶಾಸ್ತ್ರಿ | 15.00 |
| 3. | ಶಾಂತವೇರಿ ಗೋಪಾಲ ಗೌಡ | ಪ್ರೊ|| ಎನ್.ಬಿ. ಪಂಗಣ್ಣಾಯ್ಯ | 15.00 |
| 4. | ವೈಕುಂಠ ಬಾಳಿಗಾ | ಡಾ|| ಪಿ. ಜೀವನ್ ಕುಮಾರ್ | 20.00 |
| 5. | ವೀರೇಂದ್ರ ಪಾಟೀಲ್ | ಡಾ|| ಎಸ್.ಹೆಚ್. ಕವಂಟೆ ಹಾಗೂ ಇತರರು | 20.00 |
| 6. | ಕಡಿದಾಳ್ ಮಂಜಪ್ಪ | ಡಾ|| ಎಸ್.ಹೆಚ್. ಕವಂಟೆ ಹಾಗೂ ಇತರರು | 15.00 |
| 7. | ಜಿ.ವಿ. ಹಳ್ಳಿಕೇರಿ | ಡಾ|| ಆರ್.ಎಂ.ಎಲ್. ಪಾಟೀಲ್ | 15.00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ|| ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15.00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15.00 |
| 10. | ಕೆ.ಟಿ. ಭಾಷ್ಯಂ | ಡಾ|| ವಿಘ್ನೇಶ್ ಎನ್. ಭಟ್ | 15.00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15.00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20.00 |
| 13. | ಜಗಳೂರು ಇಮಾಂ | ಜಿ.ಎಸ್. ಸದಾನಂದ | 15.00 |
| 14. | ಕೆ.ಸಿ. ರೆಡ್ಡಿ | ಡಾ|| ಸಂಧ್ಯಾರೆಡ್ಡಿ | 20.00 |
| 15. | ಬಿ.ವಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20.00 |

| | | | |
|---|---|---|---|
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ॥ ಬಿ.ಎನ್. ಚಂದ್ರಯ್ಯ | 20.00 |
| 17. | ಬಿ. ರಾಚಯ್ಯ | ನಂಜಯ್ಯ ಹೊಂಗನೂರ್ | 20.00 |
| 18. | ಎಂ. ನಾಗಪ್ಪ | ಡಾ॥ ಎಂ.ಎಸ್. ಪಾಟೀಲ್ | 15.00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ॥ ಹೆಚ್.ಎಂ. ಪಂಚಾಕ್ಷರಯ್ಯ | 15.00 |
| 20. | ಗಂಗಾಧರ್ ನಮೋಶಿ | ಡಾ॥ ಕವಂಟೆ ಹಾಗೂ ಇತರರು | 15.00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15.00 |
| 22. | ಆರ್. ಗುಂಡೂರಾವ್ | ಈಶ್ವರ ದೈ ತೋಟ | 20.00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15.00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15.00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15.00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30.00 |
| 27. | ಬಿ.ಎಲ್. ಸುಬ್ಬಮ್ಮ | ಡಾ॥ ಡಿ.ಎಸ್. ಜಯಪ್ಪಗೌಡ | 15.00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20.00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವರ್ಣೇಕರ್ | 20.00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಉಷಾ ಹಾರೋಗದ್ದೆನಾಯಕ್ | 20.00 |
| 31. | ಎಸ್. ಶಿವಪ್ಪ | ಕೂಡ್ಲಿಗೆರೆ ಮಲ್ಲಿಕಾರ್ಜುನ | 30.00 |
| 32. | ಕಾಗೋಡು ಚಳವಳಿ | ಕೂಡ್ಲಿಗೆರೆ ಮಲ್ಲಿಕಾರ್ಜುನ | 15.00 |
| 33. | ಕೆ.ವಿ. ಶಂಕರಗೌಡ | ಜಗದೀಶ ಕೊಪ್ಪ | 20.00 |
| 34. | ಟಿ.ಎನ್. ನರಸಿಂಹಮೂರ್ತಿ | ಕೆ.ಜೆ. ಸುರೇಶ್ | 25.00 |
| 35. | ಎಸ್.ಆರ್. ಕಂಠಿ | ಮನು ಬಳಿಗಾರ್ | 30.00 |
| 36. | ಎಸ್.ಸಿ. ಮಲ್ಲಯ್ಯ | ಡಾ॥ ಟಿ.ಸಿ. ಪೂರ್ಣಿಮ | 20.00 |
| 37. | ಅಬ್ದುಲ್ ನಜೀರ್‌ಸಾಬ್ | ಮನು ಬಳಿಗಾರ್ | 30.00 |

| | | | |
|---|---|---|---|
| 38. | ಪಿ.ಎಂ. ನಾಡಗೌಡ | ಗಂಗಾಧರಯ್ಯ ಹಿರೇಮಠ | 30.00 |
| 39. | ಕೆ. ಪಟ್ಟಾಭಿರಾಮನ್ | ಸಂಜಯ್ ದೊರೆ | 20.00 |
| 40. | ಎಂ.ಎಸ್.ಕೃಷ್ಣನ್ | ಹೆಚ್.ಕೆ. ಬಾಲಸೂರಿ | 20.00 |
| 41. | ಎಂ.ವಿ. ಕೃಷ್ಣಪ್ಪ | ಜೆ.ಜಿ. ನಾಗರಾಜ್ | 15.00 |
| 42. | ಕೆ.ಎಚ್. ರಂಗನಾಥ್ | ಎಲ್.ಎನ್. ಮುಕುಂದರಾಜ್ | 20–00 |
| 43. | ರಾಮಕೃಷ್ಣ ಹೆಗಡೆ | ಶೂದ್ರ ಶ್ರೀನಿವಾಸ್ | 20–00 |
| 44. | ಸಿ. ಬೈರೇಗೌಡ | ಪ್ರಹ್ಲಾದರಾವ್ | 20–00 |
| 45. | ಎಸ್.ಎಂ. ಯಾಹ್ಯಾ | ಬಿ.ಎಂ. ಹನೀಫ್ | 20–00 |
| 46. | ಬಾಪುಗೌಡ ದರ್ಶನಾಪುರ | ಗಂಗಾಧರಯ್ಯ ಹಿರೇಮಠ | 20–00 |
| 47. | ಡಾ॥ ಎಚ್. ನರಸಿಂಹಯ್ಯ | ಪ್ರೊ. ಗಂಗಾಧರ ಮೂರ್ತಿ | 20–00 |
| 48. | ಕರ್ನಾಟಕ ಏಕೀಕರಣ ಮತ್ತು ನಾಮಕರಣ | ಡಾ. ಸಿ.ಆರ್. ಗೋವಿಂದರಾಜ್ | 15–00 |
| 49. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–1 | ಡಾ. ಎಂ.ಜಿ. ನಾಗರಾಜ್ | 15–00 |
| 50. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–2 | ಡಾ. ಎಂ.ಜಿ. ನಾಗರಾಜ್ | 20–00 |

## ಭಾಷಾಂತರ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಡಾ|| ಬಿ.ಆರ್. ಅಂಬೇಡ್ಕರ್ | ಭಾಷಾಂತರ ನಿರ್ದೇಶನಾಲಯ | 20.00 |
| 2. | ಡಾ|| ರಾಂ ಮನೋಹರ ಲೋಹಿಯಾ | ಭಾಷಾಂತರ ನಿರ್ದೇಶನಾಲಯ | 15.00 |
| 3. | ವಿ.ಕೆ. ಕೃಷ್ಣಮೆನನ್ | ರಾಜ್ಯ ಭಾಷಾ ಆಯೋಗದ ಅಧ್ಯಕ್ಷರು | 20.00 |
| 4. | ಡಾ|| ಶ್ಯಾಂಪ್ರಸಾದ್ ಮುಖರ್ಜಿ | ಭಾಷಾಂತರ ನಿರ್ದೇಶನಾಲಯ | 20.00 |
| 5. | ಶೇಕ್ ಮಹಮದ್ ಅಬ್ದುಲ್ಲಾ | ಭಾಷಾಂತರ ನಿರ್ದೇಶನಾಲಯ | 15.00 |
| 6. | ಡಾ|| ರಾಜೇಂದ್ರ ಪ್ರಸಾದ್ | ಆರ್.ಕೆ. ಹುಡುಗಿ | 20.00 |
| 7. | ಭೂಪೇಶ್ ಗುಪ್ತ | ಆರ್.ಕೆ. ಹುಡುಗಿ | 20.00 |
| 8. | ಅನಂತಶಯನಂ ಅಯ್ಯಂಗಾರ್ | ಭಾಷಾಂತರ ನಿರ್ದೇಶನಾಲಯ | 15.00 |
| 9. | ರಾಜಕುಮಾರಿ ಅಮೃತ್‌ಕೌರ್ | ಕೆ.ಹೆಚ್. ಸಾವಿತ್ರಿ | 20.00 |
| 10. | ಡಾ|| ಚಿಂತಾಮನ್ ಡಿ. ದೇಶಮುಖ್ | ಬೇಳೂರು ಸುದರ್ಶನ್ | 20.00 |
| 11. | ಪನಂಪಿಲ್ಲಿ ಗೋವಿಂದ ಮೆನನ್ | ಭಾಷಾಂತರ ನಿರ್ದೇಶಕನಾಲಯ | 15.00 |
| 12. | ಜೈ ಸುಖಲಾಲ್ ಹಾಥಿ | ಎಸ್. ಸುಮಿತ್ರ | 15.00 |
| 13. | ಎಸ್.ಎಂ. ಜೋಷಿ | ಕೆ.ಹೆಚ್. ಸಾವಿತ್ರಿ | 15.00 |
| 14. | ಡಾ|| ಲಂಕಾ ಸುಂದರಂ | ಜವರಯ್ಯ | 15.00 |